# ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

ಕನ್ನಡ ಎಂ.ಫಿಲ್. ಪದವಿಯ ಭಾಗವಾಗಿ ಸಾದರಪಡಿಸಿದ ಸಂಪ್ರಬಂಧ

## "ಬೇರೆ ಬೇರೆ ಕ್ಷೇತ್ರಗಳಲ್ಲಿ ಕನ್ನಡ ಬಳಕೆ"


ನಿಬಂಧಕಾರರು

ಸಂಧ್ಯಾರಾಣಿ ಎಂ.ಎಸ್.

**ಕನ್ನಡ ಎಂ.ಫಿಲ್**

ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು.

ಮಾರ್ಗದರ್ಶಕರು

ಡಾ. ಬಿ.ನಂ. ಚಂದ್ರಯ್ಯ

ನಿವೃತ್ತ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ

ಮೈಸೂರು





ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

# ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

ಕನ್ನಡ ಎಂ.ಫಿಲ್. ಪದವಿಯ ಭಾಗವಾಗಿ ಸಾದರಪಡಿಸಿದ ಸಂಪ್ರಬಂಧ

## "ಬೇರೆ ಬೇರೆ ಕ್ಷೇತ್ರಗಳಲ್ಲಿ ಕನ್ನಡ ಬಳಕೆ"


ನಿಬಂಧಕಾರರು

ಸಂಧ್ಯಾರಾಣಿ ಎಂ.ಎಸ್.

**ಕನ್ನಡ ಎಂ.ಫಿಲ್**

ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು.

ಮಾರ್ಗದರ್ಶಕರು

ಡಾ. ಬಿ.ನಂ. ಚಂದ್ರಯ್ಯ

ನಿವೃತ್ತ ಪ್ರಾಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ

ಮೈಸೂರು



ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕನ್ನಡ ಎಂ.ಫಿಲ್. ಪದವಿಯ ವಿದ್ಯಾರ್ಥಿನಿಯಾದ **ಸಂಧ್ಯಾರಾಣಿ ಎಂ.ಎಸ್.** ಯವರು ನನ್ನ ಮಾರ್ಗದರ್ಶನದಲ್ಲಿ **"ಬೇರೆ-ಬೇರೆ ಕ್ಷೇತ್ರಗಳಲ್ಲಿ ಕನ್ನಡ ಬಳಕೆ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಧೃಡೀಕರಿಸುತ್ತೇನೆ.

ಮಾರ್ಗದರ್ಶಕರು
ನಿವೃತ್ತ ಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

ದಿನಾಂಕ : 2.8.2008

ಸ್ಥಳ : ಮೈಸೂರು

# ಅಭ್ಯರ್ಥಿಯ ಘೋಷಣಾ ಪತ್ರ

ಡಾ. ಬಿ.ನಂ. ಚಂದ್ರಯ್ಯ, ನಿವೃತ್ತ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.ಇವರ ಮಾರ್ಗದರ್ಶನದಲ್ಲಿ **"ಬೇರೆ-ಬೇರೆ ಕ್ಷೇತ್ರಗಳಲ್ಲಿ ಕನ್ನಡ ಬಳಕೆ"** ಎಂಬ ವಿಷಯದ ಬಗ್ಗೆ ನಡೆಸಿದ ಅಧ್ಯಯನದ ಫಲವೇ ಈ ಸಂಪ್ರಬಂಧ.

ಈ ಸಂಪ್ರಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಧೃಡೀಕರಿಸುತ್ತೇನೆ.

ಸಂಧ್ಯಾರಾಣಿ ಎಂ.ಎಸ್.

ನಿಬಂಧಕಾರರು

**ಕನ್ನಡ ಎಂ.ಫಿಲ್**

ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ

ಮೈಸೂರು

ದಿನಾಂಕ : 2/8/2008

ಸ್ಥಳ : ಮೈಸೂರು

# ಬೇರೆ-ಬೇರೆ ಕ್ಷೇತ್ರಗಳಲ್ಲಿ ಕನ್ನಡ ಬಳಕೆ

## ಪರಿವಿಡಿ

# ಅನುಬಂಧ



* * *

# ಬೇರೆ - ಬೇರೆ ಕ್ಷೇತ್ರಗಳಲ್ಲಿ ಕನ್ನಡ ಬಳಕೆ

## ಅಧ್ಯಾಯ - ೧

### ಭಾಷೆ

ಭಾಷೆಯನ್ನು ಸೂತ್ರ ಬದ್ಧವಾಗಿ ವ್ಯಾಖ್ಯಾನ ಮಾಡುವುದು ಬಹಳ ಕಷ್ಟದ ಕೆಲಸ. ''ಶಬ್ದಬಾರಾಮಾರ್ಗಂ ಅಶಕ್ಯಂ'' ಎಂಬ ಕೇಶೀರಾಜನ ಮಾತು ಇದನ್ನು ಧೃಡಪಡಿಸುತ್ತದೆ. ನಮ್ಮ ಪ್ರಾಚೀನರಿಗೆ ಭಾಷೆಯ ಮಹತ್ವದ ಬಗೆಗೆ ಸಾಕಷ್ಟು ಅರಿವು ಇತ್ತು. ''ಪುರುಷಸ್ಯ ವಾಕ್‌ರಸ: "(ಮಾತು ಮಾನವನ ರಸ) ಛಾಂದೋಗ್ಯ ಉಪನಿಷತ್ತಿನಲ್ಲಿ ಬಂದಿದೆ. ಸಂಸ್ಕೃತದ ವಯ್ಯಾಕರಣಿ 'ಪಾಣಿನಿ' ಮನುಷ್ಯನನ್ನು 'ವ್ಯಕ್ತವಾಕ್' (ಮಾತಿನಿಂದ ವ್ಯಕ್ತಗೊಳಿಸುವವನು) ಎಂದಿದ್ದಾನೆ. ಭರತ ತನ್ನ ನಾಟ್ಯಶಾಸ್ತ್ರದಲ್ಲಿ "ವಾಕ್ ಹೀ ಸರ್ವಸ್ಯ ಕಾರಣಂ" (ಮಾತೆ ಎಲ್ಲದಕ್ಕೂ ಕಾರಣೀಭೂತ) ಎಂದಿದ್ದಾನೆ. 'ಅಲ್ಲಮ್ಮ' "ಮಾತೆಂಬುದು ಜ್ಯೋತಿರ್ಲಿಂಗ" ಎಂದು ಹೇಳಿ ಮಾತನ್ನು ಲಿಂಗಕ್ಕೆ ಹೋಲಿಸಿದ್ದಾನೆ.

ಭಾಷೆಯನ್ನು ಕುರಿತು ಆಧುನಿಕ ವಿದ್ವಾಂಸರು ಈ ಕೆಳಕಂಡಂತೆ ಅಭಿಪ್ರಾಯಿಸಿದ್ದಾರೆ. ಡಿ. ಸಸೂರ್ "ಭಾಷೆ ಎಂಬುದು ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಸಂಕೇತಗಳ ಒಂದು ವ್ಯವಸ್ಥೆ" ಎಂದಿದ್ದಾನೆ. "ಅನುಭವಗಳ ಅಭಿವ್ಯಕ್ತಿಯೇ ಭಾಷೆ" ಎಂದವನು ಐಸ್‌ಲರ್. ಮಾರ್ಟೆ "ಒಂದು ಚಿತ್ತ ವೃತ್ತಿಯನ್ನು ವ್ಯಕ್ತಪಡಿಸಲು ಮಾಡುವ ಉದ್ದೇಶ ಪೂರ್ವಕ ಧ್ವನಿಗಳ ಉಚ್ಚಾರಣೆ" ಎಂದರೆ, "ಸ್ವಪ್ರೇರಣೆಯಿಂದ ಸಂಕೇತಗಳ ಒಂದು ವ್ಯವಸ್ಥೆಯ ಮೂಲಕ ವ್ಯಕ್ತಿ ಅಭಿಪ್ರಾಯ, ಭಾವನೆಗಳನ್ನು,ಇಷ್ಟಗಳನ್ನು ತಿಳಿಸಲು ಮನುಷ್ಯನಿಗೆ ಇರುವ ವಿಶಿಷ್ಟವಾದ ಸಾಧನ ಭಾಷೆ" ಎಂದು ಸಫೀರ್ ಅಭಿಪ್ರಾಯ ಪಟ್ಟಿದ್ದಾನೆ.

ಮೇಲಿನ ಹೇಳಿಕೆಗಳಿಂದಾಗಿ ಭಾಷೆ ಎಂಬುದು ವ್ಯವಸ್ಥೆ, ಉಚ್ಚರಿತ ಧ್ವನಿಗಳ ಸಂಕೇತ, ಯಾದೃಚ್ಛಿಕತೆ ಮತ್ತು ಸಾಮಾಜಿಕ ಸಹಕಾರವನ್ನುಂಟುಮಾಡುತ್ತದೆಂದು ಹೇಳಿದ್ದಾರೆ.

ಹಾಕೆಟ್ ಎಂಬ ಪ್ರಸಿದ್ಧ ಭಾಷಾ ವಿಜ್ಞಾನಿ ತನ್ನ "A course in modern Linguestics" ಕೃತಿಯಲ್ಲಿ "ದ್ವೈತ ಭಾವ, ಉತ್ಪಾದಕತೆ, ಯಾದೃಚ್ಛಿಕತೆ, ಸ್ಥಾನ ಪಲ್ಲಟ, ವಿಶಿಷ್ಟ ಪ್ರಾವಿಣ್ಯ, ಸಂಸ್ಕೃತಿ ವಾಹಕ ಮತ್ತು ವಿನಿಮಯ ಗುಣ"- ಇವು ಭಾಷೆಯ ಸ್ವರೂಪವನ್ನು ಹೇಳುತ್ತವೆ ಎಂದಿದ್ದಾರೆ. ಅಂತೆಯೆ ಭಾಷೆಯ ಮುಖ್ಯ ಲಕ್ಷಣಗಳಲ್ಲಿ "ಅನುಕರಣ, ಪ್ರಾಣಿ ಭಾಷೆಗಿಂತ ಭಿನ್ನ, ಸ್ವಯಾರ್ಜಿತ, ಸಮಾಜದ ಸ್ವತ್ತು, ನಿತ್ಯ ಪರಿವರ್ತನ ಶೀಲ, ಉತ್ಪಾದಕತ್ವ, ವಿಶಿಷ್ಟಕ್ರಮ, ಕ್ಲಿಷ್ಟತೆಯಿಂದ ಸರಳತೆಗೆ, ಭೌಗೋಳಿಕ ಚೌಕಟ್ಟು ಮತ್ತು ಸ್ವಯಂ ಇತಿಹಾಸವುಳ್ಳದ್ದು" ಎಂದು ಗುರುತಿಸಿದ್ದಾರೆ.

'ಭಾಷೆಯೆಂಬ ಬೆಳಕು ಬೆಳಗದಿರುತ್ತಿದ್ದರೆ ಲೋಕವೆಲ್ಲ ಕತ್ತಲೆಯಲ್ಲಿ ಮುಳುಗಿರುತ್ತಿತ್ತು' ಎಂದು ದಂಡಿ ಭಾಷೆಯ ಮಹತ್ವವನ್ನು, ಅದರ ಪರಿಣಾಮ ತೀವ್ರತೆಯನ್ನು ಅರ್ಥಪೂರ್ಣವಾಗಿ ವಿವರಿಸಿದ್ದಾನೆ. ಎಂತಲೇ 'ಮಾತೆಂಬುದು ಜ್ಯೋತಿರ್ಲಿಂಗ' ಎಂದು ಶರಣರೂ ಮಾತಿನ ದಿವ್ಯದೃಷ್ಟಿಯನ್ನು ಕುರಿತು ಪ್ರಸ್ತಾಪಿಸುತ್ತಾರೆ.

ಭಾಷೆ - ಮಾತು, ಈ ಲೋಕದ ಜೀವನಾಡಿ, ಲೋಕವ್ಯವಹಾರದ ದೈನಂದಿನ ಆಗು -ಹೋಗುಗಳಿಗೆ, ಚಟುವಟಿಕೆಗಳಿಗೆ ಭಾಷೆ ಮೂರ್ತ ಆಕಾರವನ್ನು ನೀಡುತ್ತದೆ. ಭಾವನೆ-ವಿಚಾರ-ಆಲೋಚನೆಗಳಿಗೆ ಸ್ಪಷ್ಟತೆಯನ್ನು ಕಲ್ಪಿಸುತ್ತದೆ. ವ್ಯವಹಾರಿಕ ಬದುಕೇ ಇರಲಿ, ವ್ಯಕ್ತಿ ಸಂಬಂಧಿಯಾದ ಬದುಕಾಗಿರಲಿ, ಅಥವಾ ಜ್ಞಾನ-ವಿಜ್ಞಾನ-ತಂತ್ರಜ್ಞಾನ ಪ್ರಮುಖವಾದ ಚಿಂತನಾತ್ಮಕ-ಜೀವನವಾಗಿರಲಿ - ಇಲ್ಲೆಲ್ಲ ಅರ್ಥಪೂರ್ಣವಾದ ಸಂಬಂಧ ಸಾಧ್ಯವಾಗುವುದೇ ಭಾಷೆಯೆಂಬ ಜೀವದ್ರವ್ಯದಿಂದ. ಆದುದರಿಂದ ನಾವೀಗ ಭಾಷೆಯ ಮಹತ್ವವನ್ನು ಪ್ರಸ್ತುತತೆಯನ್ನು ಅರಿತುಕೊಂಡು ಅದನ್ನು ನಮ್ಮ ನಿತ್ಯ ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದುದು ಅವಶ್ಯವಿದೆ.

---

೧. ಭಾಷೆ (ಶಾಲಿನಿ ರಘುನಾಥ್)- ಪು. ಸಂ. ೧

ಇದರಿಂದ ನಮ್ಮ ಬದುಕಿಗೆ ಸಾರ್ಥಕತೆ ಉಂಟಾಗುತ್ತದೆ; ಸಾಂಸ್ಕೃತಿಕ ಶ್ರೀಮಂತಿಕೆ ಪ್ರಾಪ್ತವಾಗುತ್ತದೆ.

ಭಾಷೆಯನ್ನು 'ಪ್ರಯೋಗ ಶೀಲ' ನೆಲೆಯಿಂದ ಅರ್ಥಮಾಡಿಕೊಂಡಷ್ಟೂ, ಅದರ ಒಳ ವಿವರಗಳನ್ನು, ಸೂಕ್ಷ್ಮತೆಗಳನ್ನು ಚೆನ್ನಾಗಿ ಅರಿತುಕೊಳ್ಳಲು ಸಾಧ್ಯವಾಗುತ್ತದೆ, ಎಂತಲೇ ಕನ್ನಡ ಭಾಷೆಯ ಚಲನ-ವಲನಗಳನ್ನು, ರಚನಾತ್ಮಕ ವೈಶಿಷ್ಟ್ಯಗಳನ್ನು, ವ್ಯವಹಾರಿಕ ಒಳನೋಟಗಳನ್ನು ಗಮನಿಸಬೇಕು.

ನಮ್ಮ ಭಾಷೆ, ನಮ್ಮ ನಾಡು, ನಮ್ಮ ನಾಡವರು ಎಂದಾಗ ನಾವು ಅವ್ಯಕ್ತವಾದಂತಹ ಒಂದು ಸೆಳೆತಕ್ಕೆ ಒಳಗಾಗುವುದು ಮಾನವ ಸಹಜ ಗುಣ. ನಮ್ಮ ಕನ್ನಡ ನಾಡು, ನುಡಿಗಳಿಗೆ ತನ್ನದೇ ಆದ ವಿಶಿಷ್ಟ ಪರಂಪರೆ ಇದೆ.

ಈ ನಾಡಿನಲ್ಲಿ ಹುಟ್ಟಿದ ಅಥವಾ ಈ ನಾಡಿನ ಬಗ್ಗೆ ಅಭಿಮಾನ ಪಡುವ ಎಲ್ಲರಿಗೂ ನಮ್ಮ ನಾಡಿನ-ನಮ್ಮ ನಾಡವರ- ನಮ್ಮ ಭಾಷೆಯ ಹಲವು ಹಿರಿಮೆ-ಗರಿಮೆ-ಸಾಧನೆ-ಸಂಪತ್ತುಗಳ ಬಗ್ಗೆ ತಿಳಿಯುವ ಅವಶ್ಯಕತೆ ಇದೆ.

ಮಾನವನಿಗೆ ಗಂಟಲು, ಮೂಗು, ನಾಲಿಗೆ, ತುಟಿ, ಹಲ್ಲುಗಳಿದ್ದದ್ದು ಮುಖ್ಯವಾಗಿ ಉಸಿರಾಟಕ್ಕೆ ಮತ್ತು ಆಹಾರ ಸೇವನೆಗೆ. ಆದರೆ ಅವುಗಳ ಉಪಕಾರ್ಯದಿಂದ ಅವನಿಗಾದ ಉಪಕಾರ ಅಷ್ಟಿಷ್ಟಲ್ಲ. ಮಾನವನ ಈ ಅಂಗಗಳನ್ನು ಉಪಯೋಗಿಸಿಕೊಂಡು ನಿರಂತರವಾಗಿ ಉಸಿರಾಡುವ ಗಾಳಿ, ಅಪರಿಮಿತ ಧ್ವನಿಗಳನ್ನು ಹುಟ್ಟಿಸುವ ಶಕ್ತಿಯನ್ನು ಪಡೆದಿದೆ. ಈ ಶಕ್ತಿಯೇ ಮಾನವನಿಗೆ ಅತಿದೊಡ್ಡ ವರವಾಯಿತು, ಕಾಮದೇನುವಾಯಿತು. ಅಂತೆಯೇ ಅವನು ತನ್ನ ಅವಶ್ಯಕತೆಗನುಗುಣವಾಗಿ ಅವುಗಳನ್ನು ಸದುಪಯೋಗ ಪಡಿಸಿಕೊಂಡ, ಈಗ ಜಗತ್ತಿನಲ್ಲಿ ಸುಮಾರು ನಾಲ್ಕು ಸಾವಿರಕ್ಕಿಂತಲೂ ಹೆಚ್ಚು ಭಾಷೆಗಳು ಇದ್ದಿರಬಹುದಾಗಿದೆ. ಮನುಷ್ಯನ ಧ್ವನ್ಯಂಗಗಳು ಹೊರಡಿಸಬಹುದಾದ ಧ್ವನಿಗಳು ಅಸಂಖ್ಯಾತವಿದ್ದರೂ ಪ್ರತಿಭಾಷೆಯೂ ಅವುಗಳಲ್ಲಿ ಸುಮಾರು ಇಪ್ಪತ್ತರಿಂದ ಎಪ್ಪತ್ತು ಧ್ವನಿಗಳನ್ನು ಆರಿಸಿಕೊಂಡು, ಅವುಗಳನ್ನು ತನಗೆ ಬೇಕಾದ ರೀತಿಯಲ್ಲಿ ಜೋಡಿಸಿಕೊಂಡು ಬಳಸಿಕೊಳ್ಳುತ್ತದೆ ಮತ್ತು ಇಂತಹ ಧ್ವನಿಗಳ ಮೊತ್ತಕ್ಕೆ ಇಂತಹುದೇ ಅರ್ಥ ಎಂಬುದನ್ನು ಸಾಂಪ್ರದಾಯಿಕವಾಗಿ ನಿರ್ಧರಿಸಿಕೊಂಡಿರುತ್ತದೆ.

ನಮ್ಮ ಪ್ರಾಚೀನ ಧಾರ್ಮಿಕ ಗ್ರಂಥಗಳೆಲ್ಲ ಬಹುತೇಕವಾಗಿ ಭಾಷೆ 'ದೈವದತ್ತ', 'ಅಮಾನುಷ ಕೃತ' ಎಂಬ ಭಾವನೆಯನ್ನೇ ತಾಳಿದ. ಆದರೆ ಯಾವುದೇ ಭಾಷೆ, ತನ್ನಿಂದ ತಾನೇ ಬರುವಂತಹುದಲ್ಲ, ಅದನ್ನು ಪ್ರಯತ್ನಪೂರ್ವಕವಾಗಿಯೇ ಕಲಿಯಬೇಕಾಗುತ್ತದೆ. ಧ್ವನಿಗಳನ್ನು ಉಚ್ಚರಿಸುವ ಶಕ್ತಿ ದೈವದತ್ತವಾದರೂ ಇಚ್ಛಾಶಕ್ತಿ ಇಲ್ಲದೆ ಮನುಷ್ಯ ಮಾತನಾಡಲಾರ. ಇನ್ನು, ಮೂಕರು, ಗೂರಲು ಕೆಮ್ಮಿನ ರೋಗವಿರುವವರು, ಧ್ವನ್ಯಂಗಗಳ ಊನತೆ ಇರುವವರು ಸ್ಪಷ್ಟವಾಗಿ ಮಾತನಾಡಲಾರರು ಎಂಬ ಕಾರಣದಿಂದ ಬೇಕಾದರೆ ಭಾಷೆ ದೈವದತ್ತ ಎಂದು ಹೇಳಬಹುದು.

ಕೆಲವರು ಭಾಷೆ ಅನುವಂಶಿಕ ಎನ್ನುತ್ತಾರೆ. ಮತ್ತೆ ಕೆಲವರು ಪರಿಸರ ಜನ್ಯ ಎನ್ನುತ್ತಾರೆ. ಆದರೆ ನಿಜವಾಗಿ ಭಾಷೆಯ ಉದ್ಭವಕ್ಕೆ ಅನುವಂಶಿಕ ಗುಣವೂ ಮುಖ್ಯವಲ್ಲ, ಪರಿಸರವೊಂದೇ ಪ್ರಮುಖ ಕಾರಣವಲ್ಲ. ಏಕೆಂದರೆ ಎಲ್ಲರೂ ಸಂಪೂರ್ಣವಾಗಿ ತಮ್ಮ ತಂದೆ - ತಾಯಿಗಳಂತೆ ಮಾತನಾಡುವುದಿಲ್ಲ. ಅವರಿಗೆ ಬಾರದಿದ್ದ ಭಾಷೆಯನ್ನು ಮಕ್ಕಳು ಕಲಿಯಬಹುದಾದ ಸಾಧ್ಯತೆ ಇದೆ. ಅದರಂತೆ ಮರಾಠಿ ಮಾತನಾಡುವವನು ಕರ್ನಾಟಕದಲ್ಲಿದ್ದರೆ, ಅವನಿಗೆ ಅವಶ್ಯಕತೆ ಇಲ್ಲದಿದ್ದರೆ ಕನ್ನಡವನ್ನು ಕಲಿಯದೇ ಇರಬಹುದಾದ ಸಾಧ್ಯತೆಯೂ ಇದೆ. ಆದುದರಿಂದ ಭಾಷೆ, ಅವಶ್ಯಕತೆಗನುಗುಣವಾಗಿ ಜನ್ಮ ತಾಳುತ್ತದೆ ಎನ್ನಬಹುದು.

ಭಾಷೆ, ಇದು ಸಮಾಜದ್ದು; ವೈಯಕ್ತಿಕ ಆಸ್ತಿ ಅಲ್ಲವೇ ಅಲ್ಲ. ಏಕೆಂದರೆ ಪ್ರತಿಯೊಬ್ಬ ರಾಡುವ ಮಾತೂ ಇನ್ನೊಬ್ಬರನ್ನು ಅಥವಾ ಮತ್ತೊಂದನ್ನು ಉದ್ದೇಶಿಸಿಯೇ ಇರುತ್ತದೆ. ಅಲ್ಲದೆ ಉಳಿದವರು ಇವನಾಡುವ ಮಾತುಗಳನ್ನು ಅರ್ಥಮಾಡಿಕೊಳ್ಳಲು

---

೧. ಕರ್ನಾಟಕ ಸಿರಿ (ಎಂ. ಎಸ್. ವೆಂಕಟಸುಬ್ಬಯ್ಯ)- ಪು. ಸಂ. ೩

೨. ಪ್ರಯೋಗ ಚಂದನ - ಪು. ಸಂ. ೪

ಅಶಕ್ತವಾದರೆ ಇವನ ಮಾತಿಗೆ ಬೆಲೆಯಿಲ್ಲ. ಮನುಷ್ಯ ಮೂಲತಃ ವಿಚಾರ ಮಾಡಲು ಮಾತನ್ನು ಉಪಯೋಗಿಸುವುದೇ ಇಲ್ಲ. ತನ್ನ ವಿಚಾರಗಳನ್ನು ಹೊರಗೆಡಹಲು ಮಾತ್ರ ಭಾಷೆಯನ್ನು ಉಪಯೋಗಿಸುತ್ತಾನೆ. ಆದುದರಿಂದ ಅವನ ಸಂವೇದನೆಯ ಅಭಿವ್ಯಕ್ತಿಗೆ ಭಾಷೆ ಮಾಧ್ಯಮವಾಗುತ್ತದೆ. ಮಾನವ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗವಾಗುಳಿಯುತ್ತದೆ. ಆದುದರಿಂದಲೇ ಇವನು ತಮಿಳಿನವನು, ಇವನು ಮರಾಠಿಗ, ಇವನು ಪರದೇಶಿದವನು ಎಂದು ಬೊಟ್ಟಿಟ್ಟು ತೋರಿಸಿದಾಗ ಅವನ ನಡೆಯೂ ಬೇರೆ, ನುಡಿಯೂ ಬೇರೆ ಎಂದು ಹೇಳಿದಂತಾಗುತ್ತದೆ.

ಮಾನವನ ವಿಶಿಷ್ಟ ಶಕ್ತಿಯಾದ ಭಾಷೆಗೆ ಕೂಡ ವ್ಯಕ್ತಿಯಂತೆಯೇ ಬದಲಾವಣೆ, ಬೆಳವಣಿಗೆಗಳಿವೆ. ಬದಲಾವಣೆ ಭಾಷೆಯ ಜೀವಂತಿಕೆಯ ಲಕ್ಷಣ ಎನ್ನಬಹುದು. ನಿರಂತರ ಪರಿವರ್ತನ ಶೀಲವಾದ ಭಾಷೆಯನ್ನು ಸಾಮಾನ್ಯವಾಗಿ ಹರಿಯುವ ಪ್ರವಾಹಕ್ಕೆ ಹೋಲಿಸುತ್ತಾರೆ. ಪ್ರವಾಹದಲ್ಲಿಯ ನೀರು ಬದಲಾಗುವಂತೆ ಸಮಾಜದ ಬದಲಾವಣೆಗನುಗುಣವಾಗಿ ಭಾಷೆಯೂ ಕಾಲದಿಂದ ಕಾಲಕ್ಕೆ ಮಾರ್ಪಾಟು ಹೊಂದುತ್ತಿರುತ್ತದೆ.

ಒಂದು ಭಾಷೆಯನ್ನಾಡುವ ಜನಸಮುದಾಯವು ಗುಲಾಮಗಿರಿ, ಜನಸಂಖ್ಯೆಯ ಹೆಚ್ಚಳ, ಪ್ರವಾಹ, ಭೂಕಂಪ ಮುಂತಾದ ಕಾರಣಗಳಿಂದ ಬೇರೆ ಪ್ರದೇಶಗಳಲ್ಲಿ ವಾಸಿಸತೊಡಗಿದಾಗ ಆಯಾ ಪ್ರದೇಶಗಳ ಭೂಗುಣ, ವಾಯುಗುಣ, ಅಲ್ಲಿಯ ಸಂಸ್ಕೃತಿ ಮೊದಲಾದವುಗಳ ಪರಿಣಾಮವಾಗಿ ಅದರ ಮಾತು, ಶಬ್ದೋಚ್ಚಾರಣೆ ಮುಂತಾದವುಗಳಲ್ಲಿ ವ್ಯತ್ಯಾಸವನ್ನು ಪಡೆಯುತ್ತವೆ. ಅಲ್ಲದೆ ಬೇರೆ-ಬೇರೆ ಪ್ರದೇಶಗಳಲ್ಲಿ ಸ್ವತಂತ್ರವಾಗಿ ಬೆಳೆಯುತ್ತ ಹೋಗುತ್ತದೆ. ಕಾಲಕ್ರಮೇಣ ಮೂಲಭಾಷೆ ಹಾಗೂ ಇತರ ಪ್ರದೇಶಗಳಲ್ಲಿ ಹರಡದ ಭಾಷಾ ರೂಪಗಳಲ್ಲಿ ಸಾಕಷ್ಟು ಭಿನ್ನತೆ ಗೋಚರಿಸುತ್ತದೆ.

ಭಾಷೆಯ ಬದಲಾವಣೆಯಲ್ಲಿ ಕಾಲ, ದೇಶಗಳೆರಡೂ ಪ್ರಮುಖವಾದ ಪಾತ್ರಗಳನ್ನು ವಹಿಸುತ್ತದೆ ಎನ್ನಬಹುದು. ಒಂದು ಪ್ರದೇಶದಲ್ಲಿ ಬಹುಕಾಲದಿಂದ ಒಂದು ಭಾಷೆ ಬಳಕೆಯಲ್ಲಿದ್ದರೆ, ಸಹಜವಾಗಿ ಅದರಲ್ಲಿ ವ್ಯತ್ಯಾಸಗಳೂ ಆಗಿರುತ್ತದೆ. ಆ ಪ್ರದೇಶದ ಕೆಲವು ಜನ ಬೇರೆಡೆ ವಲಸೆ ಹೋದಾಗಲೂ, ಮೊದಲನೆಯ ದಿನವಲ್ಲದಿದ್ದರೂ ಕಾಲಕ್ರಮೇಣ ಅವರ ಭಾಷೆಯಲ್ಲಿಯೂ ವ್ಯತ್ಯಾಸ ಗೋಚರವಾಗುತ್ತದೆ.

ಒಂದು ಪ್ರದೇಶದ ಜನರು ಮತ್ತೊಂದು ಪ್ರದೇಶಕ್ಕೆ ಕಾರಣಾಂತರದಿಂದ ಬಂದಾಗ ಮೊದಲಿದ್ದ ಜನರಲ್ಲಿಯ ಪರಿಣಾಮಕಾರಿ, ಅಂಶಗಳು, ಹೊಸಭಾಷೆಯ ಉಚ್ಚಾರ, ವ್ಯಾಕರಣ, ಶಬ್ದಕೋಶಗಳ ಮೇಲೆ ಪರಿಣಾಮ ಬೀರಬಹುದು ಎಂಬುದು ಮೊದಲ ಕಾರಣ.

ಒಂದು ಪ್ರದೇಶದ ಜನರು ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುವಾಗ ಮಾರ್ಗದಲ್ಲಿ ತಮ್ಮ ಭಾಷೆಯನ್ನು ಹರಡಬಹುದಾಗಿದೆ.ಒಂದು ಪ್ರದೇಶದಲ್ಲಿ ಧಾರ್ಮಿಕವಾಗಿ, ರಾಜಕೀಯವಾಗಿ ಇರುವ ಸೀಮೆಗಳು ಭಾಷಾವ್ಯತ್ಯಾಸಕ್ಕೆ ಕಾರಣವಾಗಬಹುದು. ಕೊಡಗು, ಬಡಗ ಈ ಭಾಷೆಗಳು ಕನ್ನಡದಿಂದ ಬೇರೆಯೆನಿಸಿಕೊಂಡಿದ್ದ, ಅವರ ಧಾರ್ಮಿಕ ಆಚಾರ-ವಿಚಾರ ಸಂಸ್ಕೃತಿಗಳ ಭಿನ್ನತೆಯಿಂದ ಕಾಸರಗೋಡು ತಾಲ್ಲೂಕಿನಲ್ಲಿ ಕನ್ನಡಿಗರೇ ಬಹುಸಂಖ್ಯೆಯಲ್ಲಿದ್ದು, ರಾಜಕೀಯ ವಿಭಾಗದಿಂದ ಅದು ಕೇರಳಕ್ಕೆ ಸೇರಿದೆ.

ಯಾವುದಾದರೊಂದು ಪ್ರದೇಶ ಸಾಂಸ್ಕೃತಿಕ ಕೇಂದ್ರವಾಗಿದ್ದಲ್ಲಿ ಅಲ್ಲಿಯ ಭಾಷೆ ಅದಕ್ಕೂ ಕಡಿಮೆ ಪ್ರತಿಷ್ಠೆ ಹೊಂದಿದ ಉಪಭಾಷೆಗಳ ಮೇಲೆ ತನ್ನ ಪ್ರಭಾವವನ್ನು ಬೀರುತ್ತದೆ.

ಒಂದು ಉಪಭಾಷೆ, ಅದನ್ನು ಬಳಸುವ ಜನರ ಸಾಮಾಜಿಕ ರಚನೆಯನ್ನು ಪ್ರತಿಬಿಂಬಿಸುತ್ತದೆ. ಅಂದರೆ ಸಾಮಾಜಿಕ ರಚನೆಯಲ್ಲಿ ಬದಲಾವಣೆ ಆದರೆ ಅದರ ಪ್ರಭಾವ ಆ ಉಪಭಾಷೆಯ ಮೇಲೂ ಆಗುತ್ತದೆ.

ಕೆಲವೊಮ್ಮೆ ವಲಸೆಗಾರರ ಭಾಷೆಯೂ ಸ್ಥಳೀಯ ಭಾಷೆ - ಉಪಭಾಷೆಗಳ ಮೇಲೆ ಪ್ರಭಾವ ಬೀರುವ ಸಾಧ್ಯತೆಯೂ ಇರುತ್ತದೆ.

ಈಗ ಮೇಲೆ ಹೇಳಿದ ಕಾರಣಗಳೆಲ್ಲ ಹೆಚ್ಚಾಗಿ ಪ್ರಾದೇಶಿಕ ವ್ಯತ್ಯಾಸಕ್ಕೆ ಸಂಬಂಧಿಸಿದವುಗಳಾಗಿವೆ. ಇನ್ನು ಸಮಾಜದಲ್ಲಿ ಬಹುಕಾಲದಿಂದಲೂ ನೆಲೆಯೂರಿದಂತಹ ಉಚ್ಚ-ನೀಚ ವರ್ಗಗಳಿಂದಾಗಿ, ಭಿನ್ನ ಸಂಸ್ಕೃತಿಗಳಿಂದಾಗಿ ಕೆಲವು ಉಪಭಾಷೆಗಳು ಜನಿಸುತ್ತವೆ. ಜನರ ಉದ್ಯೋಗ, ವಯಸ್ಸು, ಲಿಂಗ, ವಿದ್ಯೆ, ನಗರೀಕರಣ ಮುಂತಾದವುಗಳಿಂದಲೂ ಭಾಷೆ ಬದಲಾವಣೆಯನ್ನು, ಪ್ರಭಾವವನ್ನು ಹೊಂದುತ್ತಿರುತ್ತದೆ. ಆದುದರಿಂದ ಭಾಷಾ ವ್ಯತ್ಯಾಸಕ್ಕೆ ಉಪಭಾಷೆಗಳ ನಿರ್ಮಾಣಕ್ಕೆ ಇಂತಿಷ್ಟೇ ಕಾರಣಗಳಿವೆಯೆಂದು ನಿರ್ದಿಷ್ಟವಾಗಿ ಹೇಳುವಂತಿಲ್ಲ. ಇದನ್ನು ಹಂ. ಪ. ನಾ. ಅವರು, "ಭಾಷೆಯೆಂಬುದು ಒಂದು ದೃಷ್ಟಿಯಲ್ಲಿ ಏಳುಸುತ್ತಿನ ಕೋಟೆಯಂತೆ ತೋರುತ್ತದೆ. ಒಂದೇ ಭಾಷೆಯಲ್ಲಿ ಹಲವು ಉಪಭಾಷೆಗಳು ಸೇರಿಕೊಂಡಿರುತ್ತವೆ. ಉಪಭಾಷೆಯೆಂದರೆ ಒಂದು ಭಾಷೆಯ ಗ್ರಾಮ್ಯ ರೂಪವೆಂದಾಗಲಿ ಅಥವಾ ಬೇರೆ ಯಾವುದೇ ಬಗೆಯ ಸಂಕುಚಿತ ದೃಷ್ಟಿಯ ಅರ್ಥವಾಗಲಿ ಪಡೆದ ಭಾಷಾ ರೂಪವಲ್ಲ. ಉಪಭಾಷೆಯೆಂಬುದು ಒಂದು ಭಾಷೆಗೆ ಸೇರಿದ, ಆದರೆ ಪ್ರಾದೇಶಿಕ ಅಥವಾ ಸ್ಥಳೀಯ ವೈಶಿಷ್ಟ್ಯವುಳ್ಳ ಭಾಷೆ, ಅದೊಂದು ಭೌಗೋಳಿಕ ಆಧಾರದಿಂದ ಒಂದೇ ಭಾಷೆಯಲ್ಲಿ ಕಾಣುವ ವಿಭೇದ. ಉಪಭಾಷೆ ಮತೀಯ ಪರಿಸರದಿಂದ, ವೃತ್ತಿ ನಿಮಿತ್ತದಿಂದ, ಅನ್ಯ ಭಾಷೆಗಳ ಪ್ರಭಾವದಿಂದ, ಮೂಲ ಭಾಷೆಯೊಡನೆ ಸಂಪರ್ಕ ಕಡಿಮೆಯಾಗುವಿಕೆಯಿಂದ - ನಾನಾ ಕಾರಣಗಳಿಂದ ಉಂಟಾಗಿರಬಹುದು" ಎಂದು ಹೇಳಿದ್ದಾರೆ

ಪ್ರತಿಯೊಂದು ಭಾಷೆಗೂ ತನ್ನದೇ ಆದ ಒಂದು ರಾಚನಿಕ ವ್ಯವಸ್ಥೆ ಇದೆ. ಅಂದರೆ ಒಂದು ಕ್ರಮ ಒಂದು ಜಾಡು ಇರುತ್ತದೆ. ವರ್ಣ ಅರ್ಥಾತ್ ಧ್ವನಿಮಾ, ಪದ ಅಥವಾ ಆಕೃತಿಯಾ ವಾಕ್ಯ ರಚನೆ ಇದೆ. ಮುಂತಾದವುಗಳಲ್ಲಿ ಈ ವ್ಯವಸ್ಥೆಯನ್ನು ನೋಡಬಹುದು. ಭಾಷೆಯಲ್ಲಿ ಧ್ವನಿ ಸಂಕೇತಗಳಿಗೆ ಮಾತ್ರ ಸ್ಥಾನ.

ಉದಾ :- ಕ, ಬ, ಡ ಇತ್ಯಾದಿ

ಸಾಮಾನ್ಯವಾಗಿ ಭಾಷೆಯಲ್ಲಿ ಪ್ರತಿಯೊಂದು ವಸ್ತು, ಪ್ರಾಣಿ ಭಾವಗಳಿಗೆ ನಿರ್ದಿಷ್ಟ ಸಂಕೇತಗಳಿವೆ. ಆದರೆ ಒಂದು ಸಂಮೋಹದ ಧ್ವನಿ ಸಂಕೇತಕ್ಕೆ ಒಂದೇ ಅರ್ಥವೀರಬೇಕೆಂಬ ನಿಯಮವೇನಿಲ್ಲ. ಅಂದರೆ ನಾನಾರ್ಥಗಳಿರಬಹುದು.

ಉದಾ:- ಸರಿ ಶಬ್ದಕ್ಕೆ ಚಲಿಸು, ಸಮ, ಆಗಲಿ, ನಿಜ ಒಂದು ಬಗೆಯ ಅಂಟು ಹೀಗೆ ನಾನಾ ಅರ್ಥಗಳಿವೆ. ಅಲ್ಲದೆ ಹಲವು ಶಬ್ದಗಳು ಒಂದೇ ಅರ್ಥಕೊಡುವ ಸಮನಾರ್ಥಕ ರೂಪಗಳು ಆಗಬಹುದು.

ವ್ಯಕ್ತಿ ವ್ಯಕ್ತಿಗಳಲ್ಲಿ ಸಹಕಾರವನ್ನುಂಟು ಮಾಡುವಲ್ಲಿ ಭಾಷೆ ಮಹತ್ವದ ಪಾತ್ರ ವಹಿಸುತ್ತದೆ. ಭಾಷೆ ಎನ್ನುವುದು ಮಾನವ ನಿರ್ಮಿತ ವ್ಯವಸ್ಥೆ ಅದು ಯಾದೃಚ್ಛಿಕ ಧ್ವನಿ ಸಂಕೇತಗಳ ವ್ಯವಸ್ಥಿತ ರೂಪ. ಆ ಧ್ವನಿ ಸಂಕೇತಗಳನ್ನು ಬಳಸಿ ಪರಸ್ಪರ ಸರಕಾರ ಸಾಧ್ಯವಾಗುತ್ತಿದೆ. ಭಾಷೆ ಎಂದರೆ ಪ್ರಕಾಶಿಸು ಎಂಬ ಅರ್ಥವಿರವುದರಿಂದ ಭಾಷೆ ಎಂದಾಗ ವ್ಯಕ್ತಿ ತನ್ನ ಅಭಿಪ್ರಾಯ, ಅನಿಸಿಕೆ ಮತ್ತು ಆಲೋಚನೆಗಳನ್ನು ಮತ್ತೊಬ್ಬನಿಗೆ ಮನವರಿಕೆ ಮಾಡಿಕೊಡುತ್ತಾನೆ.

ಭಾಷೆಯ ಸ್ವರೂಪವನ್ನು ವಿವರಿಸುವುದು ಕಷ್ಟದ ಕೆಲಸ. ಅದು ನೀರಿನ ಅಥವಾ ಗಾಳಿಯ ಸ್ವರೂಪವನ್ನು ಕುರಿತು ಚರ್ಚಿಸಿದಂತೆ. ಆದರೆ ಅದರ ಗುಣ ಮತ್ತು ಪ್ರಯೋಜನವನ್ನು ಕುರಿತು ಮಾತನಾಡಬಹುದು. ಕಾಲ, ದೇಶ, ಸನ್ನಿವೇಶ ಸಂದರ್ಭಗಳಿಗೆ ತಕ್ಕಂತೆ ಭಾಷೆ ಬದಲಾಗುತ್ತದೆ. ಪ್ರತಿ ಭಾಷೆಗೂ ಧ್ವನಿ ಘಟಕವೊಂದಿದ್ದು ಇದನ್ನು 'ಧ್ವನಿಮಾ' ಎಂದು ಕರೆಯುತ್ತಾರೆ. ಇದೊಂದು ಅರ್ಥವಿಲ್ಲದ ಘಟಕ ಅಂದರೆ ಕೇವಲ ವರ್ಣಗಳು ಅ, ಕ, ಳ, ಡ, ದ, ಬ, ಇತ್ಯಾದಿ. ಅಂತೆಯೇ ಪ್ರತಿ ಭಾಷೆಗೂ ಆಕೃತಿಗಳ ಘಟಕವು ಇರುತ್ತದೆ. ಇದನ್ನು ಆಕೃತಿಮಾ ಎಂದು ಕರೆಯುತ್ತಾರೆ.

ಭಾಷೆ ಬೆಳದಂತೆಲ್ಲಾ, ಬಳಸಿದಂತೆಲ್ಲ ಹೊಸ ಹೊಸ ಶಬ್ದಗಳು ಸೃಷ್ಟಿಗೊಳ್ಳುತ್ತದೆ. ಪ್ರತಿಯೊಂದು ಭಾಷಾ ಸಂಮೋಹವು ತನ್ನ ಅನುಕೂಲಕ್ಕೆ ತಕ್ಕಂತೆ ಸ್ವತಂತ್ರ ಧ್ವನಿ ಸಂಕೇತಗಳನ್ನು ರೂಪಿಸಿಕೊಳ್ಳುತ್ತದೆ. ಭಾಷೆಗೆ ಇಂದಿನ ವಿಷಯವನ್ನು ಹೇಳುವ ಸಾಮರ್ಥ್ಯವೇ

ಅಲ್ಲದೆ ಹಿಂದಿನ ಮತ್ತು ಮುಂದಿನ ವಿಷಯವನ್ನು ಕುರಿತು ಹೇಳುವ ಸಾಮರ್ಥ್ಯವೂ ಇದೆ. ಒಬ್ಬ ವ್ಯಕ್ತಿ, ಒಂದು ವಸ್ತು, ಒಂದು ಸಂಗತಿ ಕಣ್ಣ ಮುಂದೆ ಇರದಿದ್ದರೂ ಅದನ್ನು ಭಾಷೆಯ ಮೂಲಕ ಮನಸ್ಸಿಗೆ ಮುಟ್ಟುವಂತೆ ಹೇಳಬಹುದು.

ಭಾಷೆ ಕೇವಲ ಧ್ವನಿ ಅಥವಾ ಅರ್ಥಗಳ ಸಂಮ್ಮೋಹವಲ್ಲ. ಕೆಲವು ವೇಳೆ ವಿಶೇಷ ಅರ್ಥ ಸಂಪತ್ತು ಹೊಂದಿದೆ. ಅಂದರೆ ಅಲಂಕಾರ, ಧ್ವನಿ ಮತ್ತು ವಕ್ರೋಕ್ತಿ. ಭಾಷೆ ರಕ್ತಗತವಾಗಿ ಅಥವಾ ವಂಶಪಾರಂಪರ್ಯವಾಗಿ ಬರುವುದಿಲ್ಲ.

ಭಾಷೆ ಇರುವುದೇ ಭಾವನೆ, ಅನಿಸಿಕೆ, ವ್ಯವಹಾರಗಳ ವಿನಿಮಯಕ್ಕಾಗಿ ಎಷ್ಟೋ ವೇಳೆ ಒಂದು ಹೊಸ ಪದ ಕಿವಿಗೆ ಬಿದ್ದಾಗ ಒಂದು ಸಾಂದರ್ಭಿಕ ಹಿನ್ನೆಲೆಯಲ್ಲಿ ಅದನ್ನು ಅರ್ಥಮಾಡಿಕೊಳ್ಳುವುದು ಸುಲಭವಾಗುತ್ತದೆ. ವ್ಯಕ್ತಿ ಬಾಲ್ಯದಿಂದಲೇ ತನ್ನ ಸುತ್ತಮುತ್ತಲ ಜನರಿಂದ ಆಡುವ ಮಾತನ್ನು ಪದೇ ಪದೇ ಕೇಳಿ ಅನುಕರಿಸಿ ಕಲಿಯ ತೊಡಗುತ್ತಾನೆ.

ಮಾನವನಿಗೆ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿತು ಮಾತನಾಡಬಲ್ಲ ವಿಶೇಷ ಶಕ್ತಿ ಇದೆ. ಈತನ ಭಾಷೆ ಸುಸ್ಪಷ್ಟವಾಗಿ ಅಭಿವ್ಯಕ್ತಿಗೊಳ್ಳುವಂತೆ ಯಾವ ಪ್ರಾಣಿ ಭಾಷೆಯ ಅಭಿವ್ಯಕ್ತಗೊಳಿಸಲಾರದು. ಇದು ದೈವದತ್ತವಾದುದಲ್ಲ. ಯಾರು ಕಷ್ಟ ಪಟ್ಟು ಕಲಿಯುತ್ತಾರೋ ಅವರಿಗೆ ದಕ್ಕುವಂತದ್ದು.

ಭಾಷೆ ಏಕ ವ್ಯಕ್ತಿಯ ಅಥವಾ ಒಂದು ಕುಟುಂಬದ ಸ್ವತ್ತಲ್ಲ. ಅದೊಂದು ಸಾಮಾಜಿಕ ಕ್ರಿಯೆ, ಜೀವಂತ ಭಾಷೆ ಹರಿಯುವ ನದಿಯಂತೆ, ಚಲಿಸುವ ಗಾಳಿಯಂತೆ ಸದಾ ಪರಿವರ್ತನ ಶೀಲವಾದುದು.

ಹೊಸ - ಹೊಸ ವಸ್ತುಗಳನ್ನು ನಿರ್ದೇಶಿಸಲು ಧ್ವನಿಗಳನ್ನು ಸೃಷ್ಠಿಸಿಕೊಳ್ಳುವ ಅಥವಾ ಉತ್ಪಾದಿಸುವ ಅವಕಾಶವಿಲ್ಲದೆ ಸಾಮಾನ್ಯವಾಗಿ ಸಾಹಿತಿಗಳು, ಪತ್ರಕರ್ತರು, ವಿದ್ವಾಂಸರು ಅಥವಾ ಯಾವುದೇ ಜಾಣರು ಇಂತಹ ಪದಗಳನ್ನು ಸೃಷ್ಟಿಸಬಲ್ಲರು. ಇದಕ್ಕೆ ಅಂತಿಮ ಸ್ವರೂಪವೆಂಬುದಿಲ್ಲ. ಪ್ರತಿಯೊಂದು ಭಾಷೆಯ ತನ್ನ ಜಾಯಮಾನಕ್ಕೆ ತಕ್ಕಂತೆ ಪದ-ಪದ ಜೋಡಣೆ, ವಾಕ್ಯ ರಚನೆ ಇತ್ಯಾದಿಗಳಲ್ಲಿ ಒಂದು ಕ್ರಮ ಅನುಸರಿಸುತ್ತದೆ.

ಭಾಷೆಯೊಂದೆ ಅಲ್ಲದೆ, ಬದುಕಿನ ಎಲ್ಲಾ ಸಂಗತಿಗಳಲ್ಲೂ ಕ್ಲಿಷ್ಟತೆ, ಸಂಕೀರ್ಣತೆಗಳನ್ನು ಕಾಲಾನುಕ್ರಮದಲ್ಲಿ ಸರಳ ಮಾಡಿಕೊಳ್ಳುತ್ತಾ ಹೋಗುವುದು ಸಾಮಾನ್ಯವಾಗಿದೆ. ಪ್ರತಿ ಭಾಷೆಗೂ ತನ್ನದೇ ಆದ ಭೌಗೋಳಿಕ ಆವರಣವಿರುತ್ತದೆ.

ಲಿಖಿತ ಭಾಷೆಗಳಲ್ಲಿ ಶಾಸನ ಸಾಹಿತ್ಯ ಮತ್ತಿತರ ಆಧಾರ ಸಾಮಗ್ರಿಗಳ ಲಭ್ಯತೆಯಿಂದಾಗಿ ಆ ಭಾಷೆಯ ಇತಿಹಾಸ ಅಥವಾ ಪ್ರಾಚೀನತೆಯನ್ನು ನಿರ್ಣಯಿಸಬಹುದು. ಭಾಷೆಯ ಎಲ್ಲಾ ವೈಲಕ್ಷಣಗಳನ್ನು ಪಟ್ಟಿ ಮಾಡುವುದು ಸುಲಭದ ಮಾತಲ್ಲ. ಭಾಷಾ ವಿಜ್ಞಾನಿಗಳೇ ಭಾಷೆಯ ಸ್ವರೂಪ, ಗುಣಲಕ್ಷಣಗಳ ಬಗೆಗೆ ಖಚಿತವಾಗಿ ಗೆರೆ ಎಳೆದು ವಿಭಜಿಸಿ ತೋರಿಸಲು ಸಾಧ್ಯವಾಗಿಲ್ಲವೆಂಬುದನ್ನು ಮರೆಯಲಾಗದು.

* * *

# ಅಧ್ಯಾಯ - ೨

# ಕನ್ನಡ ಭಾಷೆ ಬೆಳೆದು ಬಂದ ದಾರಿ

ದ್ರಾವಿಡ ಮೂಲಕ್ಕೆ ಸೇರುವ ಸುಮಾರು ೭೨ ಭಾಷೆಗಳಲ್ಲಿ ಕನ್ನಡವೂ ಒಂದಾಗಿದೆ. ತಮಿಳು, ತೆಲುಗು, ಮಲೆಯಾಳಂ ಇವುಗಳಲ್ಲದೆ ಕೊಡಗು, ಪೆಂಗೊ ಮುಂತಾದ ಅನೇಕ ಲಿಪಿಯಿರದ ಭಾಷೆಗಳು ಕನ್ನಡದ ಸೋದರ ಭಾಷೆಗಳಾಗಿವೆ. ಕನ್ನಡ ಮೊದಲು ಆರ್ಯ ಮೂಲದಿಂದ ಬಂದದ್ದೆಂಬ ಅಭಿಪ್ರಾಯ ಅಳಿದು ಅದು ದ್ರಾವಿಡ ಭಾಷೆಯೆಂಬುದು ಖಚಿತವಾಗಿದೆ.

ಕನ್ನಡ ಸುಮಾರು ಕ್ರಿ. ಶ. ೪೫೦ ರಿಂದ ಲಿಪಿಬದ್ಧವಾಗಿ ಬಳಕೆಯಲ್ಲಿದೆ. ಹಲ್ಮಿಡಿ ಶಾಸನದ ಕಾಲದಿಂದ ಸುಮಾರು ಒಂದೂವರೆ ಸಾವಿರ ವರ್ಷಗಳ ಅವಧಿಯಲ್ಲಿ ಬದಲಾಗುತ್ತಲೇ ಬಂದಿದೆ. ಈ ಬದಲಾವಣೆ ಅದರ ಎಲ್ಲ ಅಂಗಗಳಲ್ಲಿ ಧ್ವನಿ ವ್ಯವಸ್ಥೆ, ಶಬ್ದಕೋಶ, ವ್ಯಾಕರಣ ಮುಂತಾದವುಗಳಲ್ಲಿ ನಡೆದಿದೆ. ಈ ಬದಲಾವಣೆಗೆ ಕಾರಣ ಕನ್ನಡ ಬೇರೆ ಬೇರೆ ಕಾಲದಲ್ಲಿ ಇತರ ಭಾಷೆಗಳೊಡನೆ ಪಡೆದ ಸಂಪರ್ಕ; ಇದರ ಫಲವಾಗಿ ಸಂಸ್ಕೃತ, ಪರ್ಷಿಯನ್, ಪೋರ್ಚುಗೀಸ್, ಹಿಂದಿ, ಆಂಗ್ಲಭಾಷೆ ಮುಂತಾದ ಅನೇಕ ಭಾಷೆಗಳಿಂದ ಕನ್ನಡ ಪ್ರಭಾವ ಹೊಂದಿದೆ. ಕನ್ನಡ ಭಾಷೆಯ ಇತಿಹಾಸವನ್ನು ಕ್ರಮವಾಗಿ ಪೂರ್ವದ ಹಳಗನ್ನಡ, ಹಳೆಗನ್ನಡ, ನಡುಗನ್ನಡ ಹಾಗೂ ಹೊಸಗನ್ನಡ ಎಂದು ವಿಭಾಗಿಸಲಾಗಿದೆ.

ಒಂದು ಭಾಷೆಯ ಆಡು ಮಾತಿನಲ್ಲಿ ಅನೇಕ ವ್ಯತ್ಯಾಸಗಳಾದರೂ ಅವು ಬರಹದಲ್ಲಿ ಕಾಣಿಸಿಕೊಳ್ಳಲು ಶತಮಾನಗಳೇ ಬೇಕಾಗಬಹುದು. ಮೇಲೆ ಹೇಳಿದಂತೆ ಕನ್ನಡ ಭಾಷೆ ಬದಲಾಗಲು ಇತರ ಭಾಷೆಗಳು ಕಾರಣಗಳಾಗಿವೆ. ಹಳಗನ್ನಡದ ಕಾಲಕ್ಕೆ ಸಂಸ್ಕೃತ ಭಾಷೆಯ ಪ್ರಭಾವ ತುಂಬಾ ಆಯಿತು. ಧರ್ಮ, ದರ್ಶನ ಶಾಸ್ತ್ರ, ಕಾವ್ಯ ಎಲ್ಲದರಲ್ಲಿಯೂ ಶ್ರೇಷ್ಠವೆನಿಸಿದ್ದ ಸಂಸ್ಕೃತ ಭಾಷೆಯ ಪ್ರಭಾವ ಕನ್ನಡದ ಮೇಲೆ ಅಪಾರವಾಗಿ ಆಯಿತು. ಇದರ ಪರಿಣಾಮವಾಗಿ ಶ, ಷ, ಹ, ಅಕ್ಷರಗಳು, ಮಹಾಪ್ರಾಣಗಳು ಹಾಗೂ ಅನೇಕ ಶಬ್ದಗಳು ಕನ್ನಡವನ್ನು ತುಂಬಿದವು. ಅನಂತರ ರಾಜರ ಆಳ್ವಿಕೆಯ ಕಾಲದಲ್ಲಿ ಮುಸ್ಲಿಮರ ಧಾಳಿಗಳ ಪ್ರಭಾವದಿಂದ ಪರ್ಷಿಯನ್, ಅರೇಬಿಕ್ ಭಾಷೆಗಳ ಪದಗಳು ಕನ್ನಡಕ್ಕೆ ಬಂದವು.

ಹದಿನೆಂಟನೇ ಶತಮಾನದಿಂದ ಮುಂದೆ ಆಂಗ್ಲಭಾಷೆಯ ಪ್ರಭಾವದಿಂದ ಕನ್ನಡ ಸಾಕಷ್ಟು ಬದಲಾಗಿದೆ ಹಾಗೂ ಬದಲಾವಣೆಗೆ ಒಳಗಾಗುತ್ತಿದೆ. ಸಾಹಿತ್ಯ ವಿಜ್ಞಾನ, ಆಡಳಿತ ಮೊದಲಾದ ಎಲ್ಲಾ ಕ್ಷೇತ್ರಗಳಲ್ಲಿಯೂ ಆಂಗ್ಲಭಾಷೆಯೇ ನಮಗೆ ಮಾದರಿಯಾಗಿರುವುದರಿಂದ ಇದರಿಂದಾಗುತ್ತಿರುವ ಬದಲಾವಣೆ ಹೆಚ್ಚು ವ್ಯಾಪಕವಾಗಿದೆ. ಆಧುನಿಕ ಜೀವನವನ್ನು ಸೂಚಿಸುವ ನಮ್ಮ ದಿನನಿತ್ಯದ ಬಳಕೆಯ ಬಹುತೇಕ ಶಬ್ದಗಳು ಆಂಗ್ಲ ಭಾಷೆಯಿಂದ ಬಂದಿದೆ ಎಂಬುದು ತಿಳಿದ ಸಂಗತಿಯೇ.

ಇದಲ್ಲದೆ ಕರ್ನಾಟಕದೊಳಗಿನ ಬೇರೆ-ಬೇರೆ ಪ್ರದೇಶಗಳ ನಡುವೆ ಏಕ ಪ್ರಕಾರದ ಸಂಪರ್ಕವಿಲ್ಲದೇ ಅಥವಾ ಗಡಿ ಪ್ರದೇಶಗಳಲ್ಲಿರುವ ಅಕ್ಕಪಕ್ಕದ ಇತರ ರಾಜ್ಯ ಭಾಷೆಗಳಾದ ತಮಿಳು, ತೆಲುಗು, ಮರಾಠಿ ಮೊದಲಾದವುಗಳ ಪ್ರಭಾವದಿಂದ ಕನ್ನಡದ ಆಡುಮಾತಿನಲ್ಲಿಯೇ ಬೇರೆ-ಬೇರೆ ಪ್ರಾದೇಶಿಕ ಪ್ರಭೇದಗಳು ಇವೆ. ಮೈಸೂರು, ಬೆಂಗಳೂರು, ಮಂಗಳೂರು, ಧಾರವಾಡ, ಕೊಡಗಿನ ಕನ್ನಡ ಹೀಗೆ ನಾಲ್ಕೈದು ಪ್ರದೇಶಗಳ ಕನ್ನಡಗಳು ಒಂದಕ್ಕಿಂತ ಒಂದು ವಿಭಿನ್ನವಾಗಿವೆ.

ದ್ರಾವಿಡ ಭಾಷೆಗಳಲ್ಲಿ ಕನ್ನಡ ಭಾಷೆ ಬಹಳ ಮುಖ್ಯವಾದದ್ದು. ಇತರ ದ್ರಾವಿಡ ಭಾಷೆಗಳಂತೆ ಇದೂ ಕೂಡ ಮೂಲದ್ರಾವಿಡ ಭಾಷೆಯಿಂದಲೇ ವಿಕಾಸಗೊಂಡಿದ್ದು, ಸುಮಾರು ಎರಡು ಸಾವಿರ ವರ್ಷಗಳ ಪ್ರಾಚೀನತೆಯನ್ನು ಇಂದು ಹೊಂದಿದೆ. ಕನ್ನಡ ಕರ್ನಾಟಕದ

---

೧. ಕನ್ನಡ ಭಾಷಾ ಸ್ವರೂಪ (ಡಾ. ಕೆ. ಕೆಂಪೇಗೌಡ)- ಪು. ಸಂ. ೧೭

೨. ಪುಸ್ತಕ ಪ್ರಪಂಚ (ಡಾ. ದೇ.ಜ.ಗೌ) - ಪು. ಸಂ. ೭

೩. ಪ್ರತಿಭಾ ವಾರ್ಷಿಕ ಸಂಚಿಕೆ - ಪು. ಸಂ. ೪೯

ರಾಜ್ಯ ಭಾಷೆ. ಇದನ್ನು ಆಡಳಿತ ಭಾಷೆಯಾಗಿ ಬಳಸಲಾಗುತ್ತಿದೆ. ಕರ್ನಾಟಕದಲ್ಲಿ ಸುಮಾರು ನಾಲ್ಕು ಕೋಟಿ ಜನ ಈ ಭಾಷೆಯನ್ನು ಮಾತೃಭಾಷೆಯಾಗಿ ಬಳಸುತ್ತಿದ್ದಾರೆ.

ಕ್ರಿ. ಶ. ೪೫೦ರ ಹಲ್ಮಿಡಿ ಶಾಸನದಲ್ಲಿ ಕನ್ನಡ ಭಾಷೆ ಮೊತ್ತ ಮೊದಲಿಗೆ ಪರಿಚಯವಾಗುತ್ತದೆ. ಈ ಶಿಲಾಶಾಸನದಲ್ಲಿ ದೊರೆತಿರುವ ಕನ್ನಡವನ್ನು ಗಮನಿಸಿದರೆ ಆ ಹೊತ್ತಿಗಾಗಲೇ ಕನ್ನಡ ಹೆಚ್ಚು ಪ್ರೌಢವಾಗಿ ಬೆಳೆದು ಬಂದಿತೆಂಬುದು ತಿಳಿಯುತ್ತದೆ.

ಕನ್ನಡ ಭಾಷೆ ಕ್ರಿ. ಪೂ. ಒಂದನೇ ಶತಮಾನದಿಂದಲೂ, ಅದಕ್ಕೆ ಹಿಂದೆ ಅದರಲ್ಲಿ ಸಾಹಿತ್ಯವಿರದಿದ್ದರೂ ಬಹುಕಾಲದಿಂದಲೂ ಆಡು ಭಾಷೆಯಾಗಿ ಬಳಕೆಯಲ್ಲಿದ್ದಿತು ಎಂಬುದರ ಬಗ್ಗೆ ಅನುಮಾನವೇನೂ ಇಲ್ಲ. ಕನ್ನಡ ಭಾಷೆಯ ಬೆಳೆದು ಬಂದ ಹಾದಿಯನ್ನು ಹಲ್ಮಿಡಿ ಶಾಸನವೊಂದರಿಂದಲೇ ವಿವರಿಸಿಕೊಳ್ಳುವುದು ಹೆಚ್ಚು ಯುಕ್ತವಲ್ಲ. ಇದರ ಜೊತೆಗೆ ಇತರ ಆಧಾರಗಳನ್ನು ಗಮನಿಸಲೇಬೇಕಾಗುತ್ತದೆ. ಅಶೋಕನ ಬ್ರಹ್ಮಗಿರಿಯ ಶಿಲಾಶಾಸನದಲ್ಲಿ ಕಂಡುಬರುವ ಇಸಿಲ ಎಂಬ ಶಬ್ದ, ಶಾತವಾಹನರ ಶಾಸನ ಮತ್ತು ನಾಣ್ಯಗಳಲ್ಲಿ ದೊರೆಯುವ ಉಳುಮಾವಿ, ವಿಲಿವಾಯಕುರ ಎಂಬ ಶಬ್ದಗಳು, ಹಾಲನ ಗಾಥಾಸಪ್ತಸದಿಯಲ್ಲಿ ಕಂಡುಬರುವ ಕೆಲವು ದೇಶ್ಯ ಶಬ್ದಗಳು, ಟಾಲೆಮಿ ಹೆಸರಿರುವ ಕೆಲವು ಕನ್ನಡ ನಾಡಿನ ಸ್ಥಳ ನಾಮಗಳು, ಗ್ರೀಕನ ಆಕ್ಸಿರಿಂಕಸ್ ಪಪ್ಪೈರಿ ಪ್ರಹಸನದಲ್ಲಿ ದೊರೆಯುವ ಗ್ರೀಕೇತರ ಭಾಷೆಯ ಶಬ್ದಗಳು ಮುಂತಾದವುಗಳನ್ನು ಗಮನಿಸಿ ಕನ್ನಡದ ಪ್ರಾಚೀನತೆಯನ್ನು ವಿವರಿಸಿಕೊಳ್ಳಬೇಕಾಗುತ್ತದೆ.

ಕರ್ನಾಟಕದ ಬೇರೆ-ಬೇರೆ ಭಾಗಗಳಲ್ಲಿ ಕ್ರಿ. ಪೂ. ೨ನೇ ಶತಮಾನದ ಹಲವಾರು ಪ್ರಾಕೃತ ಶಾಸನಗಳು ದೊರೆಯುತ್ತವೆ. ಅವುಗಳಲ್ಲಿ ಬ್ರಹ್ಮಗಿರಿಯ ಶಿಲಾಶಾಸನದಲ್ಲಿ ಕೋಟೆಯಿಂದ ಆವೃತವಾದ ಊರು ಎಂಬರ್ಥ ಹೊಂದಿರುವ ಇಸಿಲ ಎಂಬ ಶಬ್ದವಿದೆ. ಇದು ಎಯಿಲ್ ಎಂಬ ಶಬ್ದದ ಪ್ರಾಕೃತ ರೂಪವಿರಬಹುದೆಂದು ಕೆಲವರ ಅಭಿಪ್ರಾಯ. ಈ ಶಬ್ದದ ನಡುವೆ ಇರುವ 'ಸ್' ಧ್ವನಿ ಕನ್ನಡ ಎಂಬುದಕ್ಕೆ ಸಾಕ್ಷಿಯಾಗಿದೆ. ಇಸಿಲ ಎಂಬ ಕನ್ನಡ ಶಬ್ದಕ್ಕೆ ತಮಿಳಿನಲ್ಲಿ ಎಯಿಲ್ ಎಂಬ ಜ್ಞಾತಿ ಶಬ್ದವಿದೆ. ತಮಿಳಿನಲ್ಲಿಯೂ ಈ ಶಬ್ದಕ್ಕೆ ಅರ್ಥವುಂಟು.

ಇಸಿಲ ಎಂಬ ಶಬ್ದ ಆರ್ಯ ಶಬ್ದವಲ್ಲ. ಇದು ಮುಂಡ ಇಲ್ಲದೇ ದ್ರಾವಿಡ ಶಬ್ದವೆ ಇರಬೇಕು. ಮುಂಡ ಭಾಷೆಯಲ್ಲಿಯೂ ಈ ಬಗೆಯ ಶಬ್ದಗಳಿಲ್ಲ. ಇದಕ್ಕೆ ತಮಿಳಿನಲ್ಲಿ ಎಯಿಲ್ ಎಂಬ ಸಮಾನ ಶಬ್ದವಿದೆ ಆದ್ದರಿಂದ ಇದು ದ್ರಾವಿಡ ಶಬ್ದವೇ ಇರಬೇಕೆಂದು ಸುಲಭವಾಗಿ ಊಹಿಸಬಹುದಾಗಿದೆ.

ಕ್ರಿ. ಶ. ಒಂದನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ಹಾಲನೆಂಬ ಶಾತವಾಹನರ ದೊರೆ ಗಾಥಾಸಪ್ತಶತಿ ಎಂಬ ಪದ್ಯ ಸಂಕಲನವನ್ನು ಪ್ರಾಕೃತ ಭಾಷೆಯಲ್ಲಿ ರಚಿಸಿದನು. ಈ ಕೃತಿಯ ಕೆಲವು ಪದ್ಯಗಳಲ್ಲಿ ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳಿಗೆ ಸೇರಿದ ಅತ್ತಾ, ತುಪ್ಪ, ಪೊಟ್ಟೆ, ತೀರ ಈ ಎಂಬ ಶಬ್ದಗಳು ದೊರೆಯುತ್ತವೆ. ಈ ಶಬ್ದಗಳನ್ನು ಗಮನಿಸಿದರೆ ಇವು ಕನ್ನಡವೇ ಇರಬೇಕೆಂದು ಕೆಲವರು ಊಹಿಸಿದ್ದಾರೆ. ಕನ್ನಡ ಇನ್ನೊಂದು ಪ್ರದೇಶದ ಕನ್ನಡದವರಿಗೆ ಅರ್ಥವಾಗುವುದು ಸುಲಭವಲ್ಲ. ಹೀಗೆಯೇ ಗಿರಿಜನರುಗಳಾದ ಸೋಲಿಗರ ಕನ್ನಡ, ಹಾಲಕ್ಕಿಯರ ಕನ್ನಡ, ಹೀಗೆ ಕನ್ನಡ ಭಿನ್ನವಾಗಿವೆ.

ಕನ್ನಡ ಎಲ್ಲೆಡೆಯಲ್ಲಿಯೂ ಬಹುಮಟ್ಟಿಗೆ ಒಂದೇ ತೆರನಾಗಿ ಬಳಕೆಯಾಗುತ್ತಿರುವುದು ದಾಖಲೆ ಪತ್ರಗಳಲ್ಲಿ ಅಥವಾ ಲೇಖನಗಳಲ್ಲಿ ಮಾತ್ರ. ಆಡುಮಾತಿನಲ್ಲಿರುವುದು ಒಂದೇ ಕನ್ನಡವಲ್ಲ, ವೈವಿಧ್ಯಮಯ ಕನ್ನಡಗಳು. ಆದರೂ ನಾವು ಎಲ್ಲಿದ್ದರೂ, ಹೇಗಿದ್ದರೂ ನಮ್ಮ ಮಾತೆ ಕನ್ನಡಾಂಬೆ, ನಮ್ಮ ಭಾಷೆ ಕನ್ನಡವೊಂದೇ.

ಸುಮಾರು ೧೫೦ರಲ್ಲಿ ಇದ್ದನೆಂದು ಹೇಳಲಾಗುತ್ತಿರುವ ಈಜಪ್ಟಿನ ಟಾಲೆಮಿ ಎಂಬ ಭೂಗೋಳ ಶಾಸ್ತ್ರಜ್ಞನು ತನ್ನ ಗ್ರಂಥದಲ್ಲಿ ಕರ್ನಾಟಕದ ಕೆಲವು ಸ್ಥಳನಾಮಗಳನ್ನು ಉಲ್ಲೇಖಿಸಿದ್ದಾನೆ. ಇವೆಲ್ಲವೂ ಗ್ರೀಕ್ ಭಾಷೆಯಲ್ಲಿವೆ. ಅವನು ಭಾರತವನ್ನು ನೇರವಾಗಿ ಕಂಡವನಲ್ಲ. ಅಲೆಗ್ಸಾಂಡರನ ಕಾಲದಲ್ಲಿ ಭಾರತವನ್ನು ಕಂಡ ನಾವಿಕರು ಮತ್ತು ಯಾತ್ರಿಕರಿಂದ ವಿಷಯವನ್ನು ಸಂಗ್ರಹಿಸಿ ತನ್ನ ಗ್ರಂಥದಲ್ಲಿ ನೀಡಿದ್ದಾನೆ.

ಈಜಿಪ್ಟಿನ ಆಕ್ಸಿರಿಂಕಸ್ ಪಪ್ಪೈರಿಯಲ್ಲಿ ಬಳಕೆಯಾಗಿರುವ ಗ್ರೀಕೇತರ ಭಾಷೆ ಕನ್ನಡವೇ ಎಂಬುದನ್ನು ಒಪ್ಪಲು ಸಾಧ್ಯವಾಗುವುದಿಲ್ಲ.

* * *



ಕನ್ನಡದ ಮೊದಲ ಹಲ್ಮಿಡಿ ಶಾಸನ ದೊರೆತ ಹಲ್ಮಿಡಿ ಗ್ರಾಮದಲ್ಲಿ ನಿರ್ಮಿಸಲಾಗಿರುವ
ಹಲ್ಮಿಡಿ ಶಾಸನದ ಪ್ರತಿಕೃತಿಮಂಟಪ.

# ಅಧ್ಯಾಯ - ೩

# ಬೇರೆ ಬೇರೆ ಕ್ಷೇತ್ರಗಳಲ್ಲಿ ಕನ್ನಡ ಬಳಕೆ

ನಾವು ಕನ್ನಡಿಗರು, ನಮ್ಮ ಭಾಷೆ ಕನ್ನಡ. ನಮ್ಮ ಈ ಕನ್ನಡ ನಮ್ಮೆಲ್ಲರ ಬದುಕಿನ ಜೀವನಾಡಿಯಾಗಿದೆಯೆ? ನಮ್ಮ ಸಮಾಜ ಸಂಸ್ಕೃತಿಯ ಒಡನಾಡಿಯಾಗಿದೆಯೆ? ನಮ್ಮ ಆಶೋತ್ತರಗಳ ಪ್ರತಿನಿಧಿಯಾಗಿದೆಯೆ? ಭವಿಷ್ಯದ ಬೆಳಕಿಂಡಿಯಾಗಿದೆಯೆ? ಉತ್ತರಕ್ಕಾಗಿ ಬೇರೆ-ಬೇರೆ ಕ್ಷೇತ್ರಗಳಲ್ಲಿ ಅದರ ಬಳಕೆಯನ್ನು ಪರಿಶೀಲಿಸುವುದು ಅಗತ್ಯ.

ಕ್ರಿ.ಶ. ಎರಡನೇ ಶತಮಾನಕ್ಕಿಂತ ಮೊದಲೇ ವ್ಯಾವಹಾರಿಕವಾಗಿ ಕನ್ನಡ ಭಾಷೆ ಬಳಕೆಯಲ್ಲಿತ್ತು. "ದಕ್ಷಿಣ ಕನ್ನಡದ ಸಮುದ್ರ ತೀರ ಪ್ರದೇಶಗಳಲ್ಲಿನ ಜನ ಇದನ್ನು ನಿಚ್ಚಳವಾಗಿ ಬಳಸುತ್ತಿದ್ದರು ಎಂದು ಗೋವಿಂದ ಪೈ ಅಭಿಪ್ರಾಯ ಪಡುತ್ತಾರೆ". ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಚೋಳ, ಚಾಲುಕ್ಯ, ಹೊಯ್ಸಳ ಮತ್ತು ವಿಜಯನಗರದ ಅರಸರು ಕರ್ನಾಟಕದಲ್ಲಿ ಅಧಿಕಾರದಲ್ಲಿದ್ದಾಗ ಕನ್ನಡ ಭಾಷೆ ಆಡಳಿತ ಭಾಷೆಯಾಗಿತ್ತು ಎಂಬುದಕ್ಕೆ ಶಾಸನಾಧಾರಗಳಿವೆ. ಮೈಸೂರು, ಶ್ರೀರಂಗಪಟ್ಟಣಗಳನ್ನು ಕೇಂದ್ರವಾಗಿರಿಸಿಕೊಂಡಿದ್ದ ಹೈದರಾಲಿ, ಟಿಪ್ಪುಸುಲ್ತಾನರು ಆಡಳಿತದಲ್ಲಿ ಕನ್ನಡ ಬಳಕೆಗೆ ಅಪಸ್ವರ ಎತ್ತಿರಲಿಲ್ಲ ಎಂಬುದೂ ಗಮನಿಸಬೇಕಾದ ಅಂಶ.

ಬ್ರಿಟೀಷರು ಭಾರತದಲ್ಲಿ ಭಾಷಾ ಹೇರಿಕೆ ಮತ್ತು ದಬ್ಬಾಳಿಕೆಯನ್ನು ನಡೆಸಿದರೆಂಬುದು ನಿಜ. ಆದರೂ "ಜಾನ್ ಮೆಕೆರಲ್‌ನಂಥ ಲೇಖಕರು, ಅಧಿಕಾರಿಗಳು ಸ್ಥಳೀಯ ಭಾಷೆಯಲ್ಲಿ ಅಧಿಕಾರ ನಡೆಸುವುದರ ಪ್ರಯೋಜನವನ್ನು ಒತ್ತಿ ಹೇಳಿದ್ದರು". ವಿವಿಧ ಹುದ್ದೆಗಳಲ್ಲಿ ಅಧಿಕಾರ ನಿರ್ವಹಿಸಿದ "ಟಿ. ಜಿ. ಕ್ಲಾರ್ಕ್ ಎಂಬ ಬ್ರಿಟೀಷ್ ಅಧಿಕಾರಿ ತಮ್ಮ ಕಚೇರಿಗೆ ಬರುವ ಅರ್ಜಿಗಳನ್ನು ಕನ್ನಡದಲ್ಲೇ ಇರಬೇಕೆಂದು ಆದೇಶಿಸಿದ್ದರು". "ಜಿ. ಹಟ್ಸನ್ ಎಂಬ ಆಂಗ್ಲ ವೈದ್ಯಾಧಿಕಾರಿ ಆಸ್ಪತ್ರೆಯ ಸಹಾಯಕರ ಹುದ್ದೆಗಳನ್ನು ಪ್ರಾದೇಶಿಕ ಜನರಿಗೆ ಮೀಸಲಾಗಿಸಿ, ಅವರಿಗೆ ಕನ್ನಡ ಭಾಷೆಯ ಜ್ಞಾನ ಕಡ್ಡಾಯವಾಗಿ ಇರಬೇಕೆಂದು ಸೂಚಿಸಿದ್ದರು". ಈ ನಿದರ್ಶನಗಳಿಂದ ಬ್ರಿಟಿಷರ ಕಾಲದಲ್ಲಿಯೂ ಆಡಳಿತದಲ್ಲಿ ಕನ್ನಡಕ್ಕೆ ಮಾನ್ಯತೆ ಇತ್ತು ಎಂಬುದು ತಿಳಿದು ಬರುತ್ತದೆ.

ಕರ್ನಾಟಕದಲ್ಲಿ ಕನ್ನಡ ಸಾರ್ವಭೌಮ ಭಾಷೆಯಾಗಿರಬೇಕು, ಅದರ ಬಳಕೆಗೆ ಅವಕಾಶ ಇರಬೇಕು, ಆಡಳಿತದಲ್ಲಂತೂ ಸದಾ ಅದು ವಿಜೃಂಭಿಸುವಂತಾಗಬೇಕು ಎಂಬುದು ಕರ್ನಾಟಕ ಸರ್ಕಾರದ ನಿಲವು. ಹೀಗಾಗಿ ಅನೇಕ ಸರ್ಕಾರೀ ಆಜ್ಞೆಗಳು ಈ ಸಂಬಂಧವಾಗಿ ಹೊರಟಿವೆ. ಆಗಿಂದಾಗ್ಗೆ ಹೊರಡಿಸಲಾದ ಸುತ್ತೋಲೆಗಳ ಸಂಖ್ಯೆ ನಾಲ್ಕುನೂರರ ಗಡಿ ದಾಟಿದೆ. ೧೫/೨/೧೯೮೩ ರಂದು ಹಳ್ಳಿಯ ಕೆಳಸ್ತರದ ಆಡಳಿತದಿಂದ ಹಿಡಿದು ವಿಧಾನಸೌಧದ ಉನ್ನತ ಆಡಳಿತದವರೆಗೆ ಸರ್ಕಾರದ ಎಲ್ಲಾ ಕಚೇರಿಗಳಲ್ಲೂ ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೆ ತರಬೇಕೆಂದು ಆಜ್ಞೆ ಮಾಡಲಾಯಿತು. ವಿವಿಧ ಇಲಾಖೆಗಳಲ್ಲಿ ಕನ್ನಡ ಬಳಕೆಯನ್ನು ಮತ್ತು ಸರ್ಕಾರದ ಕಾರ್ಯ ನೀತಿಯನ್ನು ಸಫಲಗೊಳಿಸಲು ೨೩/೯/೧೯೮೩ ರಂದು 'ಕನ್ನಡ ಕಾವಲು ಸಮಿತಿ' ರಚಿಸಲಾಯಿತು.

ಮುಂದೆ 'ಕನ್ನಡ ಅಭಿವೃದ್ಧಿ ಪ್ರಾಧಿಕಾರ'ವನ್ನು ಸಂಸ್ಥಾಪಿಸಲಾಯಿತು. ೧೯೮೭ ನವೆಂಬರ್ ೧ ರಿಂದ ೧೯೮೮ರ ನವೆಂಬರ್ ಒಂದರವರೆಗೆ 'ನಮಗೆ ಕನ್ನಡ ಆಡಳಿತ ಭಾಷಾ ವರ್ಷ'ವನ್ನು ಆಚರಿಸಲು ಸರ್ಕಾರವೇ ಮುಂದಾಯಿತು. ಮತ್ತೆ ೧೯೯೦ರಲ್ಲಿ ಕರ್ನಾಟಕ ಸರ್ಕಾರ 'ಆಡಳಿತ ಭಾಷೆ ಕನ್ನಡ' ಎಂದು ಆದೇಶಿಸಿ ಅಧಿಕೃತ ಜ್ಞಾಪನ ಪತ್ರವನ್ನು ಹೊರಡಿಸಿತು. ೧೯೭೩ ರಲ್ಲಿಯೇ 'ಕರ್ನಾಟಕ' ಎಂದು ನಾಮಕರಣಗೊಂಡ ನಮ್ಮ ರಾಜ್ಯ (ಮೈಸೂರು ರಾಜ್ಯ) ಇಷ್ಟೆಲ್ಲ ಬೆಂಬಲದ ನಡುವೆಯೂ ಕನ್ನಡ ಬಳಕೆಗೆ ಸಂಬಂಧಪಟ್ಟಂತೆ 'ದೇವರಿಲ್ಲದ ಗುಡಿ' ಆಗಿಯೇ ಉಳಿದಿದೆ ಎಂಬ ಕೊರಗು ಇಂದಿಗೂ ದೂರವಾಗಿಲ್ಲ.

## ಅ) ಶಿಕ್ಷಣ

ಪ್ರಾಥಮಿಕ ಶಿಕ್ಷಣದಿಂದ ಹಿಡಿದು ಉನ್ನತ ಶಿಕ್ಷಣದವರೆಗೆ ಎಲ್ಲ ಹಂತಗಳಲ್ಲೂ ಕನ್ನಡವನ್ನು ಬಳಸಲು ಅವಕಾಶವಿದೆ. ಪ್ರಾಥಮಿಕ ಶಿಕ್ಷಣವನ್ನು ಕನ್ನಡದಲ್ಲಿ ಕಾಣುವುದು ಸರ್ಕಾರಿ ಶಾಲೆಗಳಲ್ಲಿ ಮಾತ್ರ. ಖಾಸಗಿ ಶಾಲೆಗಳೆಲ್ಲ ಇಂಗ್ಲೀಷ್ ಮೋಹದ ಕಾನ್ವೆಂಟುಗಳು.

---

೧. ಭಾಷೆ ರಚನೆ ಬಳಕೆ (ಸೋಮಶೇಖರ್ ಗೌಡ)- ಪು. ಸಂ. ೧೪೯

ಕಾನ್ವೆಂಟುಗಳಿಗೆ ಹೋಲಿಸಿದರೆ ಬೋಧನೆ, ಶುಚಿತ್ವ, ಶ್ರದ್ಧೆ, ಕಲಿಕೆಯ ಅನುಕೂಲ ಈ ಎಲ್ಲಾ ವಿಷಯಗಳಲ್ಲೂ ಸರ್ಕಾರಿ ಶಾಲೆಗಳು, ವ್ಯಥೆಯನ್ನು ಹುಟ್ಟಿಸುತ್ತವೆ. ಪ್ರಾರಂಭದಲ್ಲಿಯೇ ಮಕ್ಕಳಲ್ಲಿ ಕನ್ನಡದ ಬಗೆಗೆ ಅನಾದರ, ನಿರಾಸಕ್ತಿ, ಕೀಳರಿಮೆ ಉಂಟು ಮಾಡುವಲ್ಲಿ ಇವು ಮಹತ್ವದ ಪಾತ್ರವಹಿಸುತ್ತಿವೆ. ಸರ್ಕಾರದ ಪ್ರಾಥಮಿಕ ಶಿಕ್ಷಣಕ್ಕೆ ವಿಶೇಷವಾದ ಆದ್ಯತೆ ಕೊಡುತ್ತಿದೆಯಾದರೂ, ಸರ್ಕಾರಿ ಶಾಲೆಗಳಲ್ಲಿನ ಕನ್ನಡದ ಗುಣಮಟ್ಟವನ್ನು ಕಾಪಾಡುವುದರಲ್ಲಿ, ತರಬೇತುಗೊಂಡ ಅಧ್ಯಾಪಕರನ್ನು ನೇಮಿಸುವುದರಲ್ಲಿ, ಕನಿಷ್ಠ ಸೌಲಭ್ಯವನ್ನು ಎಲ್ಲಾ ಶಾಲೆಗಳಿಗೂ ಒದಗಿಸಿ ಕೊಡುವುದರಲ್ಲಿ ಹಿಂದೆ ಬಿದ್ದಿದೆ.

ಹೀಗಾಗಿ, ಕನ್ನಡದ ವರ್ಣಮಾಲೆಯನ್ನು ಸರಿಯಾಗಿ ಉಚ್ಚರಿಸಲು ಬಾರದಂಥ ಶಿಕ್ಷಕರು ಅಪಾರ ಸಂಖ್ಯೆಯಲ್ಲಿ ಸಿಗುತ್ತಾರೆ. ಮಾಧ್ಯಮಿಕ ಮತ್ತು ಪ್ರೌಢಶಾಲಾ ಶಿಕ್ಷಣ ಇದಕ್ಕಿಂತ ಭಿನ್ನವಾಗೇನೂ ಇಲ್ಲ. ಒಂದರಿಂದ ಹತ್ತನೇ ತರಗತಿಗಳವರೆಗಿನ ವಿದ್ಯಾರ್ಥಿಗಳಿಗೆ ಬೇಕಾದ ಕನ್ನಡ, ಪಠ್ಯಪುಸ್ತಕಗಳನ್ನು ಸಿದ್ಧಪಡಿಸುವಲ್ಲಿ ಸರ್ಕಾರ ಕ್ರಮ ಕೈಗೊಂಡು, ಪಠ್ಯಪುಸ್ತಕ ನಿರ್ಮಾಣ ಸಮಿತಿಗಳನ್ನು ರಚಿಸುತ್ತದೆ. ಈ ಸಮಿತಿಗಳ ಸದಸ್ಯರು ವಿದ್ಯಾರ್ಥಿಗಳ ವಯಸ್ಸು, ತರಗತಿ, ಅಭಿರುಚಿ, ಆಸಕ್ತಿಗೆ ಹೊಂದಿಕೊಳ್ಳುವಂಥ ವಿಷಯಗಳನ್ನು ಆಯ್ದುಕೊಂಡು ಭಾಷೆಯನ್ನು ಗಮನಿಸುವುದರ ಬದಲು, ಆಕಾಶವಾಣಿ, ದೂರದರ್ಶನದ ಕಾರ್ಯಕ್ರಮ ನಿರ್ವಾಹಕರಂತೆ ರಾಷ್ಟ್ರ ನೀತಿಯನ್ನು, ಭಾವೈಕ್ಯತೆಯನ್ನು ಸಾಧಿಸಲು ಹವಣಿಸುವುದು ದುರ್ದೈವದ ಸಂಗತಿ.

ಕಾಲೇಜು, ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಎಲ್ಲ ಜ್ಞಾನ ಶಾಖೆಗಳಿಗೂ ಸಂಬಂಧಿಸಿದಂತೆ ಪಠ್ಯಪುಸ್ತಕಗಳು, ಪರಾಮರ್ಶನ ಗ್ರಂಥಗಳು ಕನ್ನಡದಲ್ಲಿ ದೊರಕುವುದು ವಿರಳ. ಈ ನಿಟ್ಟಿನಲ್ಲಿ ಆಯಾ ಕ್ಷೇತ್ರದ ಅಧ್ಯಾಪಕರು, ಪ್ರಾಧ್ಯಾಪಕರು, ವಿಷಯತಜ್ಞರು ಕಾರ್ಯೋನ್ಮುಖರಾಗುವುದು ಅನಿವಾರ್ಯ. ಹಾಗಿಲ್ಲವಾದರೆ ಕನ್ನಡದಲ್ಲಿ ಬರೆಯಲಿಚ್ಛಿಸುವ ವಿದ್ಯಾರ್ಥಿಗಳು ಸರಿಯಾದ ಮಾರ್ಗದರ್ಶನವಿಲ್ಲದೆ ಗೊಂದಲಕ್ಕೀಡಾಗುತ್ತಾರೆ. ಇಂಗ್ಲೀಷ್‌ನಲ್ಲಿ ಓದಿ, ಅರಗಿಸಿಕೊಂಡು, ಆಮೇಲೆ ತಾವೇ ಕನ್ನಡದಲ್ಲಿ ಬರೆಯುವಂಥದು ಯಾವುದೇ ಕನ್ನಡ ಮಾಧ್ಯಮದ ವಿದ್ಯಾರ್ಥಿಗೆ ನುಂಗಲಾರದ ತುತ್ತು.

ಆಯಾಯ ಮಾತೃಭಾಷೆಯಲ್ಲಿಯೇ ಶಿಕ್ಷಣ ದೊರಕಿಸಿಕೊಡಬೇಕಾದ್ದು ಅನಿವಾರ್ಯ. ಏಕೆಂದರೆ ಮಾತೃಭಾಷೆಯ ಮಾಧ್ಯಮ ಕಲಿಕೆಯ ಯಶಸ್ಸಿನ ಗುಟ್ಟು ಎಂದು ಶಿಕ್ಷಣ ತಜ್ಞರು ಸಾರಿ ಹೇಳಿದ್ದಾರೆ. ಭಾಷಾವಿಜ್ಞಾನಿಗಳು ಮನವರಿಕೆ ಮಾಡಿಕೊಟ್ಟಿದ್ದಾರೆ. ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ಅಭಿಪ್ರಾಯವೂ ಇದೇ ಆಗಿತ್ತು. ಹೀಗಿರುವಾಗ ಕನ್ನಡ ಮಾಧ್ಯಮ ಶಿಕ್ಷಣದ ಎಲ್ಲ ಹಂತಗಳಲ್ಲಿಯೂ ವಿರಾಜಿಸಬೇಕಾದ್ದು ಅಪೇಕ್ಷಣೀಯ.

ವಿಜ್ಞಾನದಿಂದಾಗಿ ವಿಶ್ವವೇ ಒಂದು ಪುಟ್ಟ ಹಳ್ಳಿಯಂತಾಗಿದೆ. ಯಾವ ಭಾಷೆಯೂ ಅನ್ಯಭಾಷೆಯಿಂದ ಎರವಲು ಪಡೆಯದೆ ಬದುಕುಳಿಯುವುದು ದುಸ್ತರವಾಗಿದೆ. ಕನ್ನಡವಂತೂ ಬಹಳ ಹಿಂದಿನಿಂದಲೂ ಭಾಷಾ ಮಡಿವಂತಿಕೆಯಿಂದ ದೂರವಾಗಿಯೇ ಉಳಿದುಕೊಂಡು ಬಂದಿದೆ. ಹೀಗಾಗಿ ಕನ್ನಡದ ಮೂಲ ಪದಗಳ ಜೊತೆಗೆ ಇತರ ದ್ರಾವಿಡ ಭಾಷೆಗಳ, ಸಂಸ್ಕೃತದ, ಪ್ರಾಕೃತದ, ಮರಾಠಿಯ, ಪರ್ಶಿಯನ್, ಅರಾಬಿಕ್ ಮೂಲದ, ಹಾಗೆಯೇ ಇಂಗ್ಲೀಷ್‌ನ ಹೇರಳ ಸ್ವೀಕೃತ ಪದಗಳು ಸೇರಿಕೊಂಡಿವೆ.

" ರಾಷ್ಟ್ರಕವಿ ಕುವೆಂಪು ಅವರು ಹೇಳುವಂತೆ ಕನ್ನಡದ ಅಂಧಾಭಿಮಾನದಿಂದ ಇಂಗ್ಲೀಷಿನ ABC-ಗಳನ್ನು ಕನ್ನಡದಲ್ಲಿ ಅ,ಬ,ಕ, ಗಳೆಂದು ಕರೆಯಬೇಕಾಗಿಲ್ಲ". ಇಂಗ್ಲೀಷ್ ಮಾಧ್ಯಮದಲ್ಲಿ ಓದದಿದ್ದರೂ ಇಂಜಿನಿಯರಿಂಗ್‌ನ ಸಿಮೆಂಟು, ಕಾಂಕ್ರೀಟು, ಟೀಮು, ಪಿಲ್ಲರ್, ವೈರು, ಸ್ಪಂಜು, ಬ್ರಷ್ಷು, ಪ್ಲಾನು, ಸೈಟು ಪದಗಳು ಕೆಲಸಗಾರರಿಗೆ, ಗಾರೆಯವರಿಗೆ, ಜೊತೆಗೆ ಶ್ರೀಸಾಮಾನ್ಯರಿಗೂ ಅರ್ಥವಾಗುತ್ತವೆ. ಇವುಗಳನ್ನು ಭಾಷಾಂತರಿಸುವುದೇಕೆ? ಭಾಷಾಂತರಿಸುವುದಾದರೂ ಎಂತು? ಡ್ರಿಲ್ಲಿಂಗ್‌ಮಿಷೀನು, ಬೋರಿಂಗ್, ಹ್ಯಾಂಡ್ಲು, ಸ್ಕ್ರೂ, ನಟ್, ಬೋಲ್ಟ್, ಸ್ಕ್ರೂಡ್ರೈವರ್, ಸಾಲ್ಡರ್, ವೆಲ್ಡಿಂಗ್ ಇತ್ಯಾದಿ ಚಿರಪರಿಚಿತ ಪದಗಳಿಗೆ ಪರ್ಯಾಯ ಪದಗಳನ್ನು ಕನ್ನಡದಿಂದ ಎಲ್ಲಿ ತರೋಣ?

ಟೆಸ್ಟ್‌ಟ್ಯೂಬ್, ಪ್ಲಾಸ್ಕ್, ಲಿಟ್‌ಮಸ್, ಪಪೆಟ್, ಬ್ಯೂರೆಟ್‌ಗಳನ್ನು ಭಾಷಾಂತರಿಸಲು ಒದ್ದಾಡುವುದು ಅನಗತ್ಯ. "ಟೆಸ್ಟ್‌ಟ್ಯೂಬ್‌ಗೆ ಆಸಿಡ್ ಸುರಿದು ಅದನ್ನು ಸ್ಟರ್ ಮಾಡಿ ಎಂದು ಬರೆದರೂ ಅದು ಕನ್ನಡವೆ ಎಂಬ ಕುವೆಂಪು ಅವರ ಅಭಿಪ್ರಾಯ ಅನುಕರಣೀಯ".

ತಾಂತ್ರಿಕ ಹಾಗೂ ವೈದ್ಯಕೀಯ ಶಿಕ್ಷಣದ ಪಾರಿಭಾಷಿಕ ಪದಗಳನ್ನು ಕನ್ನಡಕ್ಕೆ ಅನುವಾದಿಸಿಕೊಂಡು ಬಳಸುವ ಪರಿಪಾಠ ಸಾಕಷ್ಟು ನಡೆದಿದೆ. ಇಂಥ ಪಾರಿಭಾಷಿಕ ಪದಕೋಶಗಳೂ ಈಗ ಲಭ್ಯವಿವೆ. ಆದರೂ ಕನ್ನಡೀಕರಣಕ್ಕಾಗಿ ಪ್ರಚಲಿತ ಪದಗಳನ್ನು ತ್ಯಾಗಮಾಡಿ ಭಾಷಾಂತರದ ಪದಗಳನ್ನು ಅಪ್ಪಿಕೊಳ್ಳುವುದು ಮೂರ್ಖತನವೆಂದು ಶಿಕ್ಷಣತಜ್ಞರು ತೋರಿಸಿಕೊಟ್ಟಿದ್ದಾರೆ. ವೈದ್ಯಕೀಯದ 'ಆಪರೇಷನ್', 'ಇಂಜಕ್ಷನ್', 'ಬಿ.ಪಿ., ಕ್ಯಾನ್ಸರ್, ಎಕ್ಸ್‌ರೇ, ಹಾರ್ಮೋನು, ರೆಟಿನಾ ಇತ್ಯಾದಿ ಪರಿಚಿತ ಪದಗಳನ್ನು ಶಸ್ತ್ರಚಿಕಿತ್ಸೆ, ಚುಚ್ಚುಮದ್ದು, ರಕ್ತದೊತ್ತಡ, ಏಡಿಗ್ರಂಥಿ, ಕ್ಷ-ಕಿರಣ, ಬೋಧಕ, ಅಕ್ಷಿಪಟಲ ಇತ್ಯಾದಿಯಾಗಿ ಭಾಷಾಂತರಿಸಿಕೊಳ್ಳುವ ಅಗತ್ಯ ಏನಿದೆ? ಇದು ಆಯಾಯ ವಿಷಯತಜ್ಞರು ವಿವೇಚನೆಯಿಂದ ನಿರ್ವಹಿಸಬೇಕಾದ ಕೆಲಸ.

ದಿನನಿತ್ಯದ ಚಟುವಟಿಕೆಯಲ್ಲಿ ಆಡು ಮಾತಿನ ಭಾಗವಾಗಿ ಸೇರಿ ಹೋಗಿದ್ದ ಪೋಲೀಸು, ಇಂಜಿನಿಯರು, ಡಾಕ್ಟರು, ರೈಲು, ಜಡ್ಜು, ಲಾಯರ್, ಸರ್ಕಲ್ ಇತ್ಯಾದಿ ಪದಗಳನ್ನು ಆರಕ್ಷಕ, ಅಭಿಯಂತರ, ವೈದ್ಯ, ಧೂಮಶಕಟ (ಉಗಿಬಂಡಿ), ನ್ಯಾಯಾಧೀಶ, ವಕೀಲ, ವೃತ್ತ - ಹೀಗೆ ತರ್ಜುಮೆ ಮಾಡಿದ್ದನ್ನು ಪ್ರಾರಂಭಕ್ಕೆ ಜನರೇ ಪ್ರತಿಭಟಿಸಿದ್ದುಂಟು. ಸಾಹಿತಿಗಳು ನಗೆ ಪಾಟಲು ಮಾಡಿದ್ದುಂಟು. ಆದರೂ ಈ ಪದಗಳು ಜಾರಿಗೊಳ್ಳುವ ದೀಕ್ಷೆಯನ್ನು ಹೊಂದಿ ಒದ್ದಾಡುತ್ತಿವೆ.

"ಮಾತೃಭಾಷೆಯಲ್ಲಿ ಶಿಕ್ಷಣ ನೀಡಿದರೆ ಕನ್ನಡ ಭಾಷೆ ಅಭಿವೃದ್ಧಿ ಸಾಧ್ಯ ಎಂದು ಖಚಿತ ಧ್ವನಿಯಲ್ಲಿ ಹೇಳುತ್ತಿದ್ದವರು ಈಗ ನಮ್ಮ ನಡುವೆ ಇಲ್ಲದ ಹಿರಿಯ ವಿಜ್ಞಾನ ಲೇಖಕ ದಿವಂಗತ ಜಿ.ಟಿ. ನಾರಾಯಣರಾವ್". ಕನ್ನಡದ ಸ್ಥಿತಿ ಮಬ್ಬಾಗಿದೆ. ಅದಕ್ಕೆ ಎಲ್ಲರ ಕೊಡುಗೆಯೂ ಇದೆ. ವ್ಯಕ್ತಿ ಪೂಜೆ ನಮ್ಮಲ್ಲಿ ಹೆಚ್ಚಾಗಿರುವುದರಿಂದ ಅವಕಾಶವಾದಿತನ ಬೆಳೆಯುತ್ತಿದೆ. ನಮ್ಮಲ್ಲಿ ಕನ್ನಡ ಭಾಷೆಯ ಬಗ್ಗೆ ಪರಿಣತಿಯ ತರಬೇತಿ ಸಿಗುತ್ತಿಲ್ಲ. ಮಾರುಕಟ್ಟೆ ದರ್ಜೆಯ ಭಾಷಾ ಕಲಿಕೆ ನಡೆಯುತ್ತಿರುವುದು ಅದರ ಬೆಳವಣಿಗೆಗೆ ತೊಡಕಾಗಿದೆ.

ಪ್ರಾಥಮಿಕ ಹಂತದಿಂದ ಮಾತೃಭಾಷೆಯಲ್ಲಿ ಕಲಿಸಬೇಕು ಎಂಬುದು ಜನಾದೇಶವಾಗಬೇಕು. ಮಾತೃಭಾಷೆ ಈ ನೆಲದ ಗ್ರಹಿಕೆಯಾಗಿರುತ್ತದೆ. ಅದನ್ನು ಹೆಚ್ಚು ಆಸ್ವಾದಿಸಲು ಸಾಧ್ಯ. ಅದು ಭಾವಗಳಿಗೆ ಸಂಬಂಧಿಸಿದ ವಿಚಾರ. ಭಾಷೆ ಎಂಬುದು ನಿಸರ್ಗದಿಂದ ಆಗುವ ಸೃಷ್ಟಿ. ಕನ್ನಡದ ಬಗ್ಗೆ ಇಂದಿನ ಪೀಳಿಗೆ ಅನಾಧರಣೆ ಬೆಳೆಸಿಕೊಳ್ಳುವುದು ಸಲ್ಲ. ಸಂಶೋಧಕರಾದ ಮೈಕಲ್ ಫ್ಯಾರೆಡೆ ಹಾಗೂ ಪ್ರಸಿದ್ಧ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟಿನ್ ತಮ್ಮ- ತಮ್ಮ ಭಾಷೆಯಲ್ಲಿ ಸಂಶೋಧನೆ ನಡೆಸಿದರು. ಇಂದಿನ ಯುವಕರು ಹೆಚ್ಚು ಆಲೋಚಿಸಬೇಕು. ತಾವು ಆಯ್ಕೆ ಮಾಡಿಕೊಳ್ಳುವ ಆದ್ಯತೆಗಳಿಗೆ ಯೋಗ್ಯತೆ ಇರುವಂತೆ ನೋಡಿಕೊಳ್ಳಬೇಕು.

ಶಿಕ್ಷಣವನ್ನು ಮಗುವಿನ ಮಾತೃ ಭಾಷೆಯಲ್ಲಿಯೇ ನೀಡಬೇಕು ಎಂಬುದು ಜಗತ್ತಿನಾದ್ಯಂತ ಸ್ವೀಕಾರವಾಗಿರುವ ಶೈಕ್ಷಣಿಕ ನಿಲವು. ತನ್ನ ಮಾತೃಭಾಷೆ ಅಥವಾ ಎರಡನೆಯ ಮಾತೃಭಾಷೆಯಾದ ಪರಿಸರದ ಭಾಷೆ ಅಂದರೆ ರಾಜ್ಯ ಭಾಷೆಯಲ್ಲಿಯೇ ಪ್ರಾಥಮಿಕ ಶಿಕ್ಷಣ ಪಡೆಯುವುದು ಮಗುವಿನ ಮೂಲಭೂತ ಹಕ್ಕು ಎಂದು ಕರ್ನಾಟಕ ಉಚ್ಚನ್ಯಾಯಾಲಯ ಪ್ರತಿಪಾದಿಸಿದೆ. ಅದನ್ನು ಸರ್ವೋಚ್ಚ ನ್ಯಾಯಾಲಯವೂ ಅನುಮೋದಿಸಿದೆ. ಕರ್ನಾಟಕದಲ್ಲಿರುವ ಕನ್ನಡೇತರ ಮಾತೃಭಾಷೆಯ ಮಗುವಿಗೆ ರಾಜ್ಯಭಾಷೆಯಾದ ಕನ್ನಡವನ್ನು ಒಂದು ಭಾಷೆಯಾಗಿಯೂ ಪ್ರಾಥಮಿಕ ಒಂದನೇ ತರಗತಿಯಿಂದ ಕಡ್ಡಾಯವಾಗಿ ಕಲಿಸುವಂತಿಲ್ಲ.

ಮಕ್ಕಳು ಪ್ರಾಥಮಿಕ ಹಂತದ ಮೊದಲ ನಾಲ್ಕು ವರ್ಷಗಳು ತಮ್ಮ ಮಾತೃಭಾಷೆ ಅಥವಾ ಎರಡನೆಯ ಮಾತೃಭಾಷೆಯಾದ ಪರಿಸರ ಭಾಷೆಯನ್ನು ಕಲಿಯುವ ಮೂಲಕ ಭಾಷಾ ಕಲಿಕೆಯ ಕೌಶಲಗಳನ್ನು ಪಡೆದ ಮೇಲೆ ಐದನೇ ತರಗತಿಯಿಂದ ಎಲ್ಲರೂ ಸಮಾನವಾಗಿ ಇಂಗ್ಲೀಷನ್ನು ಎರಡನೆಯ ಭಾಷೆಯಾಗಿ ಕಲಿಯುವುದು ಶೈಕ್ಷಣಿಕವಾಗಿ ಹೆಚ್ಚು ಸಮರ್ಪಕವಾಗಿತ್ತು.

---

೧. ಸುವರ್ಣ ಶಿಕ್ಷಣ (ಡಾ. ಸಿ. ಪಿ. ಕೆ.)- ಪು. ಸಂ. ೯೩

ಈಗ ಮಗು ತನ್ನ ಮಾತೃಭಾಷೆಯನ್ನೂ ಸಮರ್ಪಕವಾಗಿ ಕಲಿಯಲಾಗದ ಗೊಂದಲದ ವಾತಾವರಣ ನಿರ್ಮಾಣವಾಗಿದೆ. ಜೊತೆಗೆ ಪ್ರಾಥಮಿಕ ಹಂತದಿಂದಲೇ ತನ್ನ ಭಾಷೆಗಿಂತ ಇಂಗ್ಲೀಷ್ ಹೆಚ್ಚು ಮಹತ್ವದ ಭಾಷೆಯೆಂಬ ಕೀಳರಿಮೆ ಬೆಳೆಯಲೂ ಕಾರಣವಾಗಿದೆ.

ಪ್ರಾಥಮಿಕ ಹಂತದಲ್ಲಿ ಭಾಷೆಗಳ ಕಲಿಕೆ ಮತ್ತು ಶಿಕ್ಷಣ ಮಾಧ್ಯಮವನ್ನು ಕುರಿತ ಉಚ್ಚನ್ಯಾಯಾಲಯದ ತೀರ್ಪು ಇನ್ನೂ ಬಾಕಿ ಇರುವಾಗಲೇ ಮಕ್ಕಳ ಶೈಕ್ಷಣಿಕ ಹಕ್ಕನ್ನು ರಕ್ಷಿಸಬೇಕಾಗಿದ್ದ ಸರ್ಕಾರವೇ ಒತ್ತಡಕ್ಕೆ ಮಣಿದು ಒಂದನೇ ತರಗತಿಯಿಂದಲೇ ಇಂಗ್ಲೀಷ್ ಕಲಿಕೆ ಕಡ್ಡಾಯವೆಂಬ ಅಶೈಕ್ಷಣಿಕ ಹಾಗೂ ಸಂವಿಧಾನ ಬಾಹಿರ ನಿರ್ಧಾರವನ್ನು ಕೈಗೊಂಡಿದೆ.

ಇಂಥ ಗೊಂದಲದ ವಾತಾವರಣದ ನಿರ್ಮಾಣಕ್ಕೆ ಭಾಷಾವಾರು ರಾಜ್ಯಗಳ ರಚನೆಯಾದಾಗ ರಾಜ್ಯಗಳಲ್ಲಿ ಆಯಾ ರಾಜ್ಯ ಭಾಷೆಗಳ ಸ್ಥಾನಮಾನ ಕುರಿತಂತೆ ಸಂವಿಧಾನಕ್ಕೆ ಅಗತ್ಯ ತಿದ್ದುಪಡಿಯಾಗದೇ ಇಂಗ್ಲೀಷಿನ ಪ್ರಾಧಾನ್ಯವೇ ಮುಂದುವರೆಯುವಂತಾದುದು ಪ್ರಮುಖ ಕಾರಣವಾಗಿದೆ. ಕನ್ನಡ ಈಗಾಗಲೇ ವಾಣಿಜ್ಯ ಶಿಕ್ಷಣದ ಪಠ್ಯಭಾಷೆಗಳಲ್ಲಿ ಒಂದಾಗಿ ಮತ್ತು ಮಾಧ್ಯಮವಾಗಿ ಅಸ್ತಿತ್ವದಲ್ಲಿದೆ. ಆದರೆ ಹೇಗಿರಬೇಕಾಗಿತ್ತೊ ಹಾಗಿಲ್ಲ. "ಮೊಟ್ಟ ಮೊದಲ ಬಾರಿಗೆ ಕನ್ನಡವನ್ನು ವಾಣಿಜ್ಯ ಶಿಕ್ಷಣದ ಒಂದು ಪಠ್ಯ ಭಾಷೆಯಾಗಿ ಅಳವಡಿಸಿದ ಕೀರ್ತಿ ಧರ್ಮಪ್ರಕಾಶ ಡಿ. ಬನುಮಯ್ಯ ಕಾಲೇಜಿನ ಸ್ಥಾಪಕ ಪ್ರಾಚಾರ್ಯರಾದ ದಿವಂಗತ ಬಿ.ವಿ. ಬನುಮಯ್ಯನವರಿಗೆ ಸಲ್ಲಬೇಕು".

ಶ್ರೀ ಕುವೆಂಪು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದಾಗ (ಐವತ್ತರ ದಶಕದಲ್ಲಿ) ಅಂದಿನ ಪ್ರಭಾವಿ ಸಿಂಡಿಕೇಟ್ ಸದಸ್ಯರಾಗಿದ್ದ ದಿವಂಗತರು ಕುಲಪತಿ ಕುವೆಂಪುರವರ ಕುಮ್ಮಕ್ಕಿನಿಂದ ವಾಣಿಜ್ಯ ಶಿಕ್ಷಣದಲ್ಲಿ ಕನ್ನಡ ಒಂದು ಪಠ್ಯಭಾಷೆಯಾಗಿ ಸೇರ್ಪಡೆಯಾಗುವಂತೆ ಮಾಡಿ ಮಹಾಕವಿಗಳ ಪ್ರಶಂಸೆಗೆ ಪಾತ್ರರಾದರು.

ಹೀಗೆ ನಾಲ್ಕು ದಶಕಗಳಿಂದಲೂ ವಾಣಿಜ್ಯ ಶಿಕ್ಷಣದಲ್ಲಿ ಕನ್ನಡ ಒಂದು ಪಠ್ಯಭಾಷೆಯಾಗಿ ಅಸ್ತಿತ್ವದಲ್ಲಿದ್ದರೂ ಸಹ ಪ್ರಸಕ್ತ ಸ್ಥಿತಿಯಲ್ಲಿ ಅದು ಬೇರೊಬ್ಬರ ಅಧೀನದಲ್ಲಿ ಉದ್ಯೋಗಿಯಾಗಿ ಕೆಲಸ ಮಾಡುವುದು ಹೇಗೆಂಬುದನ್ನು ತಿಳಿಸುವಂತಿದೆಯೇ ಹೊರತು ವಾಣಿಜ್ಯ ಪದವೀಧರ ಸ್ವಯಂ ಉದ್ಯೋಗಿಯಾಗಿ ತನ್ನ ಭವಿಷ್ಯವನ್ನು ಹೇಗೆ ರೂಪಿಸಿಕೊಳ್ಳಬೇಕೆಂಬುದನ್ನು ತಿಳಿಸುವಂತಿಲ್ಲ. ಇಂದಿನ ವಾಣಿಜ್ಯ ಶಿಕ್ಷಣದ ಕನ್ನಡ ಪಠ್ಯದಲ್ಲಿ ಸಾಹಿತ್ಯ ಮತ್ತು ವಾಣಿಜ್ಯ ಕನ್ನಡದ ಸಮುಚಿತ ಸಂಗಮವಾಗಿದೆ. ಸಾಹಿತ್ಯ ವ್ಯಾಸಂಗ ಮಾನಸಿಕ ಆರೋಗ್ಯಕ್ಕೆ ಅತ್ಯಗತ್ಯ ಪಥ್ಯ. ವಾಣಿಜ್ಯ ಕನ್ನಡ ದೈನಂದಿನ ಅಗತ್ಯ. ಇತ್ತೀಚೆಗೆ ವಾಣಿಜ್ಯ ವಿಭಾಗದವರು ಸಮಗ್ರ ವಾಣಿಜ್ಯ ಶಿಕ್ಷಣ ಪಠ್ಯಕ್ರಮವನ್ನು ಪರಿಷ್ಕರಿಸಿ ಬಿ.ಕಾಂ.ಗೆ ಬದಲಾಗಿ 'ಬಿಸಿನೆಸ್ ಸ್ಟಡೀಸ್' ಎಂಬ ಪದವಿಯನ್ನು ಅಸ್ತಿತ್ವಕ್ಕೆ ತರಲು ಪ್ರಯತ್ನಿಸುತ್ತಿದ್ದಾರೆ.

ಆ ಪ್ರಯತ್ನ ಅಂತಿಮ ಹಂತ ತಲುಪುತ್ತಿದೆ. ಪರಿಷ್ಕೃತ ಪಠ್ಯಕ್ರಮದಲ್ಲಿ ಕನ್ನಡ ಭಾಷಾ ವ್ಯಾಸಂಗವನ್ನು ಮೊದಲ ಪದವಿ ತರಗತಿಗೆ ಮಾತ್ರ ಸೀಮಿತಗೊಳಿಸುವ ಪ್ರಸ್ತಾವನೆಯಿದೆಯೆಂದು ತಿಳಿದು ಬಂದಿದೆ.

ಕನ್ನಡ ವಾಣಿಜ್ಯ ಶಿಕ್ಷಣದಲ್ಲಿ ಮಾಧ್ಯಮವಾಗಿ ನೆಲೆಯೂರಿದ್ದು ಗ್ರಾಮೀಣ ಹಿನ್ನೆಲೆಯುಳ್ಳ 'ನಾಡೋಜ' ದೇಜಗೌ ಕುಲಪತಿಗಳಾಗಿದ್ದಾಗ. ಆದರೆ ವಾಣಿಜ್ಯ ಶಿಕ್ಷಣ ಕನ್ನಡ ಮಾಧ್ಯಮದ ಬಗ್ಗೆ ಮಾತ್ರವಲ್ಲ ಸಮಗ್ರ ಶಿಕ್ಷಣ ಕನ್ನಡ ಮಾಧ್ಯಮದ ಬಗ್ಗೆಯೇ ಇಂದಿಗೂ ಕನ್ನಡಿಗರಿಗೆ ಒಂದು ಬಲವಾದ ಪೂರ್ವಾಗ್ರಹವಿದೆ. ಕನ್ನಡನಾಡಿನ ನೆರೆಹೊರೆಯ ರಾಜ್ಯಗಳಲ್ಲಿ ಆಯಾ ರಾಜ್ಯ ಭಾಷಾ ಮಾಧ್ಯಮಗಳಲ್ಲಿ ಶಿಕ್ಷಣ ಪಡೆದವರು ಇನ್ನೆಲ್ಲಿ ಸಲ್ಲದಿದ್ದರೂ ರಾಜ್ಯದ ಒಳಗಂತೂ ಸಲ್ಲುವಂತಹ ಪರಿಸ್ಥಿತಿಯಿದೆ. ನೆರೆಯ ತಮಿಳುನಾಡಿನಲ್ಲಿ ಅಂಥವರಿಗೆ ಉದ್ಯೋಗ ಕ್ಷೇತ್ರದಲ್ಲಿ ಪ್ರಥಮ ಪ್ರಾಶಸ್ತ್ಯ ಸಲ್ಲುತ್ತಿದೆ. ಕನ್ನಡ ನಾಡಿನಲ್ಲಿ ಮಾತ್ರ ಕನ್ನಡ ಮಾಧ್ಯಮದ ಬಗ್ಗೆ ಇಂದಿಗೂ ವಾದ ವಿವಾದಗಳು ನಡೆಯುತ್ತಿವೆ.

ಕನ್ನಡ ಮಾಧ್ಯಮದ ಜೊತೆ ಜೊತೆಯಲ್ಲೇ ಇಂಗ್ಲೀಷ್ ಮಾಧ್ಯಮವೂ ಅಸ್ತಿತ್ವದಲ್ಲಿದ್ದು ಯಾರು ಬೇಕಾದರೂ ಅದನ್ನು ಆಯ್ಕೆ ಮಾಡಿಕೊಳ್ಳಬಹುದಾಗಿದೆ.

ಇಂಗ್ಲೀಷ್‌ನಲ್ಲಿ ಕಲಿತವರು, ಕನ್ನಡದಲ್ಲಿ ಕಲಿತವರು ಎಂಬ ವಿಭಿನ್ನ ವರ್ಗ ಭೇದ ಸೃಷ್ಟಿಯಾಗುವುದಿಲ್ಲವೆ? ಕನ್ನಡ ಮಾಧ್ಯಮದಲ್ಲಿ ಪದವಿ ಪೂರ್ವ ಶಿಕ್ಷಣ ಮುಗಿಸಿದವರು ಕೇವಲ ಇಂಗ್ಲೀಷ್ ಮಾಧ್ಯಮವಾಗಿರುವ ತಾಂತ್ರಿಕ ಹಾಗೂ ವೈದ್ಯಕೀಯ ಕ್ಷೇತ್ರಗಳಿಗೆ ಪ್ರವೇಶ ಪಡೆದು ಇತರರೊಡನೆ ಸ್ಪರ್ಧಿಸುವುದಾದರೂ ಹೇಗೆ? ಕರ್ನಾಟಕ ಸರ್ಕಾರದ ವಿವಿಧ ಹುದ್ದೆಗಳಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಎಲ್ಲಾ ಸ್ಪರ್ಧಾ ಪರೀಕ್ಷೆಗಳಲ್ಲಿ ಸಾಮಾನ್ಯ ಭಾಷೆಯಾಗಿ ಇಂಗ್ಲೀಷ್ ಕಡ್ಡಾಯವಾಗಿರುವಾಗ ಕನ್ನಡದವರು ಇತರರ ಮಟ್ಟಕ್ಕೇರುವುದು ಸಾಧ್ಯವೆ?

ಕನ್ನಡವೇ ಆಡಳಿತ ಭಾಷೆಯಾಗಿರುವ ಕರ್ನಾಟಕದಲ್ಲಿ ಎಲ್ಲಾ ಪರೀಕ್ಷೆಗಳಿಗೂ ಇಂಗ್ಲಿಷ್ ಏಕೆ ಕಡ್ಡಾಯ ವಾಗಿರಬೇಕು? ಇವೆಲ್ಲ ಯಾವ ಕನ್ನಡ ಅಭಿಮಾನಿಯಾದರೂ, ಹಿತೈಷಿಯಾದರೂ ಕೇಳಬಹುದಾದ ಪ್ರಶ್ನೆಗಳು.

ಕನ್ನಡಿಗರು ಕೀಳರಿಮೆಯನ್ನು ಕಿತ್ತೆಸೆದು ಕನ್ನಡ ನಾಡಿನಲ್ಲಿ ಕನ್ನಡದ ಮೂಲಕವೇ ತಮ್ಮ ಭವಿಷ್ಯ ರೂಪಿಸಿಕೊಳ್ಳುವಂತಾಗಬೇಕಾದರೆ ಎಲ್ಲಿಯೂ ಇಂಗ್ಲಿಷ್ ಕಡ್ಡಾಯವಾಗಿರಬಾರದು.

ಬದಲಿಗೆ ಕನ್ನಡ ಎಲ್ಲೆಡೆಯೂ ಕಡ್ಡಾಯವಾಗಿರಬೇಕು. ಅಗತ್ಯವಾದರೆ ಸಂವಿಧಾನಕ್ಕೆ ತಿದ್ದುಪಡಿ ತಂದು ಎಲ್ಲ ರಾಜ್ಯಗಳಲ್ಲಿ ಆಯಾ ರಾಜ್ಯ ಭಾಷಾಮಾಧ್ಯಮದ ಮೂಲಕ ಕಲಿತವರಿಗೆ ಉದ್ಯೋಗ ಮೀಸಲಾತಿ ಇರುವಂತಹ ವ್ಯವಸ್ಥೆ ಮಾಡಬೇಕು. ಮಾಧ್ಯಮಕ್ಕೂ ಭಾಷಾಜ್ಞಾನಕ್ಕೂ ಎಲ್ಲಿಗೆಲ್ಲಿಯ ನಂಟು? ಮಾಧ್ಯಮ ಯಾವುದಾದರೇನಂತೆ ಬೇಕಾದ ಭಾಷೆಯನ್ನು ಚೆನ್ನಾಗಿ ಕಲಿಯಬಾರದೆಂದಿದೆಯೆ? ಎಂಬುದು ಇತ್ತೀಚಿನ ತರ್ಕ. ಈಗಿರುವ ವ್ಯವಸ್ಥೆಯಲ್ಲಿ ಮಾಧ್ಯಮಕ್ಕೂ ಭಾಷಾಜ್ಞಾನಕ್ಕೂ ನಂಟು ಇದ್ದೇ ಇದೆ.

ಏಕೆಂದರೆ ಕನ್ನಡ ಮಾಧ್ಯಮದವರಿಗೂ ಇಂಗ್ಲೀಷ್ ಮಾಧ್ಯಮದವರಿಗೂ ಸಾಮಾನ್ಯವಾದ ಪಠ್ಯವನ್ನೊಳಗೊಂಡ ಇಂಗ್ಲೀಷ್ ಭಾಷಾ ಶಿಕ್ಷಣ ಇಂದು ಶಾಲಾ ಕಾಲೇಜುಗಳಲ್ಲಿ ಜಾರಿಯಲ್ಲಿದೆ. ಹೀಗೆ ಅಭಿವ್ಯಕ್ತಿ ಮಾಧ್ಯಮವಾಗಿ ಇಂಗ್ಲೀಷ್‌ನ್ನು ಸಮರ್ಥವಾಗಿ ಬಳಸಲು ಅನುವು ಮಾಡಿಕೊಡುವ ವಿಶಿಷ್ಟ ಇಂಗ್ಲೀಷ್ ಭಾಷಾ ಶಿಕ್ಷಣವನ್ನು ಕನ್ನಡ ಮಾಧ್ಯಮಕ್ಕೆ ಲಗತ್ತಿಸದಿದ್ದರೆ ಕನ್ನಡ ವಾಣಿಜ್ಯ ಶಿಕ್ಷಣ ಮಾಧ್ಯಮವಾಗಿಯೇ ಏಕೆ ಯಾವ ಶಿಕ್ಷಣ ಮಾಧ್ಯಮವಾಗಿಯೂ ಉಪಯುಕ್ತವೆನಿಸುವುದಿಲ್ಲ ಮತ್ತು ಜನಪ್ರಿಯವಾಗುವುದಿಲ್ಲ.

ಇಂದು ಕನ್ನಡ ನಾಡಿನ ಶಾಲೆಗಳಲ್ಲಿ ಕಡ್ಡಾಯವಾಗಿ ಕನ್ನಡವನ್ನು ಪ್ರಥಮ ಇಲ್ಲವೇ ತೃತೀಯಾ ಭಾಷೆಯಾಗಿ ಕಲಿಸಲಾಗುತ್ತಿದೆ. ಮಾತೃಭಾಷೆ ಅಥವಾ ಪ್ರಥಮ ಭಾಷೆಯಾಗಿ ಕನ್ನಡವನ್ನು ಕಲಿಯುವವನು, ತೃತೀಯ ಭಾಷೆಯಾಗಿ ಆಧುನಿಕ ಭಾರತೀಯ ಭಾಷೆಗಳಲ್ಲಿ ಯಾವುದಾದರೂ ಒಂದು ಇಲ್ಲವೇ ಪ್ರಾಚೀನ ಭಾಷೆಗಳಲ್ಲಿ ಯಾವುದಾದರೂ ಒಂದನ್ನು ಕಡ್ಡಾಯವಾಗಿ ಆಯ್ದುಕೊಳ್ಳಬೇಕು. ಹಿಂದಿ ಅಥವಾ ಸಂಸ್ಕೃತವನ್ನು ಪ್ರಥಮ ಭಾಷೆಯಾಗಿ ತೆಗೆದುಕೊಂಡವನು, ಕಡ್ಡಾಯವಾಗಿ ಕನ್ನಡವನ್ನು ತೃತೀಯ ಭಾಷೆಯಾಗಿ ಓದಲೇಬೇಕು. ಪ್ರಥಮ ಇಲ್ಲವೆ ತೃತೀಯ ಭಾಷೆಯಾಗಿ ಕಲಿಯುವ ಕನ್ನಡ, ಕಡ್ಡಾಯ ಪರೀಕ್ಷಾ ಭಾಷೆ.

ಕರ್ನಾಟಕದ ಹೆಚ್ಚಿನ ಶಾಲೆಗಳಲ್ಲಿ ಕನ್ನಡವೇ ಪ್ರಧಾನ ಭಾಷೆ. ತರಬೇತಿ ಹೊಂದಿದ ಶಿಕ್ಷಕರಿಂದ, ತರಗತಿಗಳಲ್ಲಿ ಕನ್ನಡ ಬೋಧನೆ ಜರುಗುತ್ತಿದೆ. ಬೋಧಕರು ನಿಯಮಾನುಸಾರ, ಸನ್ನಿವೇಶ, ಪ್ರದೇಶ ಮತ್ತು ವಿದ್ಯಾರ್ಥಿಗಳ ಸಾಂಸ್ಕೃತಿಕ ಮಟ್ಟಕ್ಕೆ ಅನುಗುಣವಾಗಿ ಕನ್ನಡವನ್ನು ಕಲಿಸಲಾಗುತ್ತಿದೆ. ಬೋಧನೆಗೆ ಪೂರಕವಾಗಿ ಕರ್ನಾಟಕ ಸರ್ಕಾರದ ಪಠ್ಯಪುಸ್ತಕ ನಿರ್ದೇಶನಾಲಯ (ಬೆಂಗಳೂರು) ಮತ್ತು ಭಾರತ ಸರ್ಕಾರದ ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ (ಮೈಸೂರು) ಗಳ ಸಹಯೋಗದಿಂದ ಸಿದ್ಧಪಡಿಸಿದ ಕನ್ನಡ ಪಠ್ಯಪುಸ್ತಕಗಳನ್ನು ಬಳಸಲಾಗುತ್ತಿದೆ.

ಭಾಷೆ ಮಗುವಿನ ಜೀವನದ ಅವಿಭಾಜ್ಯ ಅಂಗ. ಈ ಮಹತ್ವದ ಅಂಶವನ್ನು ಮನಗಂಡು ಮಗುವಿನ ಸರ್ವತೋಮುಖ ಬೆಳವಣಿಗೆಗೆ ಅನುವಾಗುವಂತೆ ವಿಜ್ಞಾನ, ಗಣಿತ, ಸಮಾಜ ವಿಜ್ಞಾನ, ಆರೋಗ್ಯ ಮತ್ತು ದೈಹಿಕ ಶಿಕ್ಷಣ, ಕಲೆ ಮತ್ತು ಸೃಜನಶೀಲತೆ,

---

೧. ಕರ್ನಾಟಕ ಸಂಪದ (ಡಾ. ಟಿ. ವಿ. ವೆಂಕಟಚಲ ಶಾಸ್ತ್ರಿ)- ಪು. ಸಂ. ೪೦೩

೨. ಕನ್ನಡ ಭಾಷ ಸ್ವರೂಪ (ಡಾ. ಕೆ. ಕೆಂಪೇಗೌಡ)- ಪು. ಸಂ. ೫೨

ಮೌಲ್ಯ ಶಿಕ್ಷಣ ಮುಂತಾದವನ್ನು ಕನ್ನಡ ಭಾಷೆಯ ಕಲಿಕೆಯೊಟ್ಟಿಗೆ ಪರೋಕ್ಷವಾಗಿ ಪರಿಚಯ ಮಾಡಿಕೊಡುವ ಉದ್ದೇಶದಿಂದ, ಈ ಪಠ್ಯಪುಸ್ತಕದ ಪಾಠಗಳಲ್ಲಿ ಪ್ರಯತ್ನಿಸಿದೆ.

೧೯೮೬ ರಿಂದ ಹೊಸ ಶಿಕ್ಷಣ ನೀತಿ ರಾಷ್ಟ್ರದಾದ್ಯಂತ ಜಾರಿಗೆ ಬಂದಿದೆ. ಈ ಸಂದರ್ಭದಲ್ಲಿ ಕರ್ನಾಟಕ ಸರ್ಕಾರವು ಸಹ ಶಿಕ್ಷಣ ಪಠ್ಯಕ್ರಮವನ್ನು ಪರಿಷ್ಕರಿಸಲು ಸಮಿತಿಯೊಂದನ್ನು ರಚಿಸಿತು.

ಈ ಸಮಿತಿ ಸಿದ್ಧಪಡಿಸಿರುವ ಪರಿಷ್ಕೃತ ಪಠ್ಯ ಕ್ರಮಕ್ಕೆ ಹೊಂದುವಂತೆ, ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯ ಮಾರ್ಗದರ್ಶನಗಳನ್ನು ಅಳವಡಿಸಿ ಪ್ರಾಥಮಿಕ ಶಾಲೆಯ ಒಂದು ಮತ್ತು ಎರಡನೆಯ ತರಗತಿಯ ಪಠ್ಯಪುಸ್ತಕವನ್ನು ರಚಿಸಲಾಗಿದೆ. ಈ ಪುಸ್ತಕವನ್ನು ಮಾತೃಭಾಷೆಯಾಗಿ, ಕನ್ನಡ ಕಲಿಯುವ ಮಕ್ಕಳ ಭಾಷಾ ಅವಶ್ಯಕತೆ, ಪ್ರಚಲಿತ ಶಿಕ್ಷಣದ ಸಿದ್ಧಾಂತ, ಮಕ್ಕಳ ಮನೋವಿಕಾಸ, ಭಾಷಾಬೋಧನೆ ಮತ್ತು ಕಲಿಕೆಯ ತತ್ತ್ವಗಳ ಆಧಾರದನ್ವಯ ಸಿದ್ಧಪಡಿಸಿದೆ.

ಒಟ್ಟಿನಲ್ಲಿ ಶಿಕ್ಷಣದಲ್ಲಿ ಕನ್ನಡ ಬಳಕೆ, ಕೇವಲ ಮಾಧ್ಯಮ ಪಠ್ಯಪುಸ್ತಕ ನಿರ್ಮಾಣ, ಪಾರಿಭಾಷಿಕ ಪದ ಸೃಷ್ಟಿ, ಬೋಧಕನ ಪರಿಣತಿ ಇತ್ಯಾದಿ ಸಮಸ್ಯೆಗಳಿಗಷ್ಟೇ ಸೀಮಿತವಾದುದಲ್ಲ. ಇದರಲ್ಲಿ ಇರುವಂಥದ್ದು ಕನ್ನಡದ ಉಳಿವು ಅಳಿವಿನ ಪ್ರಶ್ನೆ. ಬಳಕೆಯಾಗದ ಭಾಷೆ ನೆಲಕಚ್ಚಬೇಕಾಗುತ್ತದೆ.

**ಶಿಕ್ಷಣದ ಸ್ವರೂಪ**

ವಿದ್ಯಾರ್ಥಿ ಮತ್ತು ಶಿಕ್ಷಕ -ಶಿಕ್ಷಣದ ಎರಡು ಮುಖ್ಯ ಅಂಶಗಳು. ವಿದ್ಯಾರ್ಥಿಯಾಗಲು ಸಮಸ್ತರಿಗೂ ಹಕ್ಕಿದೆ. ಕುಶಾಗ್ರಬುದ್ಧಿಯ ಪ್ರತಿಭಾವಂತನು ಹೇಗೋ ಹಾಗೆ ಸಾಧಾರಣಬುದ್ಧಿಯ ಸಾಮಾನ್ಯನೂ, ಅಷ್ಟಕ್ಕೂ ಕಡಿಮೆ ಬುದ್ಧಿಯುಳ್ಳ ಮಂದಮತಿಯೂ ವಿದ್ಯಾರ್ಥಿಯಾಗಲು ಅರ್ಹ. ಎಲ್ಲ ಮಾನವರೂ ಅಕ್ಷರಸ್ಥರಾಗಬೇಕು, ವಿದ್ಯಾವಂತರಾಗಬೇಕು. ಪ್ರಜಾಪ್ರಭುತ್ವವಿರುವ ದೇಶದಲ್ಲಂತೂ ಓದುಬರಹಗಳನ್ನು ತಿಳಿಯದವರಿದ್ದಾರೆಂದರೆ ನಾಚಿಕೆಗೇಡು. ಎಲ್ಲರೂ ಆ ಶಕ್ತಿಯನ್ನು ಪಡೆಯುವವರೆಗೆ ಪ್ರಜಾಪ್ರಭುತ್ವ ಪರಿಪೂರ್ಣವಾಗುವುದಿಲ್ಲ. ವಿದ್ಯೆಯನ್ನು ಪಡೆಯಲು ಬಯಸುವವನೇ ವಿದ್ಯಾರ್ಥಿ. ಜಾತಿ-ಮತ-ಬಣ್ಣ-ಲಿಂಗ-ವಯಸ್ಸು ಇತ್ಯಾದಿಗಳೆಲ್ಲವೂ ಈ ವಿಷಯದಲ್ಲಿ ಅಮುಖ್ಯ. ಪ್ರತಿಯೊಬ್ಬ ಪ್ರಜೆ ಶಿಕ್ಷಣವನ್ನು ಪಡೆಯಲು ಅವಕಾಶವಿರಬೇಕು. ಸುದೈವದಿಂದ ಸ್ವತಂತ್ರ ಭಾರತದಲ್ಲಿ ಇಂಥ ಅವಕಾಶ ಕಲ್ಪಿತವಾಗಿದೆ. ಅದನ್ನು ಎಲ್ಲರೂ ಇನ್ನೂ ಬಳಸಿಕೊಂಡಿಲ್ಲವೆನ್ನುವುದು ಬೇರೆ. ಅವಕಾಶವನ್ನಂತೂ ರಾಷ್ಟ್ರ ಒದಗಿಸಿದೆ.

ಪ್ರತಿಯೊಬ್ಬರೂ ವಿದ್ಯಾರ್ಥಿಗಳಾಗಲು ಅರ್ಹರಾದರೂ ಪ್ರತಿಯೊಬ್ಬರೂ ಶಿಕ್ಷಕರಾಗಲು ಅರ್ಹರಲ್ಲ. ಶಿಕ್ಷಕರಾಗಲು ಮೊದಲಿನ ಅರ್ಹತೆ ವಿಷಯದ ನಿಷ್ಕೃಷ್ಟ ಜ್ಞಾನ. ತಾನೇ ತಿಳಿದುಕೊಂಡಿಲ್ಲದಿರುವುದನ್ನು ಬೇರೆಯವರಿಗೆ ಹೇಗೆ ತಿಳಿಸಲು ಸಾಧ್ಯ? ಕರೆಯಲ್ಲಿ ನೀರಿದ್ದರೆ ತಾನೆ ಹೊಲಗಳಿಗೆ ಉಣಿಸಲು ಸಾಧ್ಯವಾಗುವುದು ? ಯಾವ ವಿಷಯವನ್ನು ಬೋಧಿಸಬೇಕೋ ಅದನ್ನು ಸರಿಯಾಗಿ ಮತ್ತು ಸಮಗ್ರವಾಗಿ ತಿಳಿದುಕೊಂಡಿರುವುದು ಶಿಕ್ಷಕನಿಗೆ ಮೂಲಭೂತ ಅವಶ್ಯಕತೆ. ಒಂದೊಂದು ವಿಷಯದಲ್ಲೂ ಪ್ರತಿದಿನವೂ ಜ್ಞಾನ ಬೆಳೆಯುತ್ತಿದೆ, ವಿಕಾಸಹೊಂದುತ್ತಿದೆ. ಆದ್ದರಿಂದ ಶಿಕ್ಷಕ ಸ್ವಯಂ ನಿತ್ಯವಿದ್ಯಾರ್ಥಿಯಾಗಿ, ಅಭ್ಯಾಸತಪಸ್ವಿಯಾಗಿ ಜ್ಞಾನವನ್ನು ಗಳಿಸಿಕೊಳ್ಳುತ್ತಿರಬೇಕು. ಶಿಕ್ಷಕನಿಗಿರಬೇಕಾದ ಎರಡನೆಯ ಅರ್ಹತೆ ನನಗೆ ತಿಳಿದುದನ್ನು ವಿದ್ಯಾರ್ಥಿಗಳಿಗೆ ಪರಿಣಾಮಕಾರಿಯಾಗಿ ಬೋಧಿಸುವ ಶಕ್ತಿ. ಅನೇಕರು ತಾವು ಸಾಕಷ್ಟು ತಿಳಿದುಕೊಂಡಿದ್ದರೂ ಅದನ್ನು ಇತರರಿಗೆ ತಲುಪಿಸುವ ಕಾರ್ಯದಲ್ಲಿ ವಿಫಲರಾಗುತ್ತಾರೆ. ಬೋಧನೆ ಒಂದು ಕಲೆ. ಅದು ಕೆಲವರಿಗೆ ರಕ್ತಗತವಾಗಿ ಬಂದಿರುತ್ತದೆ. ಇತರರು ಪ್ರಯತ್ನದಿಂದ ರೂಢಿಸಿಕೊಳ್ಳಬಹುದು. ಈ ಕಲೆ ಕರಗತವಾಗುವವರೆಗೂ ಶಿಕ್ಷಕನು ತನ್ನ ವೃತ್ತಿಯಲ್ಲಿ ಸಫಲನಾಗುವುದಿಲ್ಲ. ಈ ಎರಡು ಅರ್ಹತೆಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಕಾಳಿದಾಸ ಮಹಾಕವಿಯು ಹೇಳಿರುವ ಮಾತು ಇಂತಿದೆ-

ಶ್ಲಿಷ್ಟಾಕ್ರಿಯಾ ಕಸ್ಯಚಿದಾತ್ಮ ಸಂಸ್ಥಾ
ಸಂಕ್ರಾಂತಿರನ್ಯಸ್ಯ ವಿಶೇಷಯುಕ್ತಾ |
ಯಸ್ಯೋಭಯಂ ಸಾಧು ಸ ಶಿಕ್ಷಕಾಣಾಂ
ಧುರಿ ಪ್ರತಿಷ್ಠಾಪಯಿತವ್ಯ ಏವ||

(ಒಬ್ಬನಿಗೆ ವಿದ್ಯೆ ಚೆನ್ನಾಗಿ ಮೈಗೂಡಿರುತ್ತದೆ. ಮತ್ತೊಬ್ಬನಿಗೆ ಬೋಧನೆಯಲ್ಲಿ ನೈಪುಣ್ಯವಿರುತ್ತದೆ. ಯಾವನಿಗೆ ವಿದ್ಯೆ ಮತ್ತು ಬೋಧನೆ ನೈಪುಣ್ಯಗಳೆರಡೂ ಸಿದ್ಧಿಸಿವೆಯೋ ಅವನನ್ನೇ ಶಿಕ್ಷಕ ಸ್ಥಾನದಲ್ಲಿ ಕೂಡಿಸಬೇಕು)

ವಿಷಯಗಳೆಂಬ ಸರಕುಗಳನ್ನು ಶಿಷ್ಯರ ಮಿದುಳೆಂಬ ಚೀಲದಲ್ಲಿ ತುರುಕುವುದು ಮಾತ್ರ ಶಿಕ್ಷಕನ ಕರ್ತವ್ಯವೆಂದು ತಿಳಿಯುವುದು ಶುದ್ಧ ತಪ್ಪು. ವಿದ್ಯಾರ್ಥಿಯ ಬೌದ್ಧಿಕ ಮತ್ತು ಮಾನಸಿಕ ವಿಕಾಸಕ್ಕೆ ಅವಕಾಶವನ್ನು ಕಲ್ಪಿಸುವುದು ಮತ್ತು ವ್ಯಕ್ತಿತ್ವವನ್ನು ರೂಪಿಸುವುದು ಶಿಕ್ಷಕನ ಕರ್ತವ್ಯದ ಭಾಗ. ಮಕ್ಕಳ ಪ್ರತಿಭೆ ಎಳೆಯ ಮೊಳಕೆಯ ಹಾಗೆ ಮೃದು. ಬಾಲ್ಯದಲ್ಲಿ ಅದಕ್ಕೆ ಪ್ರೋತ್ಸಾಹವೆಂಬ ನೀರು ಸಿಗದಿದ್ದರೆ ಅದು ಮುರುಟಿ ಹೋಗುತ್ತದೆ. ವಿದ್ಯಾರ್ಥಿಗಳಿಗೆ ಅಧ್ಯಾಪಕರೇ ಆದರ್ಶ. ಅವರ ರೀತಿನೀತಿಗಳನ್ನೂ ನಡೆನುಡಿಗಳನ್ನೂ ವಿದ್ಯಾರ್ಥಿಗಳು ಅನುಸರಿಸಲು ಮತ್ತು ಅನುಕರಿಸಲು ಪ್ರಯತ್ನಿಸುತ್ತಾರೆ. ಈ ವಿಷಯದಲ್ಲಿ ಅಧ್ಯಾಪಕರ ಹೊಣೆಗಾರಿಕೆ ಅತ್ಯಂತ ಹೆಚ್ಚು. ವಿದ್ಯಾರ್ಥಿಗಳಿಗೆ ಅವರು ಉತ್ತಮ ಮೇಲ್ಪಂಕ್ತಿಯನ್ನು ಹಾಕಿಕೊಡಬೇಕು. ಎಷ್ಟೇ ನೀತಿ ಪಾಠವನ್ನು ಹೇಳಿಕೊಟ್ಟರೂ ಕೂಡ, ಅಧ್ಯಾಪಕರೇ ದುರ್ವರ್ತನೆಯನ್ನು ನಡೆಸುತ್ತಿದ್ದರೆ ವಿದ್ಯಾರ್ಥಿಗಳು ಒಳ್ಳೆಯ ನಡತೆಯವರಾಗಿರುವುದು ಕಷ್ಟ. ಯಥಾ ರಾಜಾ ತಥಾ ಪ್ರಜಾ. ಯಥಾ ಅಧ್ಯಾಪಕಃ ತಥಾ ವಿದ್ಯಾರ್ಥಿ.

ಪ್ರಾಚೀನ ಭಾರತದಲ್ಲಿ ಗುರುವಿಗೆ ಅತ್ಯುನ್ನತ ಸ್ಥಾನವಿತ್ತು. "ಆಚಾರ್ಯದೇವೋ ಭವ" (ನಿನ್ನ ಉಪಾದ್ಯಾಯನನ್ನೇ ದೇವರೆಂದು ತಿಳಿ) ಎಂದು ತೈತ್ತಿರೀಯೋಪನಿಷತ್ತು ಘೋಷಿಸುತ್ತದೆ. ಗುರುವೇ ಬ್ರಹ್ಮ, ವಿಷ್ಣು, ಮಹೇಶ್ವರ ಎಂದು ಜನಪ್ರಿಯವಾದ ಶ್ಲೋಕವು ಹೇಳುತ್ತದೆ. ಗುರುವು ವಿದ್ಯಾರ್ಥಿಯನ್ನು ತನ್ನ ಮಗನಂತೆ ಪ್ರೀತಿಸಿ ವಿದ್ಯೆಯನ್ನು ನೀಡಬೇಕೆಂದು ಆಪಸ್ತಂಭ ಧರ್ಮಸೂತ್ರವು ತಿಳಿಸುತ್ತದೆ (ಪುತ್ರಮಿವೈನಮಭಿಕಾಂಕ್ಷನ್).

ಎಲ್ಲ ವಿದ್ಯಾರ್ಥಿಗಳಲ್ಲಿ ಸಮಾನ ಭಾವನೆಯನ್ನು ಗುರು ಅಥವಾ ಶಿಕ್ಷಕ ಇಟ್ಟುಕೊಂಡಿರುವುದು ಅವಶ್ಯಕ. ಯಾವುದೇ ಕಾರಣದಿಂದ ಪಕ್ಷಪಾತ ಮಾಡುವುದು ಸಲ್ಲ. ಆದರೆ ಗುರು ಸಮಾನವಾಗಿ ಪಾಠವನ್ನು ಮಾಡಿದರೂ ವಿದ್ಯಾರ್ಥಿಗಳು ತಮ್ಮ ತಮ್ಮ ಶಕ್ತಿಗೆ ಅನುಗುಣವಾಗಿ ವಿಷಯವನ್ನು ಗ್ರಹಿಸುವುದರಿಂದ ಅವರ ಜ್ಞಾನದಲ್ಲಿ ಅಂತರ ಬರಬಹುದು. ಅದರಲ್ಲಿ ಶಿಕ್ಷಕನ ತಪ್ಪು ಅಥವಾ ದೋಷ ಏನೂ ಇಲ್ಲ. ಇದನ್ನು ದೃಷ್ಟಾಂತದಿಂದ ಒಂದು ಸಂಸ್ಕೃತ ಶ್ಲೋಕವು ತಿಳಿಸಿಕೊಟ್ಟಿದೆ-

ಕಿರತಿ ಪ್ರಕರಂ ಗವಾಂ ಪ್ರಕಾಮಂ
ಸುಮನಸ್ಸ್ವಚ್ಛತರಂ ಕಲೌ ನಿಧೀನಾಮ್|
ಕತಿಚಿತ್ ಕಲಯಂತಿ ಯತ್ ಪ್ರಬೋಧಂ
ಕತಿಚಿನ್ನೇತಿ ಸ ತತ್ ಸ್ವಭಾವ ಏವ||

(ಪುಷ್ಪಗಳ ಗಡಣದೊಳು ಸುರಿಸುವನು ಶಶಿಯು ಬಿಳುಪಾದ ಕಿರಣಗಳನಲ್ಲಿಲ್ಲ ಭೇದ.
ಅರಳುವುವು ಕೆಲವೇ ಕೆಲವು ಹೂಗಳು ನೋಡು
ಕೆಲವು ಮುಚ್ಚಿದರದಕೆ ಕಾರಣವು ಪ್ರಕೃತಿ)

ವಿದ್ಯಾರ್ಥಿಗೆ ಸಹಜವಾದ ಕುತೂಹಲವನ್ನು ಕೆರಳಿಸಿ ಅವನ ಜ್ಞಾನದಾಹವನ್ನು ತಣಿಸಿ ಹೆಚ್ಚಿನ ಎತ್ತರಕ್ಕೆ ಏರಲು ಸ್ಫೂರ್ತಿಯನ್ನೂ ಪ್ರಚೋದನೆಯೂ ನೀಡವವನೇ ಶ್ರೇಷ್ಠ ಶಿಕ್ಷಕ. (A great teacher inspirs). ವಿದ್ಯಾರ್ಥಿಯ ವೈಯಕ್ತಿಕ ಬುದ್ಧಿಶಕ್ತಿಯನ್ನು

ಅಳೆದು ಅದಕ್ಕೆ ಸಮುಚಿತವಾದ ಚಾಲನೆಯನ್ನು ನೀಡಿ ಹೆಚ್ಚಿನದನ್ನು ಸಾಧಿಸಲು ಅಧ್ಯಾಪಕ ಸಾಧನವಾಗಬೇಕು. ತನಗೆ ಉತ್ತರ ತಿಳಿಯದೆಂಬ ಕಾರಣದಿಂದ ವಿದ್ಯಾರ್ಥಿಯ ಪ್ರಶ್ನೆಗಳನ್ನು ತುಳಿದು ಹೊಸಕುವ ಶಿಕ್ಷಕ ಶಿಕ್ಷಕನೇ ಅಲ್ಲ. ಶಿಕ್ಷಕ ತನಗಿಂತ ಹೆಚ್ಚಿನ ಜಾಣ್ಮೆಯನ್ನು ತೋರಿಸಿದಾಗಲೂ, ಅದನ್ನು ಪ್ರೋತ್ಸಾಹಿಸಿ ಬೆಳೆಸುವ ಶಿಕ್ಷಕ ಆದರ್ಶ ಗುರು.

ಶಿಕ್ಷಣ ಎಂಬ ಪದ ಬಹಳ ವ್ಯಾಪಕವಾದ ಅರ್ಥವನ್ನು ಹೊಂದಿದ್ದು ಜೀವನದ ಎಲ್ಲ ಕ್ಷೇತ್ರಗಳನ್ನು ಒಳಗೊಂಡಿದೆ. ಪ್ರಾಥಮಿಕ, ಮಾಧ್ಯಮಿಕ, ಪ್ರೌಢ, ಪದವಿಪೂರ್ವ, ವಿಶ್ವವಿದ್ಯಾನಿಲಯ, ಸ್ನಾತಕೋತ್ತರ, ವೈದ್ಯಕೀಯ, ತಾಂತ್ರಿಕ, ವ್ಯಾವಸಾಯಿಕ- ಹೀಗೆ ಹತ್ತುಹಲವಾರು ವಿಗಂಡಣೆಗಳನ್ನುಳ್ಳ ಶಿಕ್ಷಣ ಮಗುವನ್ನು ಪರಿಪೂರ್ಣ ಮಾನವನನ್ನಾಗಿ ಮಾಡುವವರೆಗೆ ಹಬ್ಬಿದೆ. ಜೀವನದ ಹೋರಾಟಕ್ಕೆ ವ್ಯಕ್ತಿಯನ್ನು ಸಜ್ಜುಗೊಳಿಸುವ, ವೃತ್ತಿ ವಿಶೇಷದಲ್ಲಿ ನೈಪುಣ್ಯವನ್ನು ತಂದುಕೊಡುವ, ಮನಸ್ಸಿನ ಪರಿಪಕ್ವತೆಯನ್ನು ಸಾಧಿಸಿಕೊಡುವ ಶಿಕ್ಷಣಗಳಿವೆ. ಯುದ್ಧದಲ್ಲಿ ಶತ್ರುಗಳ ಆಕ್ರಮಣವನ್ನು ತಡೆಯುವ, ಹೋರಾಟದಿಂದ ಶತ್ರುಗಳನ್ನು ಸದೆಬಡಿಯುವ ಸೈನಿಕನಿಗೂ ಶಿಕ್ಷಣ ಬೇಕು. ತನ್ನ ನಟನಾನೈಪುಣ್ಯದಿಂದ ಸಹಸ್ರಾರು ವರ್ಷಗಳ ಹಿಂದಿನ ಯಾವುದೋ ಒಂದು ನೈಜ ಅಥವಾ ಕಾಲ್ಪನಿಕ ಪಾತ್ರವನ್ನು ಜೀವಂತಗೊಳಿಸಿ ಲಕ್ಷಾಂತರ ಜನರ ಹೃದಯಗಳನ್ನು ಸೂರೆಗೈಯುವ ನಟನಿಗೂ ನಟಿಗೂ ಶಿಕ್ಷಣ ಬೇಕು. ಮಾನವನ ಊಹೆಯ ಸೀಮೆಗಳನ್ನೂ ಮೀರಿ ಲಕ್ಷಾಂತರ ಬೆಳಕಿನ ವರ್ಷಗಳ ದೂರದಲ್ಲಿರುವ ನೀಹಾರಿಗಳ ನಿಗೂಢ ಬಸಿರನ್ನು ಸೀಳಿ ಅವುಗಳೊಳಗಿನ ರಹಸ್ಯಗಳನ್ನು ಬಯಲಿಗೆಳೆಯುವ ವಿಜ್ಞಾನಿಗೂ ಶಿಕ್ಷಣ ಬೇಕೇ ಬೇಕು. ಮಾನವನ ಜೀವಿತದ ಪರಿಧಿಯಲ್ಲಿ ಶಿಕ್ಷಣ ಬೇಕಿಲ್ಲದ ಯಾವ ವಿಷಯವೂ ಇಲ್ಲ. ಒಂದೊಂದು ವಿಷಯದಲ್ಲೂ ಇರುವ ಜ್ಞಾನಸಾಗರ ಅಗಾಧವಾಗಿದೆ. ನ್ಯೂಟನ್‌ನಂಥ ಮಹಾ ಮೇಧಾವಿಯು ಕೂಡ 'ನಾನು ಜ್ಞಾನಸಾಗರದ ತಡಿಯಲ್ಲಿ ನಿಂತು ತೀರದಲ್ಲಿರುವ ಮರಳಿನಲ್ಲಿ ಕೆಲವು ಕಪ್ಪೆಚಿಪ್ಪುಗಳನ್ನು ಆರಿಸಿಕೊಳ್ಳುವ ಬಾಲಕನಂತೆ ಇದ್ದೇನೆ. ರಹಸ್ಯಗಳನ್ನು ತನ್ನೊಳಗೆ ಹುದುಗಿಸಿಕೊಂಡಿರುವ ವಿಶಾಲ ಸಾಗರದಲ್ಲಿ ಇನ್ನೂ ಕಾಲಿಟ್ಟಿಲ್ಲ' ಎಂದು ಹೇಳಿದ್ದನಂತೆ. ಇದರಿಂದ ಶಿಕ್ಷಣ ಅನಂತವಾದುದು, ಸರ್ವವ್ಯಾಪಿ ಎಂದು ತಿಳಿದುಕೊಳ್ಳಬಹುದು.

ಮಾತೃಭಾಷೆ ಜ್ಞಾನಾರ್ಜನೆಗೆ ರಾಜಮಾರ್ಗ. ಮನೆಯಲ್ಲಿ ತಂದೆ-ತಾಯಿ, ಬಂಧುಬಳಗ ಎಲ್ಲರೂ ಆಡುವ ಭಾಷೆ ಮಾತೃಭಾಷೆ. ಸಾಮಾನ್ಯವಾಗಿ ಅದೇ ಪರಿಸರದ ಮತ್ತು ಪ್ರದೇಶದ ಭಾಷೆಯಾಗಿರುತ್ತದೆ. ಎಲ್ಲ ಶಿಕ್ಷಣ ತಜ್ಞರೂ ಒಕ್ಕೊರಲಿನಿಂದ ಹೇಳುವುದು ಮಾತೃಭಾಷೆಯೇ ಶಿಕ್ಷಣದ ಮಾಧ್ಯಮ ಆಗಿರಬೇಕೆಂದು. ಈ ವಿಷಯದಲ್ಲಿ ಸಂಶಯ ಅಥವಾ ವಿವಾದಕ್ಕೆ ಎಡೆ ಇರಲೇಬಾರದು. ಆದರೆ ಇಂದಿನ ವಿಶ್ವದಲ್ಲಿ ಜ್ಞಾನದ ವೃದ್ಧಿ ಹೆಚ್ಚಿನ ವೇಗದಿಂದ ಆಗತೊಡಗಿದೆ. ವಿಜ್ಞಾನದ ಸಹಸ್ರಾರು ಶಾಖೆಗಳಲ್ಲಿ ಮತ್ತು ತಂತ್ರಜ್ಞಾನದಲ್ಲಿ ಆಗುತ್ತಿರುವ ಪ್ರಗತಿ ಊಹಾತೀತವಾಗಿದೆ. ವಿಜ್ಞಾನದ ಅನ್ವೇಷಣೆಗಳು ಹೆಚ್ಚಾಗಿ ಯೂರೋಪ್ ಮತ್ತು ಅಮೇರಿಕಾದೇಶಗಳಲ್ಲಿ ಆಗುತ್ತಿವೆ. ಅವರ ಭಾಷೆಗಳಲ್ಲಿ ಆ ಬಗೆಗೆ ಗ್ರಂಥಗಳು ಮತ್ತು ಲೇಖನಗಳು ಪ್ರತಿದಿನವೂ ನೂರಾರು ಸಂಖ್ಯೆಯಲ್ಲಿ ಬೆಳಕಿಗೆ ಬರುತ್ತಿವೆ. ಅವುಗಳನ್ನು ಪರಿಗಣಿಸದೆ ಮತ್ತು ಅರ್ಥಮಾಡಿಕೊಳ್ಳದೆ ಯಾವುದೇ ವೈಜ್ಞಾನಿಕ ಮುನ್ನಡೆಯನ್ನು ಸಾಧಿಸುವುದು ಅಸಾಧ್ಯ. ಹಾಗೆ ಪ್ರಕಟವಾಗಿರುವ ಮತ್ತು ಪ್ರಕಟವಾಗುತ್ತಿರುವ ಎಲ್ಲ ಗ್ರಂಥಗಳನ್ನು ನಮ್ಮ ಭಾಷೆಗಳಿಗೆ ಅನುವಾದ ಮಾಡಿಕೊಳ್ಳುವ ಸೌಲಭ್ಯ ಈಗಿಲ್ಲ. ಒಂದು ವೇಳೆ ಅಂಥ ಸೌಲಭ್ಯ ಒದಗಿದರೂ, ಅನುವಾದಗಳನ್ನು ಕೈಗೊಳ್ಳುವ ಪರಿಣತರಾದರೂ ಇಂಗ್ಲಿಷ್, ಜರ್ಮನ್ ಮುಂತಾದ ಭಾಷೆಗಳನ್ನು ಕಲಿತಿರಬೇಕಾದುದು ಅನಿವಾರ್ಯ. ಐತಿಹಾಸಿಕ ಕಾರಣಗಳಿಂದ ಇಂಗ್ಲಿಷ್ ಭಾರತದಲ್ಲಿ ದೃಢವಾಗಿ ಬೇರುಬಿಟ್ಟಿದೆ. ಆ ಭಾಷೆಯನ್ನು ನಮ್ಮ ಒಡತಿಯಾಗಿ ಮಾಡಿಕೊಂಡು ಅದರ ದಾಸರಾಗುವುದು ಸರ್ವಥಾ ತಪ್ಪು. ಆದರೆ ಅದನ್ನು ನಮ್ಮ ದಾಸಿಯಾಗಿ ಮಾಡಿಕೊಂಡು ಅದರಿಂದ ಪ್ರಯೋಜನವನ್ನು ಪಡೆದರೆ ಏನೂ ತಪ್ಪಿಲ್ಲ. ಈ ಕಾರಣದಿಂದ ವಿಜ್ಞಾನದ ಮತ್ತು ತಂತ್ರಜ್ಞಾನದ ಉನ್ನತ ಶಿಕ್ಷಣದಲ್ಲಿ ಇಂಗ್ಲೀಷನ್ನು ಅಖಿಲಭಾರತ ಮಟ್ಟದಲ್ಲಿ ಮುಂದುವರಿಸುವುದು ಅನುಕೂಲ. ಇದರಿಂದ ಈ ವಿಶಾಲದೇಶದ ಬೇರೆ ಬೇರೆ ವಿಜ್ಞಾನಿಗಳು ಪರಸ್ಪರ ವಿಚಾರವಿನಿಮಯವನ್ನು ಮಾಡಿಕೊಳ್ಳುವುದಕ್ಕೂ ವಿಶ್ವದ ಇತರ ವಿಜ್ಞಾನಿಗಳ ಕಾರ್ಯವಿಚಾರಗಳನ್ನು ತಿಳಿಯುವುದಕ್ಕೂ ನೆರವು ದೊರೆಯುತ್ತದೆ.

ಕಲೆ-ದರ್ಶನ-ಭಾಷೆ ಇತ್ಯಾದಿಗಳ ಬೋಧನೆಗೆ ಕನ್ನಡ ಮುಂತಾದ ಭಾರತೀಯ ಭಾಷೆಗಳು ಸಂಪೂರ್ಣ ಸಮರ್ಥವಾಗಿವೆ. ಅತ್ಯುನ್ನತ ಮಟ್ಟದವರೆಗೂ ಈ ವಿಷಯಗಳ ಶಿಕ್ಷಣ ಮಾತೃಭಾಷೆಯಲ್ಲೇ ನಡೆಯಬೇಕೆನ್ನುವುದರಲ್ಲಿ ಸಂಶಯವೇ ಇಲ್ಲ. ವಿಜ್ಞಾನದ ನಾನಾ ಶಾಖೆಗಳಲ್ಲೂ ಪರಿಣತರು ಗ್ರಂಥರಚನೆಯನ್ನು ಮಾಡುತ್ತಿರುವುದರಿಂದ ಮಾತೃಭಾಷೆಗಳ ಸಿರಿವಂತಿಕೆ ಹೆಚ್ಚುತ್ತಿದೆ. ಬೇರೆ ಭಾಷೆಗಳ ಶಬ್ದಗಳನ್ನು ಸ್ವೀಕರಿಸುವುದರಲ್ಲಿ ಮಡಿವಂತಿಕೆಯನ್ನು ಬಿಟ್ಟರೆ ಕನ್ನಡವೂ ಇಂಗ್ಲೀಷಿನಂತೆ ಶ್ರೀಘ್ರವಾಗಿ ಶ್ರೀಮಂತವಾಗುವುದರಲ್ಲಿ ಸಂದೇಹವಿಲ್ಲ. ನೀರಿನಲ್ಲಿ ಇಳಿದ ಮೇಲೆ ಮಾತ್ರ ಈಜು ಬರುವಂತೆ ಬಳಸಿದ ಮೇಲೆ ಮಾತ್ರ ಭಾಷೆಯ ಶಕ್ತಿ ಬೆಳೆಯುತ್ತದೆ.

ಪ್ರಾಚೀನಕಾಲದಲ್ಲಿ ಗುರುಕುಲಪದ್ಧತಿಯ ಶಿಕ್ಷಣವಿತ್ತೆಂದು ತಿಳಿದುಬರುತ್ತದೆ. ಗುರುಗಳ ಆಶ್ರಮದಲ್ಲೇ ವಿದ್ಯಾರ್ಥಿಗಳಿಗೆ ವಸತಿ, ಊಟ ಇತ್ಯಾದಿ ಸೌಕರ್ಯಗಳಿರುತ್ತಿದ್ದುವು. ಇವುಗಳಿಗಾಗಿ ರಾಜರು ಮತ್ತು ಶ್ರೀಮಂತರು ಉದಾರವಾಗಿ ಧನಧಾನ್ಯಗಳ ನೆರವನ್ನು ನೀಡುತ್ತಿದ್ದರು. ತಕ್ಷಶಿಲಾ, ನಲಂದಾ ಮುಂತಾದ ವಿಶ್ವವಿದ್ಯಾನಿಲಯಗಳಿಗೆ ವಿದೇಶಗಳ ವಿದ್ಯಾರ್ಥಿಗಳೂ ಬರುತ್ತಿದ್ದರೆಂದು ಐತಿಹಾಸಿಕ ದಾಖಲೆಗಳು ತಿಳಿಸುತ್ತವೆ.

ಈಗ ನಮ್ಮ ದೇಶದಲ್ಲಿ ಖಾಸಗಿ ಮತ್ತು ಸರ್ಕಾರಿ ಶಾಲೆಗಳು ಶಿಕ್ಷಣ ಕ್ಷೇತ್ರದ ಎಲ್ಲ ರಂಗಗಳಲ್ಲೂ ಎಲ್ಲ ಮಟ್ಟಗಳಲ್ಲೂ ಇವೆ. ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲೂ ಹಲವಾರು ಸರ್ಕಾರದಿಂದ ಆರ್ಥಿಕ ನೆರವನ್ನು ಪಡೆದು ಅಧ್ಯಾಪಕರಿಗೆ ವೇತನಗಳನ್ನು ನೀಡುತ್ತಿವೆ. ಸಾರ್ವತ್ರಿಕ ಪರೀಕ್ಷೆಗಳನ್ನು ಸರ್ಕಾರವೇ ರಚಿಸಿರುವ ಪರೀಕ್ಷಾಮಂಡಳಿಗಳು ಅಥವಾ ವಿಶ್ವವಿದ್ಯಾನಿಲಯಗಳು ನಡೆಸುತ್ತಿವೆ. ಸಂಸ್ಥೆಗಳ ಆಡಳಿತದ ಮೇಲೂ ಸರ್ಕಾರ ಸಾಕಷ್ಟು ನಿಯಂತ್ರಣವನ್ನು ಹೊಂದಿದೆ.

ಆದರ್ಶ ಸ್ಥಿತಿಯಲ್ಲಿ ಸರ್ಕಾರ ಆರ್ಥಿಕ ನೆರವನ್ನು ನೀಡಬೇಕೇ ಹೊರತು ಯಾವ ನಿಯಂತ್ರಣವನ್ನೂ ಹೊಂದಿರಬಾರದು. ಸಂಸ್ಥೆಗಳು ಸ್ವತಂತ್ರವಾಗಿ ನಡೆಯಲು, ತಮ್ಮದೇ ಆದ ಸ್ಥಾನವನ್ನು ಗಳಿಸಿಕೊಳ್ಳಲು ಅದು ಅವಕಾಶವನ್ನು ಮಾಡಿಕೊಡಬೇಕು. ಪರೀಕ್ಷಾಕ್ರಮದಲ್ಲೂ ಸಂಸ್ಥೆಗಳು ಸ್ವಾತಂತ್ರ್ಯವನ್ನು ಹೊಂದಿರಬೇಕು. ಆದರೆ ನಮ್ಮ ದೇಶದಲ್ಲಿ ಅಂಥ ಆದರ್ಶ ಸ್ಥಿತಿ ಈಗ ಇಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ವಿದ್ಯೆಯ ಅಭಿವೃದ್ಧಿಯನ್ನೇ ಗುರಿಯಾಗಿಟ್ಟುಕೊಂಡು ನಡೆಯುತ್ತಿರುವ ಸಂಸ್ಥೆಗಳು ಕೆಲವು ಮಾತ್ರ. ಹಣವನ್ನೋ ಪ್ರತಿಷ್ಠೆಯನ್ನೋ ಗಳಿಸಲು ಹೊರಟಿರುವವರು ನಡೆಸುವ ಸಂಸ್ಥೆಗಳೂ ಹಲವಾರು ಇರುವುದರಿಂದ ಸರ್ಕಾರ ನಿಯಂತ್ರಣವನ್ನು ಮಾಡದೆ ವಿಧಿಯಿಲ್ಲ. ಜಾತಿ, ಮತ ಮುಂತಾದ ವಿಚಾರಗಳೂ ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಹಾವಳಿ ಮಾಡುತ್ತಿರುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಅಮಾರ್ಗದಿಂದಾದರೂ ಪದವಿಗಳನ್ನು ಗಳಿಸಿಕೊಳ್ಳಬೇಕೆನ್ನುವವರಿಗೂ ಕೊರತೆಯಿಲ್ಲ. ಅಮೆರಿಕೆಯ ವಿಶ್ವವಿದ್ಯಾನಿಲಯಗಳಲ್ಲಿದ್ದಂತೆ ಪ್ರಾಧ್ಯಾಪಕರೇ ವಿದ್ಯಾರ್ಥಿಗಳ ಉತ್ತೀರ್ಣತೆ-ಅನುತೀರ್ಣತೆಗಳನ್ನು ನಿರ್ಧರಿಸುವ ಕ್ರಮ ನಮ್ಮಲ್ಲಿ ಜಾರಿಗೆ ಬಂದರೆ ಪಕ್ಷಪಾತ ನಡೆಯುವ ಸಂದರ್ಭಗಳೇ ಹೆಚ್ಚಾಗಬಹುದು ಎಂಬ ಭಯವಿದೆ. ಈ ಎಲ್ಲ ಕಾರಣಗಳಿಂದ ಆದರ್ಶ ಸ್ಥಿತಿ ಬರುವವರೆಗೆ ಸರ್ಕಾರದ ನಿಯಂತ್ರಣ ಶಿಕ್ಷಣದ ಮೇಲೆ ಇರುವುದು ಅನಿವಾರ್ಯವಾಗುತ್ತದೆ.

## ಆಡಳಿತ

ಕರ್ನಾಟಕದಲ್ಲಿ ನಿರಮ್ಮಳವಾಗಿರುವ ಐ. ಎ. ಎಸ್. ಅಧಿಕಾರಿಗಳಿಗೆ ಕನ್ನಡ ಇದ್ದರೆಷ್ಟು, ಹೋದರೆಷ್ಟು, ಕನ್ನಡ ನೆಲದಲ್ಲಿ ಅಧಿಕಾರ ದಕ್ಕಿದೆ, ಸೌಜನ್ಯಕ್ಕಾದರೂ ಕನ್ನಡ ಭಾಷೆಯನ್ನು ಕಲಿಯಬೇಕೆಂಬ ಸಾಮಾನ್ಯ ತಿಳಿವಳಿಕೆ ಸಹ ಇವರುಗಳಿಗೆ ಇದ್ದಂತಿಲ್ಲ. ಹೀಗಾಗಿ ಕನ್ನಡ ಕರ್ನಾಟಕ ರಾಜ್ಯ ಆಡಳಿತದಲ್ಲಿ ಸಮಗ್ರವಾಗಿ ಜಾರಿಕೊಳ್ಳಲು ಇವರು ಅಡ್ಡಗಾಲು ಹಾಕುತ್ತಾರೆ. ಇಂತಹ ಅಧಿಕಾರಿಗಳ ಇಂಗ್ಲಿಷ್ ಗತ್ತು ನಮ್ಮ ಕನ್ನಡಕ್ಕೆ ಕುತ್ತಾಗಿದೆ.

---

೧. ಪರಿವರ್ತನೆಯೆಡೆಗೆ ಪು. ಸಂ. ೮೬

ಇನ್ನು ಸರಕಾರವನ್ನು ನಡೆಸುವ ಶಾಸಕರು, ಸಚಿವರು ಬಹುಮಟ್ಟಿಗೆ ಈ ಐ. ಎ. ಎಸ್‌ಗಳ ಕೈಗೊಂಬೆಗಳಾಗಿರುತ್ತಾರೆ. ಅವರನ್ನು ನಿಯಂತ್ರಿಸಬೇಕಾದ ಇವರೇ ಅವರ ಕುಣಿತಕ್ಕೆ ತಾಳಹಾಕುವಂತಾಗಿರುವುದರಿಂದ ಕನ್ನಡದ ಪರಿಸ್ಥಿತಿ ಕರ್ನಾಟಕದಲ್ಲೆ ಇನ್ನಷ್ಟು ಹದಗೆಟ್ಟಿದೆ, ಸ್ವಶಕ್ತಿ ಇರುವ, ಮುಂದಾಲೋಚನೆಯುಳ್ಳ ನಾಡಿನ ಶಾಸಕರು, ಸಚಿವರಿಗೆ ಮಾತ್ರ ಐ. ಎ. ಎಸ್. ಗಳಿಂದ ಕನ್ನಡದ, ಕನ್ನಡಿಗರ ಪರವಾದ ಕೆಲಸ ಮಾಡಿಸಲು ಸಾಧ್ಯ.

ಅಂಚೆ, ತಂತಿ, ದೂರವಾಣಿ, ಆದಾಯ ತೆರಿಗೆ, ರೈಲ್ವೆ, ಜೀವ ವಿಮೆ ಇತ್ಯಾದಿಗಳು ನಿರಂತರ ಸಾರ್ವಜನಿಕ ಸಂಪರ್ಕವನ್ನು ಹೊಂದಿರುವ ಕೇಂದ್ರಾಡಳಿತ ಕಛೇರಿಗಳು. ಇಲ್ಲೆಲ್ಲಾ ಹೆಚ್ಚು ಕಡಿಮೆ ತ್ರಿಭಾಷಾ ಸೂತ್ರ ಜಾರಿಯಲ್ಲಿದೆ. ಇಂಗ್ಲಿಷ್, ಹಿಂದಿ, ಭಾಷೆಗಳ ಜೊತೆಗೆ ಕನ್ನಡವೂ ಇಲ್ಲಿ ತಕ್ಕಮಟ್ಟಿಗೆ ಬಳಕೆಯಾಗುತ್ತಿದೆ, ಪೋಸ್ಟ್ ಆಫೀಸನ್ನು ಅಂಚೆಕಛೇರಿ, ಟೆಲಿಗ್ರಾಂ ಅನ್ನು ತಂತಿ, ಮಾಡಿದಂತೆ ವೈರಲೆಸ್ ಅನ್ನು ನಿಸ್ತಂತು ಎಂದು ಅನುವಾದಿಸಲಾಗಿದೆ. ಆದರೆ ಕಾರ್ಡು, ಕವರು, ಡಿಪಾಸಿಟ್, ಮನಿಯಾರ್ಡರ್ ಪದಗಳೇ ಇಂದಿಗೂ ಜಾರಿಯಲ್ಲಿವೆ.

ಪೋನ್ ಬದಲಾಗಿ ದೂರವಾಣಿ ಪದ ಬಳಕೆಯಲ್ಲಿದೆ ನಿಜ. ಆದರೆ ಪೋನ್ ಕಾಲ್ ಮಾಡಿದೆ ಎನ್ನುತ್ತೇವೆಯೇ ಹೊರತು 'ದೂರವಾಣಿ ಕರೆ' ಮಾಡಿದೆ ಎನ್ನುವುದಿಲ್ಲ. ಐ. ಎಸ್. ಟಿ. ಡಿ, ಫ್ಯಾಕ್ಸ್, ಇಂಟರ್‌ನೆಟ್ ಇತ್ಯಾದಿ ಪದಗಳು ವಿದ್ಯಾವಂತರಲ್ಲಿ ಆಡುಭಾಷೆಯಾಗಿ ಚಲಾವಣೆಯಲ್ಲಿದೆ. ಇವುಗಳನ್ನು ಕನ್ನಡೀಕರಿಸುವ ಅಗತ್ಯವೂ ಇಲ್ಲವೆಂದು ತೋರುತ್ತದೆ. ಟೆಲಿಫೋನ್ ಡೈರೆಕ್ಟರಿ, ಟೆಲಿಪೋನ್ ಬಿಲ್ಲುಗಳಾದಿಯಾಗಿ ಎಲ್ಲವೂ ಇಂಗ್ಲೀಷ್ ಮಯ ಈ ಕಛೇರಿಗಳಲ್ಲಿ. ಕನ್ನಡಿಗ ಉದ್ಯೋಗಗಳಿದ್ದರೂ ಅವರಿಂದ ಪರಿಸ್ಥಿತಿ ಕನ್ನಡಕ್ಕೆ ಪೂರಕವಾಗಿಲ್ಲ.

ಆದಾಯ ತೆರಿಗೆ ಕಛೇರಿಗಳಲ್ಲಿ ನಾಮ ಫಲಕಗಳನ್ನು, ಅಧಿಕಾರಿಗಳ ಹೆಸರನ್ನು ಬಿಟ್ಟರೆ ಬೇರೇನೂ ಕನ್ನಡದಲ್ಲಿರುವುದಿಲ್ಲ. ಇದಕ್ಕೆ ಹೋಲಿಸಿದರೆ ರೈಲ್ವೆ ಸ್ಟೇಷನ್ ಅಥವಾ ರೈಲ್ವೆ ಕಚೇರಿಗಳು ಮೇಲು ಜನರ ಕಣ್ಣಿಗೆ ಬೀಳುವಂತೆ ಅಗತ್ಯ ಸಲಹೆ, ಸೂಚನೆ, ಮಾಹಿತಿಗಳನ್ನು ಇಂಗ್ಲೀಷ್ ಹಿಂದಿಯ ಜೊತೆಗೆ ಕನ್ನಡದಲ್ಲೂ ಸ್ಟೇಷನ್ನಿನ ಗೋಡೆಗಳ ಮೇಲೆ ಬೋರ್ಡುಗಳ ಮೇಲೆ ನಮೂದಿಸಿರುತ್ತಾರೆ. ಇಲ್ಲಿನ ಕನ್ನಡ ಬಳಕೆಗೆ ಕೆಲವು ಉದಾಹರಣೆಗಳಿವು.

ರದ್ದಿಯಾತಿ ಹಣ : Cancellation Money

ಆವೇದನಾ ಪತ್ರ : Application form

ಮೇಲೆ ಮಲಗುವ ಸ್ಥಳ : Upper birth

ರಾಜ್ಯ ಸರ್ಕಾರದ ಆಡಳಿತ ಕಚೇರಿಗಳನ್ನು ಸಾರ್ವಜನಿಕ ಸಂಪರ್ಕ ಇರುವ ಇಲಾಖೆಗಳು ಸಾರ್ವಜನಿಕ ಸಂಪರ್ಕ ಅಷ್ಟಾಗಿ ಇರದ ಇಲಾಖೆಗಳು ಎಂದು ವಿಂಗಡಿಸಿಕೊಳ್ಳಬಹುದು. ಯೋಜನೆ (Planning), ಸಾಂಖ್ಯಿಕ (statistics) ವಿಭಾಗಗಳು ಜನರಿಂದ ಸ್ವಲ್ಪ ದೂರ ಇರುವಂತವು.

ಆದರೆ ಪೊಲೀಸ್, ಅಬ್ಕಾರಿ, ಅರಣ್ಯ, ಕಂದಾಯ, ವಿದ್ಯುಚ್ಛಕ್ತಿ, ನಗರಸಭೆ, ಪುರಸಭೆ, ವ್ಯವಸಾಯ, ಸಾರ್ವಜನಿಕ ಶಿಕ್ಷಣ, ಸಹಕಾರಿ ಸಂಘಗಳ ಇಲಾಖೆ, ಖಜಾನೆ ಇಲಾಖೆ, ಕಾಲೇಜು ಶಿಕ್ಷಣ ಇಲಾಖೆ, ಸಮಾಜ ಕಲ್ಯಾಣ ಇಲಾಖೆ, ಉದ್ಯೋಗ ವಿನಿಮಯ ಮತ್ತು ತರಬೇತಿ ಇಲಾಖೆ, ಆಹಾರ ಸರಬರಾಜು ಇಲಾಖೆ, ಸರ್ಕಾರಿ ಆಸ್ಪತ್ರೆ ಇಲ್ಲೆಲ್ಲ ಜನರ ನಿರಂತರ ಎಡತಾಕುವಿಕೆ ಇದ್ದೇ ಇರುತ್ತದೆ. ಇವರಲ್ಲಿ ವಿದ್ಯಾವಂತರೂ ಇರುತ್ತಾರೆ, ಅವಿದ್ಯಾವಂತರೂ ಇರುತ್ತಾರೆ. ಆಡಳಿತ ಭಾಷೆಯ ವರ್ಣವೈವಿಧ್ಯ ಗೋಚರಿಸುವುದು ಇಲ್ಲಿಯೇ.

ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗ ತರಲು ಪ್ರಾಮಾಣಿಕವಾಗಿ ಶ್ರಮಿಸಿದ ಐ. ಎ. ಎಸ್. ಅಧಿಕಾರಿಯೊಬ್ಬರನ್ನು ಕನ್ನಡ ಜನತೆ "ಕನ್ನಡದ ಸಾರಥಿ" ಎಂದು ಪ್ರೀತಿಯಿಂದ ಕರೆದಿದ್ದಾರೆ. ಈ ಕನ್ನಡಪರ ಅಧಿಕಾರಿ ಬಿ. ಪಾರ್ಥ ಸಾರಥಿ, ಮಾಹಿತಿ ವರದಿಯು ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೆ ತರುವ ನೀತಿಯಾಗಿದೆ.

ಈ ವರ್ಗಕ್ಕೆ ಸಂಬಂಧಿಸಿದ ಹೆಚ್ಚು ಶಬ್ದಗಳು ವಿದೇಶಿ ಮೂಲದಿಂದ ಬಂದಂತಹವುಗಳೇ ಆಗಿವೆ. ಹಲವಾರು ಸಂದರ್ಭಗಳಲ್ಲಿ ಈ ಶಬ್ದಗಳಿಗೆ ಬದಲಾಗಿ ಪರ್ಯಾಯ ಶಬ್ದಗಳನ್ನು ಟಂಕಿಸಲು ಅಸಾಧ್ಯವೆಂಬಷ್ಟರ ಮಟ್ಟಿಗೆ ಈ ಶಬ್ದಗಳು ಪ್ರಭುತ್ವ ಸ್ಥಾಪಿಸಿಬಿಟ್ಟಿವೆ.

ಕನ್ನಡ ಬಳಕೆಯ ಬೇರು ಆಳವಾಗಿ ಇಳಿಯಬೇಕಾದ್ದು ಆಡಳಿತದಲ್ಲಿ ಜನ ಮತ್ತು ಸರಕಾರಗಳ ನಡುವಣ ಸೇತುವೆ ಆಡಳಿತ ಭಾಷೆ. ಜನರ ಭಾಷೆ ಆಡಳಿತದಲ್ಲಿ ಬಳಕೆಗೆ ಬಾರದೆ ಹೋದರೆ ಈ ಸೇತುವೆ ಸಂಪರ್ಕ ಕಡಿದುಹೋಗುತ್ತದೆ. ಆಡಳಿತ ನಡೆಸಲು ಅಗತ್ಯವಾದ ತಾಕತ್ತು ತನಗಿದೆ ಎಂಬುದನ್ನು ಕನ್ನಡ ತೋರಿಸಿಕೊಟ್ಟಿದೆ. ಅದರ ಪೂರ್ವಾತಿಹಾಸವೇ ಇದಕ್ಕೆ ನಿದರ್ಶನವಾಗಿದೆ. ಹೀಗಿದ್ದೂ, ಆಡಳಿತ ಭಾಷೆಯಾಗಿ ಬಳಕೆಗೊಳ್ಳುವಲ್ಲಿ ಕನ್ನಡ ಹಿನ್ನಡೆ ಕಂಡಿದ್ದರೆ, ಅದಕ್ಕೆ ಕಾರಣ ಸ್ವತಃ ಕನ್ನಡಿಗರು ಮತ್ತು ಆಡಳಿತ ರೂಢ ಅಧಿಕಾರಿಗಳು ಹಾಗೂ ಅವರನ್ನು ನಿಯಂತ್ರಿಸಲಾರದ ಅಸಹಾಯಕ ಸರಕಾರ.

ಕನ್ನಡಿಗರ ನಿರಭಿಮಾನ, ನಿರುತ್ಸಾಹ, ಹೊಣೆಗೇಡಿತನ, ತಾಟಸ್ಥ್ಯ ಮನೋಭಾವ, ಅಸಂಘಟನೆ ಅವರ ಭಾಷೆಯ ಇಂದಿನ ಪರಿಸ್ಥಿತಿಗೆ ಬಹುತೇಕ ಕಾರಣ ಎಂದರೆ ಅತಿಶಯೋಕ್ತಿ ಎನಿಸುವುದಿಲ್ಲ, ಕನ್ನಡ ಪ್ರೇಮ ಅವರಲ್ಲಿ ನಿರಂತರವಾಗಿ ಹರಿದು ಬಂದಿದ್ದರೆ. ನೆಲ, ಜಲ, ಭಾಷೆಯ ಸಮಸ್ಯೆ ಕರ್ನಾಟಕದಲ್ಲಿ ಇಷ್ಟು ಉಲ್ಬಣಿಸುತ್ತಿರಲಿಲ್ಲ. ಮಹಾಜನ ವರದಿ, ಮಹಿಷಿ ವರದಿ, ಮೂಲೆ ಗುಂಪಾಗುತ್ತಿರಲಿಲ್ಲ. ಗೋಕಾಕ್ ಚಳುವಳಿಯ ಫಲ ನೆನೆಗುದಿಗೆ ಬೀಳುತ್ತಿರಲಿಲ್ಲ.

ಅರಬ್ಬರು, ಟರ್ಕಿಗಳು, ಮುಸಲ್ಮಾನರು, ತುರ್ಕಿಗಳು, ಡಚ್ಚರು, ಫ್ರೆಂಚರು, ಪೋರ್ಚುಗೀಸರು, ಬ್ರಿಟಿಷರು ಮುಂತಾದವರು ವಿವಿಧ ಉದ್ದೇಶಗಳಿಗಾಗಿ ಕರ್ನಾಟಕದ ಬೇರೆ-ಬೇರೆ ಭಾಗಗಳ ಮೇಲೆ ಹಿಡಿತ ಸಾಧಿಸಿ, ಆ ಪ್ರಾಂತ್ಯಗಳನ್ನು ವಶಪಡಿಸಿಕೊಂಡು ಹಲವಾರು ವರ್ಷಗಳ ಕಾಲ ತಳವೂರಿ, ಆಡಳಿತ ನಡೆಸಿದ ಪರಿಣಾಮವಾಗಿ ಅನೇಕ ಆಡಳಿತ ಸಂಬಂಧಿ ಶಬ್ದಗಳು ಅರಬ್ಬಿ, ಪಾರಸಿ, ಇಂಗ್ಲೀಷ್, ಪೋರ್ಚುಗೀಸ್ ಮುಂತಾದ ಭಾಷೆಗಳಿಂದ ವಲಸೆ ಬಂದು ಕನ್ನಡ ಭಾಷೆಯಲ್ಲಿ ಸೇರಿ ಹೋಗಿ ಬಳಕೆಯಲ್ಲಿವೆ. ಆಡಳಿತ ಘಟಕಗಳಿಗೆ ಸಂಬಂಧಿಸಿದ ಕಸಬ, ಜಿಲ್ಲೆ, ತಹಸೀಲು ತಾಲ್ಲೂಕು, ಮೊಹಲ್ಲಾ, ವಿಲೇಜ್, ಡಿಸ್ಟ್ರಿಕ್ಟ್, ಅಮಲ್ದಾರ್, ರೆವಿನ್ಯೂ, ತಹಸಿಲ್ದಾರ್, ಶೇಕ್‌ದಾರ್, ಶಿರಸ್ತೇದಾರ್, ಜಾಹಗೀರ್, ಜಮೀನ್‌ದಾರ್, ಅಮೀನ್, ಜವಾನ್, ಅಟೆಂಡರ್, ಪ್ಯೂನ್, ಗುಮಾಸ್ತ, ರೈಟರ್, ಕ್ಲಾರ್ಕ್, ವಕೀಲ, ಪೊಲೀಸ್ ಇನ್‌ಸ್ಪೆಕ್ಟರ್, ಕೋರ್ಟ್, ಅದಾಲತ್, ಆಫೀಸ್, ಇಲಾಖೆ, ಕಚೇರಿ, ಅಮಾನತು, ಅಹವಾಲು, ಅರ್ಜಿ, ನೋಟಿಸ್, ಟೆಂಡರು ಮುಂತಾದ ಅರಬ್ಬಿ, ಪಾರಸಿ, ಇಂಗ್ಲಿಷ್ ಶಬ್ದಗಳು ಸಹ ಕನ್ನಡ ಭಾಷೆಯ ಅವಿಭಾಜ್ಯ ಅಂಗಗಳೆನಿಸಿವೆ.

ಕನ್ನಡ ಭಾಷೆಯ ವ್ಯಾಪ್ತಿ ಆಡಳಿತಾತ್ಮಕ ವ್ಯಾಪ್ತಿಗಿಂತ ದೊಡ್ಡದಲ್ಲ. ಕನ್ನಡದ ಭಾಷಾ ಪ್ರಬುದ್ಧತೆಯನ್ನು ಎರಡು ನಿಟ್ಟಿನಲ್ಲಿ ನೋಡಬಹುದು. ೧. ಭಾಷಾ ವೈಶಾಲ್ಯ ೨. ಭಾಷಾ ಬಾಹುಳ್ಯ. ಭಾಷಾ ವೈಶಾಲ್ಯಕ್ಕೆ ಸಂಬಂಧಿಸಿದಂತೆ 'ಕವಿರಾಜ ಮಾರ್ಗ'ದಲ್ಲಿ 'ಕಾವೇರಿಯಿಂದಮಾ ಗೋದಾವರಿ ವರಮಿರ್ದ ನಾಡದಾ ಕನ್ನಡದೊಳ್' ಎಂಬ ಮಾತಿದೆ. ರಾಷ್ಟ್ರಕೂಟರ ಕಾಲದ ಕನ್ನಡ ಭಾಷಾ ವ್ಯಾಪ್ತಿ ಇದು. ಈಗಿನ ಭಾಷಾ ವ್ಯಾಪ್ತಿಗಿಂತ ವಿಸ್ತಾರವಾದುದು. ಕನ್ನಡ ಭಾಷೆಗೆ ಋಷಿ ಮೂಲವಿಲ್ಲ ಎಂಬುದು ನಿಜ. ಈಗಿನ ಭಾಷಾ ರಾಜಕೀಯದ ಹಿನ್ನೆಲೆಯಲ್ಲಿ ಕಲ್ಪಿಸಬೇಕಷ್ಟೆ. ಕನ್ನಡ ಭಾಷೆ ಐತಿಹಾಸಿಕ ಕಾಲಗಳಿಂದಲೂ ದಕ್ಷಿಣ ಭಾರತದಲ್ಲಿ ಪ್ರಮುಖ ಪರಂಪರೆಯುಳ್ಳ ಉತ್ತಮ ಭಾಷೆಯಾಗಿ ಬೆಳೆದಿದೆ.

ಕನ್ನಡ ಶಾಸ್ತ್ರಿಯ ಭಾಷೆಯಾಗಬೇಕಾದುದ್ದು ಇಂದಿನ ಅಗತ್ಯ. ಇದಕ್ಕಾಗಿ ನಾಡಿನಾದ್ಯಂತ ಹೋರಾಟ ನಡೆಯುತ್ತಿದೆ. ಪ್ರಾಚೀನ ಕಾಲದಿಂದಲೂ ಶಾಸ್ತ್ರೀಯ ಭಾಷೆಯಾಗಿ ವಿವಿಧ ಹಂತದಲ್ಲಿ ಕನ್ನಡ ಭಾಷೆ ಉಪಯೋಗದಲ್ಲಿತ್ತು. ಪಾಕಶಾಸ್ತ್ರ, ಗಣಿತಶಾಸ್ತ್ರ, ಭೂಗೋಳಶಾಸ್ತ್ರ, ಅಶ್ವಶಾಸ್ತ್ರ, ಗಜಶಾಸ್ತ್ರ ಮೊದಲಾದ ಗ್ರಂಥಗಳಲ್ಲಿ ಶಾಸ್ತ್ರ ವಿಷಯಗಳಿಗೆ ಅದು ಅಭಿವ್ಯಕ್ತಿ ನೀಡಿದೆ ಮೊದಲಿನಿಂದಲೂ ಆಧ್ಯಾತ್ಮದಂತಹ ತಾತ್ವಿಕ ವಿಚಾರಕ್ಕೆ ಕೂಡ ಕನ್ನಡ ಭಾಷೆ ಪಕ್ವವಾಗಿತ್ತು. ಸಂಸ್ಕೃತಕ್ಕೆ ಭಿನ್ನವಾದ ಪರಿಭಾಷೆಯನ್ನು ಅದು ಸೃಷ್ಟಿಸಿಕೊಂಡಿತ್ತು. ವಚನಕಾರರ ಭಾಷೆ ಇದಕ್ಕೆ ಸ್ಪಷ್ಟ ನಿದರ್ಶನ. ಆಧುನಿಕ ಕಾಲದಲ್ಲಿ ವಿಜ್ಞಾನದ ಭಾಷೆಯಾಗಿ ಅದು ರೂಪುಗೊಂಡಿದೆ.

---

೧.ಮೈಸೂರು ರಾಜ್ಯ ಪು. ಸಂ. ೨೪೭

ಕನ್ನಡ ಭಾಷೆ ಮಡಿವಂತಿಕೆಯ ಭಾಷೆಯಾಗಿರಲಿಲ್ಲ. ತನ್ನ ಸ್ವತಂತ್ರ ಮತ್ತು ಸ್ವಯಂಪೂರ್ಣ ಶಕ್ತಿಯ ಜೊತೆಗೆ ಸಂಪರ್ಕಕ್ಕೆ ಬಂದ ಇತರ ಭಾಷಾ ವಿಷಯಗಳಿಗೆ ಅದು ತೆರೆದುಕೊಂಡಿತ್ತು.

ಜನರು ತಮ್ಮ ಅಹವಾಲು, ಬೇಡಿಕೆ, ದೂರುಗಳನ್ನು ಒಕ್ಕಣೆ, ಪತ್ರ, ಅರ್ಜಿಗಳ ಮುಖಾಂತರ ಸರಕಾರಕ್ಕೆ ಸಲ್ಲಿಸುತ್ತಾರೆ. ಇವೆಲ್ಲ ಅವರವರ ಭಾಷಾ ಸಾಮರ್ಥ್ಯಕ್ಕನುಗುಣವಾಗಿ ಇರುತ್ತವೆ. ಇಲ್ಲವೇ ಒಂದು ಸಾಂಪ್ರದಾಯಿಕ ಮಾದರಿಯನ್ನನುಸರಿಸಿ ಬರೆದವಾಗಿರುತ್ತವೆ.

ಸರಕಾರ ಜನರಿಗೆ ತನ್ನ ನಿರ್ಧಾರ, ಶ್ರಮ, ಯೋಜನೆ, ವಿಧಿ, ವಿಧಾನಗಳನ್ನು, ಪ್ರಕಟಣೆಗಳಲ್ಲಿ ತಿಳಿಸುವುದು ಅಷ್ಟು ಸುಲಭವಲ್ಲ. ಏಕೆಂದರೆ ಸಮಾಜದ ಎಲ್ಲ ಸ್ತರದ ಜನಗಳನ್ನು, ರಾಜ್ಯದ ಎಲ್ಲ ವರ್ಗದ ಜನಗಳನ್ನು, ಎಲ್ಲ ಭಾಷೆಯ ಜನಗಳನ್ನು ಅದು ಮುಟ್ಟಬೇಕು.

ಸರಕಾರದ ಒಳಗೇ ನಡೆಯುವ ಆಡಳಿತದಲ್ಲಿ ಬಳಕೆಯಾಗುವ ಕನ್ನಡ ಹೆಚ್ಚು ತಾಂತ್ರಿಕವಾದುದು, ಗ್ರಂಥಸ್ಥವಾದುದು ಮತ್ತು ಪಾರಿಭಾಷಿಕ ಪದಗಳಿಂದ ಕೂಡಿತ್ತು. ಏಕೆಂದರೆ ಇಲ್ಲಿ ಕೆಲಸ ಮಾಡುವ, ಚರ್ಚೆ ನಡೆಸುವ ಮಂದಿ ಎಲ್ಲರೂ ವಿದ್ಯಾವಂತರು.

ಆಡಳಿತದಲ್ಲಿ ಬಳಕೆಯಾಗುವ ಪಾರಿಭಾಷಿಕ ಪದಗಳಿಗೆ ಕೆಲವು ವಿಶಿಷ್ಟ ಪರಿಮಿತ ಗುಣಗಳಿರುತ್ತವೆ. ಮೊದಲನೆಯದಾಗಿ ಅವುಗಳಿಗೆ ನಿಖರತೆ ಇರಬೇಕು. ಇದರಿಂದ ಅನಪೇಕ್ಷಿತ ವಿವರಣೆಗೆ ಆಡಳಿತದಲ್ಲಿ ಅವಕಾಶ ಇಲ್ಲದಂತಾಗುತ್ತದೆ. 'ಕರಾರು' ಎಂಬ ಈ ಆಡಳಿತ ಕನ್ನಡದ ಪದವನ್ನು ವಿವರಿಸಲು ಹೊರಟರೆ ನಾಲ್ಕಾರು ವಾಕ್ಯಗಳು, ಅಷ್ಟೇಕೆ ಒಂದು ಪರಿಚ್ಛೇದವೇ ಬೇಕಾದೀತು.

ಉತ್ಪಾದಕತೆ ಪಾರಿಭಾಷಿಕ ಪದಕ್ಕಿರಬೇಕಾದ ಮೂಲಗುಣ. ಉತ್ಪಾದಕತ್ವವಿಲ್ಲದ ಪದ ಆಡಳಿತದಲ್ಲಿ ಬಳಕೆಗೆ ಅನರ್ಹ, ವಿತ್ಪನ್ನ ಪ್ರಕ್ರಿಯೆಯಿಂದಾಗಲೀ, ಪ್ರತ್ಯಯೀಕರಣದಿಂದಾಗಲೀ ಒಂದು ಪಾರಿಭಾಷಿಕ ಪದದಿಂದ ಅನೇಕ ಅಂಥ ಪದಗಳು ಸಿದ್ದಿಸುವ ಸಾಧ್ಯತೆ ಇರಬೇಕು.

ಉದಾ:- ವಿದ್ಯೆ ಮತ್ತು ಶಿಕ್ಷಣ, ಈ ಪದಗಳನ್ನು ಆಡಳಿತದಲ್ಲಿ ಗಮನಿಸಬೇಕು, 'ವಿದ್ಯೆ' ಪದದಿಂದ ವಿದ್ಯಾ ಇಲಾಖೆ, ವಿದ್ಯಾಮಂತ್ರಿ ಇತ್ಯಾದಿ ಪದಗಳನ್ನು ರೂಪಿಸಿಕೊಳ್ಳಬಹುದು. ಆದರೆ ಇದಕ್ಕಿಂತ ಹೆಚ್ಚು ಉತ್ಪಾದಕತೆ 'ಶಿಕ್ಷಣ' ಪದದಲ್ಲಿ ಕಂಡುಬರುತ್ತದೆ.

ಒತ್ತುವರಿ, ತೋರಿಕೆ, ತಡೆ, ಕಾಯ್ದಿರಿಸು, ಹೊಣೆಗಾರಿಕೆ, ಕೆಲಸದವೇಳೆ, ಎಚ್ಚರಿಕೆ ಹಣ, ಬರವಣಿಗೆ ತಪ್ಪು, ಮುಂದುವರಿಕೆ ಹಾಳೆ, ಕಣ್ತಪ್ಪು, ಕೈತಪ್ಪು, ಕೈಹಣ, ತಿದ್ದುಪಡಿ-ಇತ್ಯಾದಿ ಅಚ್ಚ ಕನ್ನಡ ಪದಗಳು ಆಡಳಿತದಲ್ಲಿ ಬಳಕೆಯಾಗುತ್ತಿವೆ.

ಉರ್ದು ಮತ್ತು ಪರ್ಷಿಯೋ ಅರಾಬಿಕ್ ಮೂಲದಿಂದ (ದಾವ, ಹಾಜರು, ಮಂಜೂರು, ಬಾಕಿ, ರಹದಾರಿ, ಷರತ್ತು, ರವಾನೆ), ಇಂಗ್ಲಿಷ್ ಮತ್ತು ಇತರ ಪಾಶ್ಚಾತ್ಯ ಭಾಷಾ ಮೂಲದಿಂದ (ಫೈಲು, ಅಫೀಲು, ಆರ್ಡರ್, ಗೆಜೆಟ್, ಲೈಸನ್ಸ್, ನಂಬರ್) ಬಂದ ಎರವಲು ಪದಗಳು ಕನ್ನಡ ಭಾಷೆಯಲ್ಲಿ ಆಡಳಿತವನ್ನು ಸಾಕಷ್ಟು ಸುಲಭಗೊಳಿಸಿದೆ.

ಎರವಲು ಪದಗಳನ್ನು ಕನ್ನಡದ ಜಾಯಮಾನಕ್ಕೆ ತಕ್ಕಂತೆ ಹೊಂದಿಸಿಕೊಂಡು, ಮಾರ್ಪಡಿಸಿಕೊಂಡು ಬಳಸುವುದು ರೂಢಿ. ಹೊಸ ಪದ ಸೃಷ್ಟಿ ಪ್ರಕ್ರಿಯೆಯಲ್ಲಿ ಇದನ್ನು ನಿಚ್ಚಳವಾಗಿ ಗಮನಿಸಬಹುದು. ಶಬ್ದಗಳನ್ನು ರೂಪಿಸುವ ಅನೇಕ ವಿಧಾನಗಳು ಕನ್ನಡದಲ್ಲಿವೆ.

ಅವುಗಳಲ್ಲಿ ಮುಖ್ಯವಾದುವು- ಸಮಾಸ ವಿಧಾನ, ಪರಪ್ರತ್ಯಯ ವಿಧಾನ, ಪೂರ್ವ ಪ್ರತ್ಯಯ ವಿಧಾನ ಮತ್ತು ಸಾದೃಶ್ಯ ಸೃಷ್ಟಿ ವಿಧಾನ.

ದಿನಬಳಕೆಯ ಸಾಮಾನ್ಯ ಪದಗಳಿಗೆ ಆಡಳಿತ ಭಾಷೆಯ ತಾಂತ್ರಿಕ ಶಕ್ತಿಯನ್ನು ತುಂಬುವಂಥ ಕೆಲಸವೂ ನಡೆದಿದೆ. ಬೇರೆ ಬೇರೆ ಭಾಷೆಯ ಪದಗಳನ್ನು ಬೆಸೆದು ಸೃಷ್ಟಿಸಲಾದ ಹೊಸ ರೂಪಗಳು ಯತೇಚ್ಛವಾಗಿ ಆಡಳಿತ ಪದಕೋಶದಲ್ಲಿ ದೊರೆಯುತ್ತದೆ.

"ಡಾ. ಎಸ್. ಎನ್. ಶ್ರೀಧರ್ ಅವರು ತಮ್ಮ 'ಇಂದಿನ ಕನ್ನಡ ರಚನೆ ಮತ್ತು ಬಳಕೆ' ಕೃತಿಯಲ್ಲಿ 'ಕನ್ನಡ ಭಾಷೆಯ ಆಧುನೀಕರಣ' ಕುರಿತಂತೆ ವಿಶ್ಲೇಷಿಸುತ್ತ ಈ ಬಗೆಯ ಹಲವಾರು ಪ್ರಕ್ರಿಯೆಗಳನ್ನು ಪರಿಚಯಿಸಿದ್ದಾರೆ."

ಶಬ್ದಕೋಶದ ವಿಸ್ತರಣೆ, ದೇಶಿಯಲ್ಲದ ರಚನಾಕ್ರಮ ಪದ್ಧತಿಗಳ ಕ್ರಿಯಾತ್ಮಕ ಬಳಕೆ, ಕನ್ನಡಕ್ಕೆ ಇಂಗ್ಲಿಷ್ ರಚನಾ ಕ್ರಮದ ಮಾದರಿಯ ಅಳವಡಿಕೆ, ಮಿಶ್ರ ಭಾಷೆಯ ಬಳಕೆ, ಆಡು ಮಾತಿಗೆ / ಸಂಭಾಷಣೆಗೆ ಬರವಣಿಗೆಯ ರೂಪ ಕೊಟ್ಟಿದ್ದು ಮತ್ತು ಪಾರಂಪರಿಕ ದ್ವಿರೂಪ ರೂಢಿಗಳ ಮುರಿದು ಬೀಳುವಿಕೆ ಮತ್ತು ಬಲಪಡಿಸುವಿಕೆ ಇತ್ಯಾದಿ ಉಪಾಯಗಳು, ಕನ್ನಡ ಭಾಷಾ ಬಳಕೆಯ ಹಿನ್ನೆಲೆಯಲ್ಲಿ ತುಂಬ ಮೌಲಿಕವಾಗಿವೆ.

ಅನುವಾದದ ಮೂಲಕ ಬೇಕಾದ ಪದಗಳನ್ನು ದಕ್ಕಿಸಿಕೊಳ್ಳುವುದು ಆಡಳಿತದಲ್ಲಿ ಸಾಮಾನ್ಯ ಸಂಗತಿ. ಆಡಳಿತ ಪದಕೋಶದಲ್ಲಿರುವ ಬಹುತೇಕ ಪದಗಳು ಅನುವಾದದಿಂದ ಲಭಿಸಿದಂತಹವಾಗಿವೆ. ಇಂಗ್ಲಿಷ್‌ನಿಂದ ಕನ್ನಡಕ್ಕೆ ಭಾಷಾಂತರಗೊಂಡು ಸಾರಕಾಯ್ದೆ, ಆಯವ್ಯಯ, ಸಂಹಿತೆ, ಸಾಕ್ಷಿ ಇತ್ಯಾದಿ ಚಾಲನೆಯಲ್ಲಿವೆ. ಭಾಷಾಂತರದ ವೈಪರೀತ್ಯಗಳನ್ನು ತಪ್ಪಿಸಲು ಭಾರತದ ವೈಜ್ಞಾನಿಕ ಹಾಗೂ ತಾಂತ್ರಿಕ ಶಬ್ದಾವಳಿ ಆಯೋಗ ಕೆಲವು ಸೂಚನೆಗಳನ್ನು ನೀಡಿ ಮಾರ್ಗದರ್ಶನ ಮಾಡಿದೆ.

ವ್ಯಾಕರಣ ಮತ್ತು ವಾಕ್ಯರಚನೆಗೆ ಸಂಬಂಧಪಟ್ಟಂತೆ ಕೂಡ ಆಡಳಿತ ಕನ್ನಡವನ್ನು ವಿಶ್ಲೇಷಣೆಗೆ ಒಳಪಡಿಸಬಹುದು. ಸಾಮಾನ್ಯವಾಗಿ ಕನ್ನಡದಲ್ಲಿ ಕ್ರಿಯಾಪದವನ್ನು ಸೃಷ್ಟಿಸುವ ಪ್ರತ್ಯಯ - ಇದು ಸಂಸ್ಕೃತ, ಉರ್ದು, ಪದಗಳಿಗೆ ಸುಲಭವಾಗಿ ಸೇರುತ್ತವೆ.

ಉದಾ:- ಪೋಷಿಸು, ಪಾಲಿಸು, ಪ್ರಕಟಿಸು, ವಂದಿಸು, ರವಾನಿಸು, ಗುಜರಾಯಿಸು, ಗರಾಯಿಸು, ಠಳಾಯಿಸು, ಟೈಪಿಸು, ಗೋಲಿಸು, ಇಂಗ್ಲಿಷ್‌ನ ಈ ಬಗ್ಗೆ ಕ್ರಿಯಾ ರೂಪಗಳು ಕಡಿಮೆ.

ಆಡಳಿತ ಕನ್ನಡದ ವಾಕ್ಯರಚನೆಯಲ್ಲಿ ಎದ್ದು ಕಾಣುವ ಅಂಶ ಎಂದರೆ ಗ್ರಾಂಥಿಕ ಶೈಲಿ ಮತ್ತು ಸರಳವಲ್ಲದ ರಚನೆ. ಕ್ರಿಯಾಪದ ರಹಿತವಾದ ವಾಕ್ಯರಚನೆ ಕನ್ನಡ ಭಾಷೆಯ ವೈಶಿಷ್ಟ್ಯಗಳಲ್ಲೊಂದು.

ಆಡಳಿತ ಭಾಷೆಯ ವಾಕ್ಯರಚನೆಯಲ್ಲಿ ಎಂಟು ಬಗೆಯ ದೋಷಗಳನ್ನು ಗುರುತಿಸಲಾಗಿದೆ. ಅವು ಯಾವುವೆಂದರೆ

೧) ಕೃತಕತೆ ೨) ಅಸ್ಪಷ್ಟತೆ ೩) ಅಪಾರ್ಥತೆ ೪) ಅರ್ಥರಹಿತತೆ ೫) ಗೊಂದಲಮಯತೆ ೬) ಸುತ್ತು ಬಳಸಿಕೆ ೭) ದಾಸ್ಯ ಮನೋಧರ್ಮ ಮತ್ತು ೮) ವ್ಯಾಕರಣ ಹಾಗೂ ಕಾಗುಣಿತ ದೋಷಗಳು. ಈ ಅಪ್ಪಗ್ರಹಗಳ ಕಾಟದಿಂದ ಮುಕ್ತವಾದ ಕನ್ನಡ ಬಳಕೆ ಆಡಳಿತಕ್ಕೆ ಅಪೇಕ್ಷಣೀಯ.

ರಾಜ್ಯಸರ್ಕಾರದ ಎಲ್ಲಾ ದರ್ಜೆಯ ಅಧಿಕಾರಿಗಳೂ ಜನರೊಂದಿಗೆ ಕನ್ನಡ ಭಾಷೆಯಲ್ಲೇ ವ್ಯವಹರಿಸಬೇಕು. ಸಚಿವಾಲಯದಿಂದ ಹಿಡಿದು ತಹಸಿಲ್ದಾರ್ ಕಛೇರಿಯವರೆಗಿನ ಎಲ್ಲ ಅಧಿಕಾರಿಗಳೂ ಜನರೊಂದಿಗೆ ಕನ್ನಡದಲ್ಲೇ ವ್ಯವಹರಿಸಬೇಕು. ನಮ್ಮ ರಾಜ್ಯದಲ್ಲಿ ಕನ್ನಡ ಭಾಷೆಯ ಮೇಲೆ ಐದು ಭಾಷೆಗಳ ಒತ್ತಡವಿದೆ. ಯಾವುದೇ ಭಾಷಿಕರೂ ಕರ್ನಾಟಕಕ್ಕೆ ಬಂದ ಮೇಲೆ ಇಲ್ಲಿನ ಭಾಷೆಗೆ ಕಡ್ಡಾಯವಾಗಿ ಮಹತ್ವ ನೀಡಬೇಕಾಗಿದೆ. ಇದು ಸಂವಿಧಾನದ ನಿಯಮವೂ ಹೌದು.

ಜಾಗತೀಕರಣದ ವ್ಯವಸ್ಥೆಯಡಿ ವ್ಯವಹರಿಸಲು ಇಂಗ್ಲಿಷ್ ಭಾಷೆಯ ಅಗತ್ಯವಿದೆ. ಆದರೆ ಕನ್ನಡ ನಾಡಿನಲ್ಲಿ ಕನ್ನಡ ವ್ಯಾಪಕವಾಗಿ ಬಳಸಲ್ಪಡಬೇಕು.

ರಾಜ್ಯಾದ್ಯಂತ ಕನ್ನಡಕ್ಕೆ ಪ್ರಾಮುಖ್ಯತೆ ಇರುವಂತೆ ಕಡ್ಡಾಯವಾಗಿ ಅನುಷ್ಠಾನಗೊಳಿಸುವ ಕಾರ್ಯ ಸರ್ಕಾರದ ಮೇಲ್ಮಟ್ಟದಿಂದಲೇ ನಡೆಯಬೇಕು.

ಕನ್ನಡದಲ್ಲೇ ಶಿಕ್ಷಣ ನೀಡುವ ವ್ಯವಸ್ಥೆಯನ್ನು ಸುಧಾರಿಸುವ ಅಗತ್ಯವಿದೆ. ನಾಮ ಪತ್ರಗಳನ್ನು ಕನ್ನಡದಲ್ಲಿ ಬರೆಸಬೇಕು. ಗ್ರಂಥಾಲಯಗಳು ಇರುವ ಕನ್ನಡ ಭವನಗಳನ್ನು ತೆರೆಯಬೇಕು. ಪ್ರತಿ ತಾಲ್ಲೂಕಿನಲ್ಲೂ ಕನ್ನಡ ಭವನ ನಿರ್ಮಿಸಬೇಕು. ಅಲ್ಲಿ ಕನ್ನಡದ ಧ್ವಜ ಹಾರಡಬೇಕು.

ಕರ್ನಾಟಕದಲ್ಲಿ ಕನ್ನಡವನ್ನು ಆಡಳಿತ ಭಾಷೆಯಾಗಿ ಪರಿಣಾಮಕಾರಿ ಅನುಷ್ಠಾನ ಮಾಡಬೇಕು. ರಾಜ್ಯದ ಆಡಳಿತದಲ್ಲಿ ಕನ್ನಡ ಕಡ್ಡಾಯ ಅನುಷ್ಠಾನ ಮೇಲ್ಮಟ್ಟದಲ್ಲೇ ಆಗಬೇಕು. ಕನ್ನಡ ಬಾರದ ಅಧಿಕಾರಿಗಳಿಗೆ ಕನ್ನಡ ಕಲಿಕಾ ತರಬೇತಿ ಕಾರ್ಯಾಗಾರವನ್ನು ಪ್ರಾಧಿಕಾರದ ವತಿಯಿಂದಲೇ ನೀಡಬೇಕು.

ಕನ್ನಡ ಬಾರದ ಅಧಿಕಾರಿಗಳನ್ನು ಸಾರ್ವಜನಿಕ ಸಂಪರ್ಕ ಇಲಾಖೆಗಳಿಂದ ಬೇರೆಡೆ ವರ್ಗಾಯಿಸಬೇಕು. ಸಚಿವರು, ಪ್ರಧಾನ ಕಾರ್ಯದರ್ಶಿ ಸೇರಿದಂತೆ ತಹಶೀಲ್ದಾರ್ ಹಾಗೂ ಕೆಳ ಹಂತದ ಅಧಿಕಾರಿಗಳು ಕನ್ನಡ ಅನುಷ್ಠಾನಕ್ಕೆ ಬದ್ಧರಾಗುವುದರಿಂದ ಮಾತ್ರ ಜಾರಿ ಸಾಧ್ಯ.

ಕನ್ನಡ ಅನುಷ್ಠಾನ ಕೇವಲ ಸರ್ಕಾರಿ ಕಛೇರಿಗಳಲ್ಲಿ ಮಾತ್ರ. ಅಲ್ಲಿ ಖಾಸಗಿ ಮತ್ತು ಅರೆ ಖಾಸಗಿ ಸಂಸ್ಥೆಗಳಲ್ಲೂ ಅನುಷ್ಠಾನಗೊಳಿಸಲು ಆ ಸಂಸ್ಥೆಯ ಮುಖ್ಯಸ್ಥರುಗಳಿಗೆ ತಿಳಿಸಬೇಕು. ಅನ್ಯಭಾಷಿಕರು ಹಾಗೂ ಕನ್ನಡ ಬಾರದ ಅಧಿಕಾರಿಗಳು ಅನಿವಾರ್ಯ ಸಂದರ್ಭ ಹೊರತು ಪಡಿಸಿ ಕನ್ನಡ ಬಳಕೆ ಕಡ್ಡಾಯ ಮಾಡಬೇಕು.

ಕನ್ನಡ ನಾಡಿನಲ್ಲಿ ನಾಮಫಲಕಗಳನ್ನು ಕನ್ನಡದಲ್ಲೇ ಇರಬೇಕು. ಕನ್ನಡಿಗರೇ ಹೆಚ್ಚು ವಾಸಿಸುವ ಗಡಿ ಪ್ರದೇಶಗಳಲ್ಲಿ ನಾಮಫಲಕಗಳು ಕನ್ನಡದಲ್ಲಿ ಅನಂತರ ಹೆಚ್ಚು ಜನರು ಮಾತನಾಡುವ ಭಾಷೆಯಲ್ಲಿ ಇರಬೇಕು. ಬ್ಯಾಂಕುಗಳು, ಕಛೇರಿಗಳು, ಖಾಸಗಿ ಸಂಸ್ಥೆಗಳ ಎಲ್ಲ ಅರ್ಜಿ ನಮೂನೆಗಳು ಕನ್ನಡ ಭಾಷೆಯಲ್ಲೇ ಇರುವಂತೆ ಕ್ರಮ ಕೈಗೊಳ್ಳಬೇಕು.

## ಇ) ವ್ಯವಹಾರ

ಅನ್ಯಸಂಸ್ಕೃತಿಗಳ, ಅನ್ಯಭಾಷಿಕ ಜನರ ಸಂಪರ್ಕದಿಂದಾಗಿ ನಮ್ಮ ಭಾಷೆಯಲ್ಲಿ ಅನೇಕ ಹೊಸಪದಗಳು ಸೇರಿಕೊಂಡಿವೆಯಾಗಲಿ, ನಮ್ಮ ಭಾಷೆ ಅವುಗಳಿಂದ ದೂರವಿಲ್ಲ. ಪ್ರತಿಯಾಗಿ ಅದು ಇನ್ನಷ್ಟು ಸಂಪದ್ಯುಕ್ತವಾಗುತ್ತಲೇ ಬಂದಿದೆ." *"ಖ್ಯಾತ ಅಂಕಣಕಾರ ಎಚ್ಚೆಸ್ಕೆ ಅವರ ಈ ಮಾತುಗಳು ವ್ಯವಹಾರಿಕ ಕನ್ನಡದ ಅಗತ್ಯ ಮತ್ತು ಸ್ವರೂಪವನ್ನು ನವಿರಾಗಿ ಬಿಂಬಿಸಿವೆ."*

ಕನ್ನಡಿಗರ ಉದ್ಯೋಗಾವಕಾಶಗಳಿಗೆ ಸಂಬಂಧಿಸಿದ್ದು ಒಡೆಯರ ವರದಿ. ಹಲವಾರು ಬಗೆಯ ವೃತ್ತಿಗಳಿಗೆ ಸಂಬಂಧಿಸಿದ ಅನ್ಯ ದೇಶೀಯ ಶಬ್ದಗಳು ಕನ್ನಡದಲ್ಲಿ ಬಳಕೆಯಲ್ಲಿದೆ. ಹೊಲಿಗೆ, ಕುಸುರಿ, ಕೃಷಿ, ವೈದ್ಯಕೀಯ ಕ್ಷೇತ್ರ ಮುಂತಾದ ವೃತ್ತಿಗಳಿಗೆ ಸಂಬಂಧಿಸಿದ ಶಬ್ದಗಳು ಈ ವರ್ಗಕ್ಕೆ ಸೇರುತ್ತದೆ. ಪಾರಸಿ, ರಾವುತ, ಮಾವುತ, ಅಂಬಾರಿ, ಕಬೂತರ್ ಖಾನೆ, ಶಿಕಾರಿ, ಜಾನುವಾರು, ರೈತ, ಕಿಸಾನ್, ಜಮೀನ್ ಬೆನಸು (ದಿನಸಿ) ಜಾಯಿರಾತು, ಜಿರಾಯ್ತು, ಕಸಿ (ಸಂಕರವಿಧಾನ) ಬಾಗ್ (ತೋಟ, ಲಾಲ್‌ಬಾಗ್) ಪಾರ್ಕ್, ದಾದಿ, (ದಾಯಕ) (ಪಾರಸಿ) ಆಸ್ಪತ್ರೆ, ದವಾಖಾನೆ, ನರ್ಸ್, ಜುಲಾಬು (ಭೇದಿ) ದರ್ಜಿ, ಡಾರ್ನಿಂಗ್, ರಫ್, ಲೈನಿಂಗು, ಕ್ಯಾನ್ವಾಸ್ ಮುಂತಾದ ವೃತ್ತಿ ಸಂಬಂಧಿ ಶಬ್ದಗಳು ಕನ್ನಡದಲ್ಲಿ ಬೆರೆತು ಹೋಗಿವೆ.

ಈ ವರ್ಗಕ್ಕೆ ಸಂಬಂಧಿಸಿದ ಶಬ್ದಗಳು ಬೇರೆ-ಬೇರೆ ಮೂಲಗಳಿಂದ ಕನ್ನಡಕ್ಕೆ ಬಂದು ನಿತ್ಯವ್ಯವಹಾರದಲ್ಲಿ ಬಳಕೆಯಾಗುತ್ತಿದೆ. ಲಾಭ, ಆದಾಯ, ಪಾಯದೆ, ನವೆ, ಕಮಾಯಿ ಮುಂತಾದ ಅರಬ್ಬಿ ಪಾರಸಿ ಶಬ್ದಗಳು, ಇವುಗಳ ಜೊತೆಗೆ ಪ್ರಾಫಿಟ್, ಇನ್‌ಕಮ್ ಇತ್ಯಾದಿ ಇಂಗ್ಲಿಷ್ ಶಬ್ದಗಳು ಕನ್ನಡದಲ್ಲಿ ಚಾಲ್ತಿಯಲ್ಲಿವೆ. ವ್ಯಾಪಾರದಲ್ಲಿ ನಷ್ಟವನ್ನು ಸೂಚಿಸಲು ರುಕ್ಸಾನು, ಲಾನು ಎಂಬ ಶಬ್ದಗಳನ್ನು ಬಳಸಲಾಗುತ್ತದೆ. ಇವು ಅರಬ್ಬಿಯ ರುಕ್ಸಾನ್, ಇಂಗ್ಲೀಷಿನ ಲಾಸ್ ಎಂಬ ಶಬ್ದಗಳ ರೂಪಾಂತರಗಳು. ಹೀಗೆ ದಗಾ, ದಗಾಕೋರ, ದಗಲ್ಬಾಜಿ, ಎಂಬ ಅರಬ್ಬಿ ಮೂಲದ ಶಬ್ದಗಳು, ಡಜನ್ನು, ಪೆಗ್ಗು, ಗ್ಯಾಲನ್ನು ಎಂಬ ಇಂಗ್ಲೀಷ್ ಮೂಲದ ಶಬ್ದಗಳು, ದಿನಾರ, ದ್ರಮ್ಮ (ದ್ರಮ್ಮು) ಪ್ರಾಚೀನ ನಾಣ್ಯಗಳ ಹೆಸರುಗಳು (ಗ್ರೀಕ್) ನೋಟು, ರೂಪಾಯಿ (ಇಂಗ್ಲಿಷ್) ಮುಂತಾದ ಶಬ್ದಗಳು ಅನ್ಯದೇಶೀಯ ಶಬ್ದಗಳಾಗಿ ಕನ್ನಡದಲ್ಲಿ ಬಳಕೆಯಲ್ಲಿವೆ.

---

೧. ಭಾಷೆ ರಚನೆ ಬಳಕೆ (ಸೋಮಶೇಖರ್ ಗೌಡ) ಪು. ಸಂ. ೧೫೩

೨. ಕನ್ನಡ ಭಾಷ ಸ್ವರೂಪ (ಡಾ. ಕೆ. ಕೆಂಪೇಗೌಡ) ಪು. ಸಂ. ೫೩

ಒಬ್ಬ ವ್ಯಕ್ತಿಯ ಐಹಿಕ ಚಟುವಟಿಕೆಗಳ ವ್ಯವಹಾರವೇ. *'ವ್ಯವಹಾರಿಕ ಕನ್ನಡ'.* ವೃತ್ತಿ, ಕಸುಬು, ವಾಣಿಜ್ಯ, ವಹಿವಾಟು, ವಾಡಿಕೆ, ಪದ್ಧತಿ ಹಾಗೂ ನ್ಯಾಯಾಲಯದ ಕಟ್ಟಳೆಗಳವರೆಗಿನ ಎಲ್ಲ ರೂಪಗಳನ್ನು ಒಳಗೊಳ್ಳುವಂಥದ್ದು. "ವ್ಯವಹಾರವೆಂಬುದು ಆಯಾ ಪ್ರದೇಶದ ಜನಕ್ಕೆ ಸೇರಿದ ವಿಚಾರ. ಆಳುವ ಸರ್ಕಾರ ಯಾವುದೇ ಇರಲಿ, ಅದರ ನಿರ್ವಹಣೆಯ ಭಾಷೆ ಯಾವುದೇ ಆಗಿರಲಿ, ಜನ ಸಾಮಾನ್ಯರು ತಂತಮ್ಮ ಭಾಷೆಗಳಲ್ಲೇ ನಿತ್ಯ ವ್ಯವಹಾರ ನಡೆಸುತ್ತ ಬಂದಿರುವುದು ಇತಿಹಾಸದಲ್ಲಿ ಕಂಡು ಬರುವಂತಹ ಸಂಗತಿ, ವ್ಯವಹಾರ ಸುಗಮವಾಗಲು ಯಾವುದೇ ವಹಿವಾಟಿಗೆ ಸಂಬಂಧಿಸಿದ ಉಭಯ ಕಕ್ಷಿಗಳ ನಡುವಣ ವಿಚಾರ ವಿನಿಮಯದಲ್ಲಿ ತೊಡಕುಂಟಾಗದಿರಲು ಕರಾರನ್ನು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಅರ್ಥ ಮಾಡಿಕೊಳ್ಳುವಂಥ ಸಂದಿಗ್ಧ ಪರಿಸ್ಥಿತಿ ಉಂಟಾಗದಿರಲು ಅವರು ಉಭಯತ: ಅರ್ಥವಾಗುವ ಭಾಷೆಯಲ್ಲೇ ಅದನ್ನು ನಡೆಸುವುದು ಸಹಜವಷ್ಟೆ ಅಲ್ಲ, ಅನಿವಾರ್ಯ ಕೂಡ. ಹೀಗಾಗಿ ಅಂಗಡಿ ಮುಂಗಟ್ಟುಗಳಲ್ಲಿ, ಪೇಟ ಪರಿಷೆಗಳಲ್ಲಿ ಜನರ ಭಾಷೆಯೇ ಬಹಳ ಹಿಂದಿನಿಂದಲೂ ಬಳಕೆಯಲ್ಲಿರುವುದನ್ನು ಕಾಣಬಹುದು.

ಅನೇಕ ಶತಮಾನಗಳಿಂದ ವ್ಯವಹಾರದ ಭಾಷೆಯಾಗಿ ಎಲ್ಲ ರಂಗಗಳಲ್ಲೂ ಬಳಕೆಯಲ್ಲಿದ್ದ ಕನ್ನಡ-ಉತ್ಪಾದನೆ, ವ್ಯಾಪಾರ, ಸಾರಿಗೆ, ಮಾರುಕಟ್ಟೆ, ಉದ್ದಿಮೆ, ರೈಲ್ವೆ ಅನುಕೂಲಗಳು ಹೆಚ್ಚಿದಂತೆಲ್ಲ, ಬಂಡವಾಳಶಾಹಿ, ಅಧಿಕಾರಶಾಹಿ ಪ್ರವರ್ಧಿಸಿದಂತೆಲ್ಲ, ದೂರದ ಜನರೂ, ಸ್ಥಳಗಳೂ ಹತ್ತಿರವಾದಂತೆಲ್ಲ ತನ್ನ ಸ್ಥಾನವನ್ನು ಇಂಗ್ಲೀಷ್‌ಗೆ ತೆರವು ಮಾಡುತ್ತ ಬಂದು, ಪಾಶ್ಚಾತ್ಯ ವಿಜ್ಞಾನ, ತಂತ್ರಜ್ಞಾನ , ಜೀವನ ವಿಧಾನ, ವ್ಯವಹಾರ ಪದ್ಧತಿಗಳು ನಮ್ಮ ಅನುಭವದ ಪರಿಧಿಯನ್ನು ವೃದ್ಧಿಸುವುದರ ಜೊತೆಗೆ ಇಂಗ್ಲಿಷ್ ಮೋಹವನ್ನು ಕನ್ನಡದ ಬಗೆಗೆ ಕೀಳರಿಮೆಯನ್ನು ಬಿತ್ತಿ ಬೆಳೆದವು. ಆಧುನಿಕ ಅಗತ್ಯಕ್ಕೆ ದುರಾಕ್ರಮಣಕ್ಕೆ ತುತ್ತಾದವು.

ತತ್ಫಲವಾಗಿ ವ್ಯವಹಾರಿಕ ಭಾಷೆಯಲ್ಲಿ 'ಕನ್ನಡ ತನ' ಎನ್ನುವುದು ಕಾಣೆಯಾಗಿದೆ.

ಬೆಳಗಾಗೆದ್ದು ಯಾರನ್ನಾದರೂ ಭೇಟಿಯಾದರೆ 'ಗುಡ್ ಮಾರ್ನಿಂಗ್ ಎನ್ನುತೇವೆ. ಬೀಳ್ಕೊಡಲು 'ಗುಡ ಬೈ' ಹೇಳುತ್ತೇವೆ. ಮಲಗುವ ಮುನ್ನ 'ಗುಡ್ ನೈಟ್' ಹೇಳುತ್ತೇವೆ. *'ನಮಸ್ಕಾರ ಕುಶಲವೆ, ಆರೋಗ್ಯವೆ, ಚೆನ್ನಾಗಿದ್ದೀರ'* ಇಂಥ ಶಿಷ್ಟಾಚಾರದ ಮಾತುಗಳು ಕನ್ನಡದಲ್ಲಿದ್ದರೂ ಸಹ ದಿನ ನಿತ್ಯದ ವ್ಯವಹಾರದಲ್ಲಿ ಕನ್ನಡ ವಿದಾಯ ಹೇಳಿದೆ. ಇನ್ನು ನಮ್ಮ ಮಕ್ಕಳು ಡ್ಯಾಡಿ, ಮಮ್ಮಿ, ಎನ್ನದಿದ್ದರೆ ನಮಗೇ ಮುಜುಗರ. ಸ್ನೇಹ ವಲಯದಲ್ಲಿ ಅವು 'ಬಾಯ್ ಸಿಯು' ಇತ್ಯಾದಿ ಹೇಳದಿದ್ದರೆ ಸಂಭಾಷಣೆಯೇ ಮುಗಿಯುವುದಿಲ್ಲ. ಅಷ್ಟೇಕೆ, ನಾವು ಹಾಕುವ ಸಹಿ ಬರೆಯುವ ಪತ್ರ, ನಮ್ಮ ಲೆಟರ್ ಹೆಡ್, ವಿಸಿಟಿಂಗ್ ಕಾರ್ಡ್, ಆಹ್ವಾನ ಪತ್ರಿಕೆ, ಮನೆಯ ಮುಂದಣ ನಾಮಫಲಕ ಎಲ್ಲವೂ ಇಂಗ್ಲಿಷ್‌ಮಯ. ವಸ್ತುಸ್ಥಿತಿ ಹೀಗಿರುವಾಗ ವ್ಯವಹಾರದಲ್ಲಿ ಕನ್ನಡ ಬಳಕೆಯ ಬಗೆಗೆ ಪ್ರಶಂಸೆಯ ಮಾತನಾಡುವುದು ಬೋಳಜ್ಜಿ ತುರುಬು ನೆನೆಸಿಕೊಂಡಂತೆಯೆ. ಈಗಿನ ಈ ಇಂಗ್ಲಿಷಿನ ವ್ಯಾಮೋಹದ ಸ್ಥಾನದಲ್ಲಿ ರಾಷ್ಟ್ರೀಯತೆಯ ದೃಷ್ಟಿಯಿಂದ ಹಿಂದಿಯನ್ನು ಸಂಸ್ಥಾಪಿಸುವ ಕೆಲಸ ವ್ಯವಸ್ಥಿತವಾಗಿ ಉತ್ತರದ ಅಧಿಕಾರಿಗಳಿಂದ ಸಾಗುತ್ತಿದೆ. ಒಂದು ರೀತಿಯಲ್ಲಿ ಇದು ಚೇಳಿನ ಸಂಗ, ಬಿಟ್ಟು ಸರ್ಪದ ಸ್ನೇಹ ಬೆಳೆಸಿದಂತೆ.

## ಈ) ಕಾನೂನು

"ಕಾನೂನಿನಲ್ಲಿ ಒಳಾಡಳಿತ, ಪತ್ರ ವ್ಯವಹಾರ, ನ್ಯಾಯಾಲಯದಿಂದ ಜಾರಿಯಾಗುವ ನೋಟೀಸುಗಳು, ಆದೇಶಗಳು, ಅಲ್ಲಿ ನಡೆಯುವ ನಡವಳಿಗಳು ಎಲ್ಲವೂ ಒಳಗೊಳ್ಳುತ್ತವೆ." ಇದು ಪ್ರತಿಷ್ಠಿತ ಮಹಿಷಿ ಆಯೋಗದ ಹೇಮಲತಾ ಮಹಿಷಿ ಅವರ ಅನುಭವದ ದಾಖಲೆ. ಮುಂದುವರಿದು ಅವರು ಹೀಗೆ ಹೇಳುತ್ತಾರೆ. "ಸಿಬ್ಬಂದಿಯೊಂದಿಗೆ ವ್ಯವಹಾರ, ಹೊರಗಿನವರೊಂದಿಗೆ ಪತ್ರವ್ಯವಹಾರ ಇವುಗಳನ್ನು ಕನ್ನಡದಲ್ಲಿ ಮಾಡಲು ಹೆಚ್ಚಿನ ತೊಂದರೆ ಇಲ್ಲ. ಹಾಗೂ ಈಗಾಗಲೇ ಕನ್ನಡದಲ್ಲಿ ಮಾಡುತ್ತಲೂ ಇದ್ದಾರೆ. ಆದರೆ, ನಾನಾ ಕಡತಗಳ ತಯಾರಿ, ನೋಟೀಸು ಆದೇಶಿಕೆಗಳ ಮಾದರಿಗಳ ತಯಾರಿ ಆಗುವುದು ಅವಶ್ಯಕ."

---

**೧. ಭಾಷೆ ರಚನೆ ಬಳಕೆ (ಸೋಮಶೇಖರ ಗೌಡ) ಪು. ಸಂ. ೧೫೭**

ಕನ್ನಡವನ್ನು ಜಿಲ್ಲಾ ಮತ್ತು ಕೆಳಮಟ್ಟದ ನ್ಯಾಯಾಲಯಗಳಲ್ಲಿ ಅಧಿಕೃತ ಭಾಷೆಯಾಗಿ ಜಾರಿಗೊಳಿಸಬೇಕೆಂಬ ಆದೇಶ ಹೊರಬಿದ್ದುದು ೧/೧೧/೧೯೭೪ ರಂದು. ನ್ಯಾಯಾಲಯದ ವ್ಯವಹಾರ ನಡವಳಿಗಳತ್ತ ಗಮನ ಹರಿಸಿದರೆ ಕ್ರಿಮಿನಲ್ ನ್ಯಾಯಾಲಯಗಳಲ್ಲಿ ಕನ್ನಡದ ಬಳಕೆಯಾಗುವಷ್ಟು ಸಿವಿಲ್ ನ್ಯಾಯಾಲಯಗಳಲ್ಲಿ ಆಗುತ್ತಿಲ್ಲ. ಇದಕ್ಕೆ ಸ್ವಲ್ಪ ಮಟ್ಟಿಗೆ ಪೊಲೀಸರ ಕಾಣಿಕೆಯೂ ಇದೆ. ಏಕೆಂದರೆ, ಪೊಲೀಸರು ತೆಗೆದುಕೊಳ್ಳುವ ಹೇಳಿಕೆ, ಫಿರ್ಯಾದು, ಸಲ್ಲಿಸುವ ಆರೋಪ ನಾಮಪತ್ರ, ಒದಗಿಸುವ ಸಾಕ್ಷ್ಯ ಇವೆಲ್ಲ ಕನ್ನಡದಲ್ಲಿರುತ್ತವೆ. ತೀರ್ಪು ಮತ್ತು ಆಜ್ಞೆಗಳು ಸಾಮಾನ್ಯವಾಗಿ ಇಂಗ್ಲಿಷ್‌ನಲ್ಲಿರುತ್ತವೆ.

ಆದರೆ ಸಿವಿಲ್ ಕೋರ್ಟುಗಳಲ್ಲಿ ಇಂಗ್ಲಿಷ್ ಪ್ರಾಬಲ್ಯವೇ ಮುಂದುವರಿದಿದೆ. ಸಾಕ್ಷಿದಾರ ಕನ್ನಡದಲ್ಲಿ ಸಾಕ್ಷಿ ಹೇಳಿದರೂ ನ್ಯಾಯಾಧೀಶರು ಅದನ್ನು ಇಂಗ್ಲಿಷ್‌ಗೆ ಅನುವಾದಿಸಿ ಡಿಕ್ಟೇಟ್ ಮಾಡುವ ಪದ್ಧತಿ ಕೋರ್ಟುಗಳಲ್ಲಿದೆ. ಕನ್ನಡದ ತಿರುಳನ್ನು ಗ್ರಹಿಸಿ ಇಂಗ್ಲಿಷ್‌ಗೆ ಅನುವಾದ ಮಾಡುವಷ್ಟು ಶಕ್ತಿ ಇರುವ ನ್ಯಾಯಾಧೀಶರು ಕನ್ನಡದಲ್ಲೇ ತೀರ್ಪು ಕೊಡುವ ಪರಿಪಾಠ ರೂಢಿಸಿಕೊಂಡರೆ, ಕಾನೂನಿನಲ್ಲಿ ಕನ್ನಡ ಉಳಿದಂತೆಯೆ.

ಈ ನಿಟ್ಟಿನಲ್ಲಿ ವಕೀಲರಿಗೆ, ನ್ಯಾಯಾಧೀಶರಿಗೆ ಅನುಕೂಲವಾಗುವಂತೆ ಕಾನೂನು ಸಾಹಿತ್ಯವನ್ನು ಕನ್ನಡದಲ್ಲಿ ರೂಪಿಸಲಾಗಿದೆ. ಇಂಗ್ಲೀಷ್ ಹಲವಾರು ಕಾನೂನು ಕೃತಿಗಳು ಕನ್ನಡಕ್ಕೆ ಅನುವಾದಗೊಂಡಿವೆ. ಕನ್ನಡದಲ್ಲಿ ಪಾರಿಭಾಷಿಕ ಪದಗಳನ್ನು ಒದಗಿಸಲು ಕಾನೂನು ಪದಕೋಶ, ಆಡಳಿತ ಪದಕೋಶಗಳನ್ನು ತಯಾರಿಸಿಕೊಡಲಾಗಿದೆ.

"ಕಾನೂನು ಸಂಸ್ಥೆಗಳು ಅಂದರೆ ನ್ಯಾಯಾಲಯಗಳು ನ್ಯಾಯವಾದಿಗಳು ಮತ್ತು ಇದರ ಸಂಪರ್ಕ ಹೊಂದಿದ ಎಲ್ಲ ವ್ಯಕ್ತಿಗಳು" ಎನ್ನುತ್ತಾರೆ ಸರಿತಾ ಕುಸುಮಾಕರ ದೇಸಾಯಿ. "ನ್ಯಾಯಾಲಯದಲ್ಲಿ ಕನ್ನಡವೆಂದಾಗ ಅದಕ್ಕೆ ಹಲವಾರು ಮುಖಗಳಿವೆ."

ಕೋರ್ಟು, ಮುನ್ಸಿಫ್, ಮ್ಯಾಜಿಸ್ಟ್ರೇಟ್, ಸಿವಿಲ್, ಕ್ರಿಮಿನಲ್, ಕೇಸು, ಜೈಲು ಇತ್ಯಾದಿಗಳನ್ನು ಅನುವಾದಿಸುವುದರ ಬಗೆಗೆ ಕಾನೂನು ತಜ್ಞರ ವಿರೋಧವಿದೆ. ಕನ್ನಡದ ಮೂಲ ಪದಗಳಲ್ಲದೆ ಅರ್ಜಿ, ಫಿರ್ಯಾದು, ದರ್ಖಾಸ್ತು, ಜುಲ್ಮಾನೆ, ಹರಾಜು, ವಕೀಲ ಇವುಗಳನ್ನು ಯಥಾವತ್ತಾಗಿ ಉಳಿಸಿಕೊಳ್ಳಬೇಕೆಂದು ಇವರ ಆಗ್ರಹ.

ಕನ್ನಡ ಚೆನ್ನಾಗಿ ಮಾತನಾಡಬಲ್ಲ ಬರೆಯಬಲ್ಲ ಕಕ್ಷಿದಾರನೊಬ್ಬ ತನ್ನ ಇಂಗ್ಲಿಷ್ ಪತ್ರದಿಂದ ವಕೀಲರನ್ನು ಇಂಪ್ರೆಸ್ ಮಾಡಲು ಹೋದ ವಿಷಯವನ್ನು ಸರಿತಾ ಕುಸುಮಾಕರ ದೇಸಾಯಿಯವರು 'ನ್ಯಾಯಾಲಯಗಳಲ್ಲಿ ಕನ್ನಡ' ಎಂಬ ತಮ್ಮ ಲೇಖನವೊಂದರಲ್ಲಿ ದಾಖಲಿಸಿದ್ದಾರೆ. ಆ ಪತ್ರದ ಒಕ್ಕಣೆ ಹೀಗಿದೆ.

"Dear vakil shaheeba namaste, I am in the well, hope you are also in the well. Don't worry your fees, when I am in the middle I tell them to send fees. where is our case stands?" ಇಂಥ ಪ್ರಭೃತಿ ತರುವುದು ಸುಲಭದ ಮಾತೆ?

## ಬಹುದಿನದ ಕನಸು ನನಸು

ಉತ್ತರ ಕರ್ನಾಟಕ ಭಾಗದ ಕನ್ನಡಿಗರ ಬಹುದಿನದ ನಿರೀಕ್ಷೆ ಕನಸು ನನಸಾಗಿದೆ. ಅವರಿಗೆ ರಾಜ್ಯ ಶ್ರೇಷ್ಠ ನ್ಯಾಯಾಲಯದ ಸಂಚಾರಿ ಪೀಠ ದೊರಕಿದೆ. ಇದರಿಂದ ಆ ಭಾಗದ ಕನ್ನಡಿಗರು ನ್ಯಾಯ ಕೇಳಲು ರಾಜ್ಯದ ರಾಜ್ಯಧಾನಿ ಬೆಂಗಳೂರಿಗೆ ಬರಬೇಕಾಗಿಲ್ಲ. ಇದೊಂದು ಸುವರ್ಣ ಕರ್ನಾಟಕದ ಕೊಡುಗೆ ಈ ಸಂಚಾರಿ ಪೀಠದ ದೆಸೆಯಿಂದ ಈ ಭಾಗದ ಜನರಿಗೆ, ವಕೀಲರಿಗೆ, ನ್ಯಾಯಾವಾದಿಗಳಿಗೆ ತುಂಬಾ ಸಂತೋಷವಾಗಿದೆ ಸಂಚಾರಿ ಪೀಠ ಉತ್ತರ ಕರ್ನಾಟಕಕ್ಕೆ ದೊರಕಿದ್ದು ಅಲ್ಲಿಯ ಜನರ ಹೃದಯ ತುಂಬಿ ಬಂದಿದೆ. ಬೆಂಗಳೂರಿನಂತಹ ಬಹುದೂರದ ನಗರಕ್ಕೆ ಹೋಗಿ ಬರುವ ಖರ್ಚುವೆಚ್ಚಗಳು ಉಳಿದಿವೆ.

ಈಗ ಉಳಿದಿರುದು ಒಂದೇ ವಿಚಾರ ಕರ್ನಾಟಕ ರಾಜ್ಯ ಎಲ್ಲಾ ನ್ಯಾಯಾಲಯಗಳಲ್ಲು ಪೂರ್ಣಪ್ರಮಾಣದಲ್ಲಿ ಕನ್ನಡ ಭಾಷಾ ನೀತಿ ಜಾರಿಯಾಗಬೇಕು. ಕಕ್ಷಿದಾರನಿಗೆ ತನ್ನ ವಕೀಲ ತನ್ನ ಪರವಾಗಿ ಹೇಗೆ ವಾದಮಾಡುತ್ತಿದ್ದಾನೆ ಎನ್ನುವುದು ತಿಳಿಯಬೇಕು. ಇದು

ಬಹುದಿನದ ಕನ್ನಡಿಗನ ಬೇಡಿಕೆ. ಈ ಬೇಡಿಕೆ ನ್ಯಾಯಯುತವಾದುದ್ದು. ಇದಕ್ಕಾಗಿ ಕರ್ನಾಟಕದಲ್ಲಿ ಕನ್ನಡಿಗರೆ ಹೋರಾಡಬೇಕಾಗಿರುವುದು ಸಂವಿಧಾನ ವಿರೋಧಿಯಾಗಿದೆ. ಸಂವಿಧಾನದ ಹಕ್ಕಿನ ಪ್ರಕಾರ ಮಾತೃಭಾಷೆಯಲ್ಲಿ, ಆಡುಭಾಷೆಯಲ್ಲಿ ಕನ್ನಡ ನ್ಯಾಯ ಅನುಧಾನ ದೊರೆಯಬೇಕಾಗಿದೆ.

# ಉ) ಸಂವಹನ

## i) ಪತ್ರಿಕೆಗಳು

ಜನತೆಯ ಸಾರ್ವತ್ರಿಕ ಪ್ರಗತಿ ಸಾಧನೆಯಲ್ಲಿ ಪತ್ರಿಕೆಗಳ ಪಾತ್ರವು ಮಹತ್ವ ದ್ದಾಗಿದೆ. ಕನ್ನಡ ಜನತೆಗೆ ಕನ್ನಡ ಪತ್ರಿಕೆಗಳಿಂದಲೇ ರಾಷ್ಟ್ರ ಶಕ್ತಿಯ ಅರಿವುಂಟಾಗಬೇಕು ಭಾರತದ ರಾಷ್ಟ್ರೀಯ ಐಕಮತ್ಯಕ್ಕೆ ಮತ್ತು ಪ್ರಗತಿಗೆ ಕನ್ನಡಿಗರೂ ತಮ್ಮ ಸೇವಾಭಾಗವನ್ನು ಸಲ್ಲಿಸಬೇಕು. ಮೈಸೂರು ಮತ್ತು ಕರ್ನಾಟಕದಲ್ಲಿ ಪತ್ರಿಕೆಗಳ ಉದಯವು ಈಗ್ಗೆ ಸುಮಾರು ೭೦-೮೦ ವರ್ಗಗಳ ಹಿಂದೆ ಆಯಿತು. ಮೈಸೂರಿನಲ್ಲಿ ಕನ್ನಡ ಪತ್ರಿಕೆಗಳ ವ್ಯವಸಾಯವೂ ಪ್ರಭಾವವೂ, ಪ್ರಚಾರವೂ ಮುಖ್ಯವಾಗಿ ಮೈಸೂರಿನ ವೃದ್ಧಪಿತಮಹರೆಂದೂ, ತಾತಯ್ಯ ನವರೆಂದು ಪ್ರಸಿದ್ಧರಾದ ದಿವಂಗತ ಎಂ. ವೆಂಕಟ ಕೃಷ್ಣಯ್ಯ ನವರಿಂದಲೂ, ಅವರ ಕಾಲದಲ್ಲೂ ನಡೆದುಬಂದಿತು. ಪ್ರಜಾ ಪ್ರಭುತ್ವದ ಈ ಯುಗದಲ್ಲಿ ಪ್ರಜಾರಾಜ್ಯದಲ್ಲಿ, ಜನತೆಯನ್ನು ಸರಿಯಾದ ಮಾರ್ಗದಲ್ಲಿ ಕೊಂಡೊಯ್ಯುವುದು ಪತ್ರಿಕೆಗಳ ಜವಾಬ್ದಾರಿ ಪತ್ರಿಕೆಗಳೆಂದರೆ ದೇಶದ ಪ್ರಗತಿಯ ಜ್ಯೋತಿ ಪತ್ರಿಕೆಗಳ ಸಂಪಾದಕ ವರ್ಗದವರು ತಮ್ಮ ಜವಾಬ್ದಾರಿಯನ್ನು ನಿರ್ವಹಿಸಲು ಶಕ್ತರಾಗಿರ ಬೇಕು ಮತ್ತು ಅರ್ಹರಾಗಿರಬೇಕು.

ಪತ್ರಿಕೆಗಳ ಪ್ರಚಾರವು ಹೆಚ್ಚಾದಷ್ಟು ಜನತೆಯಲ್ಲಿ ತಿಳಿವಳಿಕೆ ಮಟ್ಟವು ಹೆಚ್ಚುತ್ತದೆ. ಕನ್ನಡ ನಾಡಿನಲ್ಲಿ ಪತ್ರಿಕೆಗಳ ಸಂಖ್ಯೆಯಾ, ಪ್ರಚಾರವು ಹಿಂದಿಗಿಂತ ಎಷ್ಟೋಪಾಲು ಹೆಚ್ಚಬೇಕು, ಓದುಬರಹ ಬಲ್ಲವರೆಲ್ಲರೂ ಪತ್ರಿಕೆಗಳನ್ನು ಕೊಂಡುಕೊಳ್ಳಬೇಕು. ಪ್ರತಿಯೊಬ್ಬರು ಪತ್ರಿಕೆಗಳನ್ನು ಓದಬೇಕು ಓದುಗರಲ್ಲಿ ತಿಳುವಳಿಕೆಯೂ, ವಿಶಾಲ ಭಾವನೆಯೂ ಹೆಚ್ಚಬೇಕು, ಜನತೆಯಲ್ಲಿ ಪರಸ್ಪರ ಸೌಹಾರ್ದಭಾವನೆ, ಮೈತ್ರಿ, ಸಹನೆ ಮತ್ತು ಸಾರ್ವಜನಿಕ ಕ್ಷೇತ್ರದಲ್ಲಿ ಕಾರ್ಯಸಾಧನೆ ಶಕ್ತಿ, ಆರ್ಥಿಕ ಪ್ರಗತಿ ಮತ್ತು ಧಾರ್ಮಿಕ ಭಾವನೆ ಹೆಚ್ಚಬೇಕು. ಪತ್ರಿಕೆಗಳಿಗೆ ಜನಬಲ, ಧನಬಲವೂ ಅಗತ್ಯ. ಪತ್ರಿಕಾ ವೃತ್ತಿಯ ಕಷ್ಟ ಪರಿಸ್ಥಿಗಳೇನು, ಪತ್ರಿಕಾ ವೃತ್ತಿಯಲ್ಲಿ ನಿರತರಾಗಿರುವವರು, ದೇಶಾಭಿಮಾನದಿಂದಲೂ, ಆರ್ಥಿಕ ಕಷ್ಟಗಳಿದ್ದಾಗಲೂ ಹೇಗೆ ಸೇವೆ ಸಲ್ಲಿಸುತ್ತಿದ್ದಾರೆ ಎಂಬ ಅಂಶಗಳನ್ನು ಸಾರ್ವಜನಿಕರೂ ಸರಕಾರದವರೂ ಅರಿತಿರಬೇಕು.

ಕನ್ನಡನಾಡಿನ ಪತ್ರಿಕೆಗಳು ಜನಸೇವೆಯನ್ನೂ, ರಾಷ್ಟ್ರ ಸೇವೆಯನ್ನೂ, ಇನ್ನೂ ಹೆಚ್ಚಾಗಿ, ಇನ್ನೂ ವಿಶಾಲವಾಗಿ ಮಾಡುವಂತಾಗಬೇಕಾದರೆ ಸಾರ್ವಜನಿಕರೂ, ಪತ್ರಿಕೆಯ ವಾಚಕರೂ ಪತ್ರಿಕೆಗಳಿಗೆ ಹೆಚ್ಚು ಬೆಂಬಲ ಕೊಡಬೇಕು. ಪತ್ರಿಕೆಗಳು, ಸಾರ್ವಜನಿಕ ಸೇವಾಸಂಸ್ಥೆಗಳು, ೩೦-೪೦ ವರ್ಷಗಳ ಹಿಂದೆ ಇದ್ದ ಪರಿಸ್ಥಿತಿ ಗಿಂತಲೂ ಈಗ ಪತ್ರಿಕೆಗಳ ಸ್ಥಿತಿ ಎಷ್ಟೋ ಉತ್ತಮವಾಗಿವೆ. ಆದರೂ ಕನ್ನಡ ಪತ್ರಿಕೆಗಳು ಇನ್ನೂ ಬಾಲ್ಯಾವಸ್ಥೆಯಲ್ಲಿವೆ. ನಮ್ಮ ಕನ್ನಡ ಭಾಷೆ ವಿಶಾಲವಾಗಿರುವ ಈ ಕಾಲದಲ್ಲಿ ಪತ್ರಿಕಾ ವ್ಯವಸಾಯವನ್ನು ಧೃಡವಾದ ಅಡಿಪಾಯದ ಮೇಲೆ ಕಟ್ಟುವುದು ಅತ್ಯಂತ ಅವಶ್ಯಕ ಸ್ವರಾಜ್ಯ ಪ್ರಾಪ್ತಿಯಾದ ಮೇಲೆ ನಮ್ಮ ದೇಶದ ರಾಜಕೀಯ, ಸಾಮಾಜಿಕ, ಆರ್ಥಿಕ ಸ್ಥಿತಿಯು ನಾಗಾಲೋಟದಿಂದ ಪರಿವರ್ತನೆ ಹೊಂದುತ್ತಿದೆ. ಅಂತರರಾಷ್ಟ್ರ ಮಟ್ಟದಲ್ಲಿ ನೂತನ ಅವಶ್ಯಕತೆಗಳಿಗೆ ಅನುಗುಣವಾಗಿ ಭಾರತವು ವಿಶಾಲ ಭಾವನೆಯಿಂದ ಕೂಡಿದ ಮಾನವ ನೀತಿಯನ್ನು ವಿಕಾಸಗೊಳಿಸುತ್ತಿದೆ. ಇಡೀ ಪ್ರಪಂಚವೇ, ಇಡೀ ಮಾನವ ಜಾತಿಯೇ, ಒಂದೇ ಕುಟುಂಬದವರೆಂಬ ಭಾವನೆಯಿಂದ ಮುಂದುವರಿಯುತ್ತಿರುವ ಈ ನವಯುಗದಲ್ಲಿ ಕನ್ನಡ ಪತ್ರಿಕೆಗಳು ತಮ್ಮ ನೀತಿಯನ್ನು ವಿಶಾಲಗೊಳಿಸಿಕೊಂಡು ಮುಂದುವರಿಯಬೇಕಾಗಿದೆ.

---

೧. ಭಾಷೆ ರಚನೆ ಬಳಕೆ (ಸೋಮಶೇಖರ ಗೌಡ) ಪು. ಸಂ. ೧೫೩

ಕನ್ನಡ ನುಡಿ ನೂತನ ಜವಾಬ್ದಾರಿಗೆ ಹೊಂದಿಕೊಳ್ಳುವಂತೆ ಪರಿವರ್ತನೆಗೆ ಒಳಗುಮಾಡುವ ಕರ್ತವ್ಯವೂ ಕನ್ನಡ ಪತ್ರಿಕೆಗಳಿಗೆ ಸೇರಿದ್ದು. ನೂತನ ಭಾಷಾ ನಿರ್ಮಾಣದಲ್ಲಿ ಕನ್ನಡ ಪತ್ರಿಕೆಗಳ ಪಾತ್ರವು ಗಾಢವಾದುದು ಮತ್ತು ವಿಸ್ತಾರವಾದುದೂ ಆಗಿದೆ. ಎಲ್ಲ ಭಾವ ಭಾವನೆಗಳಿಗೂ ಸಿದ್ಧವಾದ ಕನ್ನಡ ಪದಗಳು ನಮ್ಮಲ್ಲಿ ಈಗ ಎಲ್ಲ. ಹೊಸ ಪದಗಳನ್ನು ಹುಡುಕಬೇಕಾಗಿದೆ. ಆದರೆ ಉಚ್ಚರಿಸಲು ಸಾಧ್ಯವಿಲ್ಲದ, ಅರಗಿಸಿಕೊಳ್ಳಲು ಆಗದ ಸಂಸ್ಕೃತಿ ಸಮೂಹ ಶಬ್ದಗಳನ್ನು ಪರಿಷ್ಕರಿಸುತ್ತ ಹೋದರೆ ಅದರಿಂದ ಸಾಮಾನ್ಯ ಮನುಷ್ಯನಿಗೆ ಎಷ್ಟು ಉಪಯೋಗವಾಗದೆ ಹೋಗಬಹುದು ಅಲ್ಲದೆ ಭಾರತದಲ್ಲಿರುವುದು.

ಕನ್ನಡ ಒಂದೇ ಭಾಷೆಯಲ್ಲ, ತಮಿಳು, ತೆಲುಗು, ಮರಾಠಿ, ಗುಜರಾತಿ, ಬಂಗಾಳಿ, ಹಿಂದಿ ಮುಂತಾದ ಅನೇಕ ಭಾಷೆಗಳಿವೆ. ಆ ಭಾಷೆಯ ಪತ್ರಿಕೆಗಳು ಕೂಡ ನಮ್ಮ ಕನ್ನಡ ಪತ್ರಿಕೆಗಳಿಗೆ ಇರುವ ಸಮಸ್ಯೆಗಳನ್ನು ಎದುರಿಸಬೇಕಾಗಿದೆ.

ಕನ್ನಡ ಪತ್ರಿಕೆಗಳು ಅಭಿವೃದ್ಧಿಯಾಗಬೇಕಾದರೆ ವಾಚಕರ ಸಂಖ್ಯೆ ಹೆಚ್ಚಬೇಕು. ವಾಚಕರ ಸಂಖ್ಯೆ ಹೆಚ್ಚಬೇಕಾದರೆ ಓದು ಬಲ್ಲವರ ಸಂಖ್ಯೆ ಹೆಚ್ಚಬೇಕು. ನಮ್ಮ ದೇಶದಲ್ಲಿ ಯಾವ ಭಾಷಾಪತ್ರಿಕೆಯನ್ನು ತೆಗೆದುಕೊಂಡರೂ, ಅವುಗಳ ಪ್ರಚಾರವನ್ನು ನೋಡಿದರೆ ಸಾವಿರ ಸಂಖ್ಯೆಯಲ್ಲಿ ಹೇಳಬಹುದೇ ಹೊರತು, ಲಕ್ಷಗಳ ಸಂಖ್ಯೆಯಲ್ಲಿ ಹೇಳುವ ಹಾಗಿಲ್ಲ.

ಇದಕ್ಕೆ ಕಾರಣ ನಮ್ಮ ದೇಶದಲ್ಲಿ ಓದು ಬರಹ ಬಲ್ಲವರ ಸಂಖ್ಯೆ ಸುಮಾರಾಗಿದೆ. ಪತ್ರಿಕೆಗಳಲ್ಲಿ ಇನ್ನು ಮುಂದೆ ಒಂದು ದೊಡ್ಡ ಸುಧಾರಣೆಯಾಗಬೇಕಾಗಿದೆ. ಎಲ್ಲ ವರ್ಗದ ಮತ್ತು ಎಲ್ಲ ವಯಸ್ಸಿನ ಜನರಿಗೂ ಆಕರ್ಷಣೀಯವಾಗಿರುವಂತೆ ಪತ್ರಿಕೆಗಳಲ್ಲಿ ವಿಷಯಗಳು ಬರಬೇಕು ಒಂದೇ ವಿಷಯವಾದರೆ ಜನಕ್ಕೆ ಬೇಜಾರಾಗುತ್ತದೆ, ಬೆಳಿಗ್ಗೆ ಎದ್ದು ಪತ್ರಿಕೆಯನ್ನು ತೆಗೆದರೆ ಓದುವವರಿಗೆ ಉತ್ಸಾಹವೂ ಸ್ಫೂರ್ತಿಯೂ ಸಂತೋಷವೂ ಆಗುವಂತೆ ಇರಬೇಕು.

ನಾಗರಿಕ ಪ್ರಪಂಚದಲ್ಲಿ ವೃತ್ತ ಪತ್ರಿಕೆಗಳಿಗೆ ವಿಶೇಷ ಸ್ಥಾನಮಾನವಿದೆ. ಜನಗಳ ಅಭಿಪ್ರಾಯವನ್ನು ಸೂಚಿಸುವುದು ವಿಮರ್ಶೆ ಮಾಡುವುದು ಇದೆ. ಕನ್ನಡದಲ್ಲಿ ಪತ್ರಿಕೋದ್ಯಮ ಪ್ರಾರಂಭದುದು 19ನೇ ಶತಮಾನದ ಉತ್ತರಾರ್ಧದಲ್ಲಿ ಪಾಶ್ಚಾತ್ಯರ ಸಂಪರ್ಕವಾದ ಮೇಲೆ ಅವರು ಮುದ್ರಣಯಂತ್ರಗಳನ್ನು ಇಲ್ಲಿ ಬಳಕೆಗೆ ತಂದ ಮೇಲೆ ಆರಂಭದಲ್ಲಿ ಪತ್ರಿಕೆಗಳು ಪ್ರಾರಂಭವಾದುದು ಅವರಿಂದಲೇ. ಅದು ಪಾದ್ರಿಗಳ ಪ್ರಯತ್ನದಿಂದ ಅವರು ಆ ಕೆಲಸವನ್ನು ಪ್ರಾರಂಭ ಮಾಡಿದುದೂ ತಮ್ಮ ಮತ ಪ್ರಚಾರಕಾರ್ಯಕ್ಕಾಗಿಯೇ ಆದರೂ ಅವು ಕನ್ನಡ ಜನ ಜೀವನದ ಪ್ರತಿಬಿಂಬವಾಗಿದ್ದವು. ಪ್ರಥಮ ಪತ್ರಿಕೆಯ ವಿಷಯ ಚರ್ಚೆ ಇದ್ದರೂ ೧೮೪೩ನೆಯ ಜುಲೈ ಒಂದರಲ್ಲಿ ಪ್ರಾರಂಭವಾದ 'ಮಂಗಳೂರು ಸಮಾಚಾರ'ವೆಂಬ ಪತ್ರಿಕೆಯೇ ಕರ್ನಾಟಕದ ಪ್ರಥಮ ಪತ್ರಿಕೆಯೆಂದು ಭಾವಿಸಬಹುದು.

ವಿಚಾರಗಳ ಸಂವಹನದಲ್ಲಿ ಪತ್ರಿಕೆಗಳು ಒಂದು ಕಡೆಯಿಂದ ನಾಯಕರುಗಳ ನಿಲುವನ್ನು ಜನಗಳಿಗೆ ಮುಟ್ಟಿಸಿದರೆ, ಮತ್ತೊಂದು ಕಡೆಯಿಂದ ಜನರ ಬಲವನ್ನು ಭಿನ್ನಾಭಿಪ್ರಾಯಗಳನ್ನು ನಾಯಕರಿಗೆ ಮುಟ್ಟಿಸುತ್ತದೆ. ಈ ಎಲ್ಲಾ ಉದ್ದೇಶಗಳನ್ನು ಎಲ್ಲಾ ಪತ್ರಿಕೆಗಳು ಸಮೃದ್ಧವಾಗಿ ನಿರ್ವಹಿಸಬೇಕಾದರೆ ಪತ್ರಿಕೆಗಳ ಜವಾಬ್ದಾರಿಯು ಹೆಚ್ಚುತ್ತದೆ. ಈ ಉದ್ದೇಶ ಸ್ಫೂರ್ತಿಗೆ ತಕ್ಕುದಾದ ಮನೋಭಾವ ಇರಬೇಕು. ಸ್ವತಂತ್ರ್ಯ ಪೂರ್ವಕ್ಕೆ ಹೆಚ್ಚು ಕಡಿಮೆ ಪತ್ರಿಕೆಗಳು ಓದುಗರಿಗೆ ಸುದ್ಧಿ-ಮಾಹಿತಿ ತಿಳಿಸುವ, ಸುಶಿಕ್ಷಿತಗೊಳಿಸುವ ಮತ್ತು ಬಡಿದೆಬ್ಬಿಸಿ ಅವರನ್ನು ಕ್ರಿಯಾಶೀಲರನ್ನಾಗಿಸುವ ಕೆಲಸವನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತಿದ್ದವು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಭಾರತದ ಇಡೀ ಜನಸಮುದಾಯದ ಭಾವನೆಯನ್ನು ಕೆರಳಿಸುವಂಥ, ಅವರನ್ನು ಕ್ರಿಯಾಶೀಲರನ್ನಾಗಿಸುವಂಥ ಒಂದು ಆದರ್ಶ ರೂಪುಗೊಳ್ಳಲಿಲ್ಲ.

ಆಧುನಿಕತೆಯ, ನಾಗರಿಕತೆಯ ನಂಟು ಯಾರು ಮೆಚ್ಚುವಂಥದು? ಕನ್ನಡದಲ್ಲಿ ಎಷ್ಟು ಪತ್ರಿಕೆಗಳಿವೆ? ಯಾವ ಬಗೆಯವು?

---

೧. ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆ ಪು. ಸಂ. ೧೧

೨. ಕರ್ನಾಟಕ ಸಂಪದ (ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿ) ಪು. ಸಂ. ೪೪೯

೧. ಮೈಸೂರು ರಾಜ್ಯ ಪು. ಸಂ. ೨೯೧

ಯಾವ ಧೋರಣೆಯವು? ಯಾವ ಧ್ಯೆಯೋದ್ದೇಶದವು? ಎಂಬ ವಿಚಾರ ಒತ್ತಟ್ಟಿಗಿರಲಿ, ಇವೆಲ್ಲ ಕನ್ನಡದ ಬಗೆಗೆ ಕಾಳಜಿ ಯನ್ನುಳ್ಳುವು, ಕನ್ನಡವನ್ನು ಕಟ್ಟಲು ಕಂಕಣಧಾರಿಯಾದವು ಎಂಬುದು ಸುಳ್ಳಲ್ಲ.

ಆಧುನಿಕ ಬದುಕಿನ ಅಗತ್ಯವನ್ನು ಈಡೇರಿಸುವಲ್ಲಿ ಪತ್ರಿಕೆಗಳ ಪಾತ್ರ ಹಿರಿದು. ಸರಳ ಕನ್ನಡದಲ್ಲಿ ತಿಳಿಯುವಂತೆ ಅಭಿವ್ಯಕ್ತಿಸಿ, ಓದುಗರನ್ನು ತಲುಪಲು ಒಂದು ಆವಕಾಶ ಹೊತ್ತು, ಬೆಳಗಾಗುವ ಮುನ್ನ ಬಾಗಿಲು ತಟ್ಟುವುದು ವೃತ್ತಪತ್ರಿಕೆ. ಓದುವವರಿಗೆ ಮಾತ್ರವಲ್ಲ ಓದಿಸಿ ಕೇಳುವವರಿಗೂ ಪತ್ರಿಕೆಯ ಆಕರ್ಷಣೆ ಅಪಾರ. ಸಾಹಿತ್ಯ, ಕಲೆ, ವಿಜ್ಞಾನ, ವಾಣಿಜ್ಯ, ವ್ಯಾಪಾರ, ಉದ್ಯಮ, ರಾಜಕಾರಣ, ಹೀಗೆ ಜನಜೀವನದ ಎಲ್ಲಾ ಮಗ್ಗುಲುಗಳನ್ನು ಸಂಸ್ಪರ್ಶಿಸುವುದು ಇವರ ಜಾಯಮಾನ.

ಸಮಯ ಸಂದರ್ಭಕ್ಕನುಗುಣವಾಗಿ ವಿಷಯಕ್ಕೆ ಒತ್ತುಕೊಡುವುದು ಇವರ ನೀತಿ. ಹೀಗೆ ಒತ್ತು ಕೊಡಲಾದ ವಿಷಯ ಮುಖಪುಟದಲ್ಲಿ ಜಾಗ ಪಡೆಯುತ್ತದೆ.

ಕನ್ನಡ ನಾಡು, ನುಡಿ, ಕಲೆ, ಸಾಹಿತ್ಯ ಇತ್ಯಾದಿಗಳಿಗೆ ಪತ್ರಿಕೆಗಳಿಂದ ಸಂದಿರುವ ಸೇವೆ ಎಣೆಯಿಲ್ಲದ್ದು. ಕರ್ನಾಟಕ ಏಕೀಕರಣ, ಕನ್ನಡ ಮಾಧ್ಯಮ, ಕನ್ನಡಪರ ಚಳುವಳಿಗಳೇ ಮುಂತಾಗಿ ಕನ್ನಡದ ಎಲ್ಲ ರಚನಾತ್ಮಕ ಪ್ರಕ್ರಿಯೆಗಳಲ್ಲಿ ಪತ್ರಿಕೆಗಳು ಮುಂಚೂಣಿಯಲ್ಲಿ ಕಾಣಿಸಿಕೊಂಡಿವೆ. ಅಷ್ಟೇ ಅಲ್ಲ ಪತ್ರಿಕೆಗಳಲ್ಲಿ ಕಂಡು ಬರುವ ಸಾಮಾಜಿಕ ಹೊಣೆಗಾರಿಕೆ, ಸಾಮಾಜಿಕ ಸ್ವಾಸ್ಥ್ಯಕ್ಕಾಗಿ ಅವು ಕೊಡುವ ರಕ್ಷಣೆ, ತೆರವು, ಬೆಲೆ ಅಪಾರ.

ವಿಷಯಕ್ಕನುಗುಣವಾಗಿ ಕನ್ನಡ ಭಾಷೆಯನ್ನು ಪತ್ರಿಕಾಕರ್ತರು ದುಡಿಸಿಕೊಳ್ಳುತ್ತಾರೆ. ಒಂದು ಸಂಪಾದಕೀಯದಲ್ಲಿ ಕಾಣಸಿಗುವ ಭಾಷೆಗೂ ವರದಿಯಲ್ಲಿ ಕಂಡು ಬರುವ ಭಾಷೆಗೂ ವ್ಯತ್ಯಾಸ ಇರುತ್ತದೆ.

ಹಾಗೆಯೇ ಅಪಘಾತ, ಕೊಲೆ, ಅತ್ಯಾಚಾರ, ಗಲಭೆಗಳಂತಹ ಘಟನೆಗಳನ್ನು ವರದಿ ಮಾಡುವಾಗ ಬಳಸಲ್ಪಡುವ ಪದಗಳು ಮತ್ತು ಆರ್ಥಿಕ, ರಾಜಕೀಯ, ಶೈಕ್ಷಣಿಕ ವಿಷಯಗಳನ್ನು ವಿಶ್ಲೇಷಣೆ ಮಾಡುವಾಗ ಬಳಕೆಗೊಳ್ಳುವುದಿಲ್ಲ. ಪತ್ರಿಕೆಗಳಿಗೂ ನೀತಿ ಸಂಹಿತೆ ಇದೆ. ಇವನ್ನು ದಾಟುವ, ಮೀರುವ ಪತ್ರಿಕೆಗಳು ತೇಜೋವಧೆ, ವ್ಯಕ್ತಿ ಸ್ವಾತಂತ್ರ್ಯ, ಸಾಮಾಜಿಕ ಸ್ವಾಸ್ಥ್ಯಗಳ ಮೇಲೆ ಹಲ್ಲೆ ಮಾಡುವ ಪೀತ ಪತ್ರಿಕೆಗಳಾಗುತ್ತವೆ.

ಪತ್ರಿಕೆಗಳು ಭಾಷೆಗೆ ತುಂಬಿಕೊಡುವ ಕಸುವು ಅಸ್ಪಷ್ಟವಾದುದು. ತಕ್ಷಣದ ಪದಸೃಷ್ಟಿ, ಅದಕ್ಕೆ ಹೊಂದುವಂತಹ ಶೈಲಿ, ತನ್ಮೂಲಕ ಸ್ಫುರಿಸುವ ಅರ್ಥ, ಇವೆಲ್ಲ ಕುತೂಹಲ ಕೆರಳಿಸುವಂಥವು. ಈ ದೃಷ್ಟಿಯಿಂದ ಕನ್ನಡ ಪತ್ರಿಕೆಗಳ ಭಾಷೆಯನ್ನು ಸಂಶೋಧನೆಗೆ ಬಳಸಿ ಮಾಡುವುದು ಅಗತ್ಯ. ಕನ್ನಡ ಪತ್ರಕರ್ತರು, ಅಂಕಣಕಾರರು, ಲೇಖಕರು ಕನ್ನಡಕ್ಕೆ ನೀಡಿರುವ ಪಟ್ಟ-ಶಕ್ತಿಗಳನ್ನು ವಿವೇಚಿಸುವುದು ಸುಲಭಸಾಧ್ಯವಲ್ಲ. ಪತ್ರಿಕಾ ಸಾಹಿತ್ಯ ಅವಸರದ ಸೃಷ್ಟಿ ಎಂಬ ಅಡ್ಡ ಮಾತು ಇದ್ದರೂ ಪತ್ರಿಕಾ ಬರಹ ಮುಖ್ಯ ಸಾಹಿತ್ಯಕ್ಕೆ ಸಾಮಗ್ರಿ ಮತ್ತು ಸೌಕರ್ಯಗಳೆರಡನ್ನು ಒದಗಿಸಿಕೊಡುತ್ತದೆ. ಸಾಹಿತಿಗಳ ಭಾಷೆ ಪತ್ರಿಕೆಗಳಿಗೆ ಒಗ್ಗದು ಎಂದು ಪತ್ರಿಕಾ ಕರ್ತರು ಮೂಗು ಮುರಿದರೆ ಗಾಢವಾದ ಅನುಭವ, ಆಳವಾದ ಸೃಷ್ಟಿ, ಅಪೂರ್ವ ಚಿತ್ರಣ ಇಲ್ಲದೆ ಬರಹವನ್ನು 'ಪತ್ರಿಕಾ ವರದಿಯಿಂತಿದೆ,' ಎಂದು ಮಾಹಿತಿಗಳು ಹೀಯಾಳಿಸುವುದುಂಟು. ಇದನ್ನು ಗಮನಿಸಿದ ಡಿ. ವಿ. ಜಿ. ಯವರು "ಪತ್ರಿಕೆಗಳು ಮೇಲ್ಪಟ್ಟದ ಗ್ರಂಥದ ಭಾಷೆಗೂ, ಕೆಳಮಟ್ಟದಲ್ಲಿರುವ ಸಾಮಾನ್ಯ ಭಾಷೆಗೂ ಮಧ್ಯಸ್ಥಗಾರನಂತಿದ್ದು ಕೆಳಗಿನದನ್ನು ಮೇಲಿನ ಕಡೆಗೆ ಎತ್ತುತ್ತಿರಬೇಕು" ಎಂದು ಹೇಳುವ ಮೂಲಕ ಪತ್ರಿಕೆಗಳ ಕರ್ತವ್ಯವನ್ನು ನಿರ್ದೇಶಿಸಿದ್ದಾರೆ.

ಪ್ರತಿರೂಪದ ಮುದ್ರಣವನ್ನು ಪಡೆದ ಕನ್ನಡದ ಮೊದಲ ದಿನಪತ್ರಿಕೆ ಪ್ರಜಾವಾಣಿ ೧೯೮೯ರಲ್ಲಿ ಬೆಂಗಳೂರು ಹುಬ್ಬಳ್ಳಿಗಳಿಂದ ಪ್ರಕಟವಾಗುತ್ತಿದೆ. ಕನ್ನಡದ ಪತ್ರಿಕೆಗಳು ಲೆಟರ್ ಪ್ರಿಂಟಿಂಗ್‌ನಿಂದ ಈಗ ಆಫ್‌ಸೆಟ್ ಮುದ್ರಣ ಕಡೆಗೆ ವಾಲುತ್ತಿದೆ. ಮೋಟರ್ ವ್ಯವಸ್ಥೆ, ರೇಡಿಯೋ ಫೋಟೋ ಸೌಲ್ಯಭ್ಯ, ಟೆಲಿಗ್ರಾಂ ಮತ್ತು ಟೆಲಿ ಪ್ರಿಂಟರ್ (ತಂತಿ ಮತ್ತು ದೂರ ಮುದ್ರಣ) ಕನ್ನಡಕ್ಕಿನ್ನೂ

ಬರಬೇಕಿದೆ. ಕನ್ನಡ ಭಾಷೆ ಅತ್ಯಂತ ಸಮೃದ್ಧವಾಗಿ ಬಳಕೆಯಾಗುತ್ತಿರುವ ಯಾವುದಾದರೂ ಕ್ಷೇತ್ರ ಇದೆ ಎಂದಾದರೆ ಅದು ಪತ್ರಿಕೋದ್ಯಮ.

ಅಭಿವೃದ್ಧಶೀಲ ಮತ್ತು ಅಭಿವೃದ್ಧಿಪರ ರಾಷ್ಟ್ರಗಳಲ್ಲಿ ಪತ್ರಿಕೆಯು ಸುದ್ದಿಗಳ ಮಾಧ್ಯಮವಾಗಿ, ಮಾಹಿತಿಗಳ ಮೂಲವಾಗಿ ಪರಸ್ಪರ ತಿಳುವಳಿಕೆ ಮತ್ತು ಸಹಕಾರಕ್ಕೆ ಸಾಧನವಾಗಬೇಕು ಎಂದು ಸಾಮಾನ್ಯವಾಗಿ ನಿರೀಕ್ಷಿಸಲಾಗುತ್ತದೆ. ಪ್ರಾಕೃತಿಕ ಸಂಪನ್ಮೂಲಗಳನ್ನು ಸಮಾಜದ ಬಳಕೆಗೆ ರೂಢಿಸುವಂತೆ ಆಗಿದೆ.

ಕನ್ನಡ ಪತ್ರಿಕೋದ್ಯಮ ಇಂದು ಅಂತರಾಷ್ಟ್ರೀಯ ಮಟ್ಟದಲ್ಲಿ ಕಂಪ್ಯೂಟರ್ ಯುಗದಲ್ಲಿ ಪ್ರಬಲವಾದ ಆರೋಗ್ಯಕರ ಪೈಪೋಟಿ ನೀಡಬೇಕಾಗಿದೆ. ಈ ದಿಸೆಯಲ್ಲಿ ಆಧುನಿಕ ತಂತ್ರಜ್ಞಾನ ಬಳಕೆಗೆ ಕನ್ನಡ ಪತ್ರಿಕೋದ್ಯಮ ಸಾಕಷ್ಟು ಬಂಡವಾಳವನ್ನು ಕೊಡಬೇಕಾಗಿದೆ. ಇಂದು ಕನ್ನಡ ಪತ್ರಿಕೆಗಳಲ್ಲಿ ಕೆಲಸ ಮಾಡುವವರು ಕಂಪ್ಯೂಟರ್ ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕಾಗಿದೆ. ಹೊಸ ಹೊಸ ವಿನ್ಯಾಸ ಹೊಸ ಭಾಷಾ ಪ್ರಯೋಗ ಆಧುನಿಕ ಕನ್ನಡ ಪತ್ರಿಕೋದ್ಯಮವನ್ನು ಇನ್ನಷ್ಟು ಉತ್ತಮ ಪಡಿಸಿಕೊಳ್ಳಲು ಕನ್ನಡ ಪತ್ರಿಕಾ ಸಂಪಾದಕರು, ಆಡಳಿತ ವರ್ಗ, ಕೆಲಸಗಾರರು ಆಧುನಿಕ ತಂತ್ರಜ್ಞಾನವನ್ನು ಹೆಚ್ಚು ಹೆಚ್ಚು ಕಲಿಯಬೇಕಾಗಿದೆ.

ಇಂದು ಕನ್ನಡ ಪತ್ರಿಕೋದ್ಯಮ ಅಂತರರಾಷ್ಟ್ರೀಯ ಮಟ್ಟದಲ್ಲಿ ಬೆಳೆಯಬೇಕಾಗಿದೆ. ಇಂದು ಕನ್ನಡ ಪತ್ರಿಕೋದ್ಯಮ ಬೇರೆ ಬೇರೆ ಭಾಷೆಗಳ ಪತ್ರಿಕೆಗಳ ನಡುವೆ ಸ್ವತಂತ್ರವಾಗಿ ನಿಲ್ಲಲ್ಲು ತನ್ನ ವಿಶಿಷ್ಟ ಪಾತ್ರವನ್ನು ಮೆರೆಯಲು ಸಾಕಷ್ಟು ಹೊಸ ಹೊಸ ವಿನ್ಯಾಸವನ್ನು ರೂಢಿಸಿಕೊಳ್ಳಬೇಕಾಗಿದೆ. ಬೇರೆ ಬೇರೆ ಭಾಷೆಗಳಿಂದ ಎರವಲಾಗಿ ಬಂದ ಅನ್ಯಭಾಷೆಯಾದರು, ಕನ್ನಡ ಭಾಷೆಯಲ್ಲಿ ಹಾಲು ಜೇನಿನಂತೆ ಸೇರಿ ಹೋಗಿರುವ ಅನ್ಯ ಭಾಷಾ ಪದಗಳನ್ನು ಕನ್ನಡ ಭಾಷೆಯಂತೆಯೆ ಸಲಹ ಬೇಕಾಗಿದೆ. ಭಾರತದ ೧೪ ರಾಷ್ಟ್ರ ಭಾಷೆಗಳಲ್ಲಿ ಕನ್ನಡ ಭಾಷೆಗೆ ತನ್ನದೆ ಆದ ಸ್ಥಾನಮಾನವಿದೆ. ಕನ್ನಡ ಭಾಷೆ ಈಗ ಶಾಸ್ತ್ರೀಯ ಭಾಷೆಯಾಗಿ ಶೀಘ್ರವಾಗಿ ಅಧಿಕೃತವಾಗಿ ರಾಷ್ಟ್ರಮಟ್ಟದಲ್ಲಿ ವಿಜೃಂಭಿಸಲು ಇದೆ. ಕನ್ನಡ ಭಾಷೆ ಶಾಸ್ತ್ರೀಯ ಸ್ಥಾನಮಾನ ಹೊಂದಲು ಕನ್ನಡ ಪತ್ರಿಕೆಗಳು ನಿರಂತರ ಹೋರಾಟ ನಡೆಸಿವೆ. ದೇಶದ ನಾನಾ ಭಾಗಗಳಲ್ಲಿ ಕನ್ನಡ ಪತ್ರಿಕೋದ್ಯಮ ಆರೋಗ್ಯಕರವಾಗಿ ಬೆಳೆಯುತ್ತಿದೆ. ಇಂದು ಜಿಲ್ಲಾ ಮಟ್ಟದ ಪತ್ರಿಕೆಗಳು ರಾಜ್ಯ ಮಟ್ಟದ ಪತ್ರಿಕೆಗಳ ಜೊತೆಗೆ ಆರೋಗ್ಯಕರವಾಗಿ ಪೈಪೋಟಿ ನೀಡುತ್ತಾ ಕನ್ನಡ ಪತ್ರಿಕೋದ್ಯಮ ಹೊಸ ಆಯಾಮ ಕಂಡುಕೊಂಡಿದ್ದೆ.

ಕನ್ನಡ ಪತ್ರಿಕೆಗಳ ಪಾತ್ರವು ಇನ್ನೂ ಹೆಚ್ಚಿನ ಮಹತ್ವಪೂರಿತವಾಗುತ್ತದೆ. ಪ್ರತಿಯೊಬ್ಬ ಕನ್ನಡಿಗನಲ್ಲಿಯೂ ಆತ್ಮಶಕ್ತಿಯು ವಿಕಾಸವಾಗಬೇಕು. ಪ್ರಗತಿಯು, ಸಮಗ್ರ ಅಭಿವೃದ್ಧಿಯೂ ಪರಸ್ಪರ ಹೊಂದಾಣಿಕೆಯಿಂದಲೂ, ಸೌಹಾರ್ದದಿಂದಲೂ ಮುಂದುವರಿಯಬೇಕು. ಜನತೆಯ ತಿಳುವಳಿಕೆಯೂ, ಸಾರ್ವತ್ರಿಕ ಅಭಿವೃದ್ಧಿಯ ಅಂಶಗಳೂ ಪತ್ರಿಕೆಗಳಿಂದಲೇ ಜನತೆಯಲ್ಲಿ ಹರಡಬೇಕು. ನಾಡಿನ ಪ್ರಗತಿಗೆ ಪ್ರತಿಕೂಲವಾದಂಶಗಳನ್ನು ನಿರ್ಮೂಲ ಮಾಡಬೇಕು. ಹೀಗೆ ದೇಶದ ಅಭ್ಯುದಯಕ್ಕೆ ಪತ್ರಿಕೆಗಳ ಸೇವೆಯ ಬಹು ಅವಶ್ಯಕವಾದುದು ಎಂಬುದರಲ್ಲಿ ಸಂದೇಹವಿಲ್ಲ.

ಬೆಂಗಳೂರಿನಲ್ಲಿಯೂ ಅನೇಕ ಪತ್ರಿಕೆಗಳು ನಡೆದು ಬಂದಿದೆ. ಮಂಗಳೂರು, ಹುಬ್ಬಳ್ಳಿ, ಧಾರವಾಡಗಳಲ್ಲಿಯೂ ಅನೇಕ ಕನ್ನಡ ಪತ್ರಿಕೆಗಳು ಪ್ರಕಾಶವಾಗಿ ನಡೆಯುತ್ತಿವೆ. ಕನ್ನಡ ಪತ್ರಿಕೆಗಳಿಗೆ ಪ್ರತಿ ಪತ್ರಿಕೆಯ ಚಂದಾದಾರರ ಸಂಖ್ಯೆ ಏರಬೇಕು. ಕನ್ನಡ ಜನತೆಯ ಎಚ್ಚೆತ್ತುಗೊಂಡು, ಪತ್ರಿಕೆಗಳಿಗೆ ಹೆಚ್ಚು-ಹೆಚ್ಚಾಗಿ ಚಂದಾದಾರರಾಗಬೇಕು.

ಮೈಸೂರಿನಲ್ಲಿ ಸಾಧ್ವಿ ಮೊದಲಾದ ಪತ್ರಿಕೆಗಳು, ಬೆಂಗಳೂರಿನಲ್ಲಿ ತಾಯಿನಾಡು, ವಿಶ್ವಕರ್ನಾಟಕ, ಜನವಾಣಿ, ಪ್ರಜಾವಾಣಿ ಮೊದಲಾದ ಪತ್ರಿಕೆಗಳೂ, ಮಂಗಳೂರಿನಲ್ಲಿ ನವಭಾರತ ಮೊದಲಾದ ಪತ್ರಿಕೆಗಳೂ, ಹುಬ್ಬಳ್ಳಿಯಲ್ಲಿ ಸಂಯುಕ್ತ ಕರ್ನಾಟಕ, ನವಯುಗ ಮೊದಲಾದ ಕನ್ನಡ ಪತ್ರಿಕೆಗಳು ಪ್ರಸಿದ್ಧವಾಗಿದ್ದವು.

ಕನ್ನಡ ಪತ್ರಿಕೆಗಳು ತಮ್ಮ ನೀತಿಯನ್ನು ವಿಶಾಲಗೊಳಿಸಿಕೊಂಡು ಮುಂದುವರಿಯಬೇಕು. ಇಡೀ ಪ್ರಪಂಚ ಪರಿಚಯವನ್ನು ಕನ್ನಡ ಪರಿಚಯ ಮಾಡಿಕೊಡಬೇಕು. ಇಡೀ ಪ್ರಪಂಚದ ನೀತಿಯನ್ನು ಕನ್ನಡ ನಾಡಿನಲ್ಲಿ ಅಳವಡಿಸಿ ಕನ್ನಡ ಭೂಮಿಯ ವಿಶೇಷ ಸಂದೇಶವನ್ನು ಇಡೀ ಪ್ರಪಂಚಕ್ಕೆ ಸಾರಬೇಕಾಗಿದೆ. ಆದ್ದರಿಂದ ಮೈಸೂರಿಗೆ ಮತ್ತು ಕನ್ನಡ ನಾಡಿನ ಪತ್ರಿಕೆಗಳು ದೊಡ್ಡ ವ್ಯಕ್ತಿತ್ವದಿಂದಲೂ

ವಿಶೇಷ ಗುಣದಿಂದಲೂ ಪ್ರಕಾಶಿಸಬೇಕು.

**ಕನ್ನಡ ಪತ್ರಿಕಾ ಲೋಕ**

೧) ಕನ್ನಡದ ಮೊದಲ ಪತ್ರಿಕೆ 'ಮಂಗಳೂರು ಸಮಾಚಾರ' ೧೮೪೩ರಲ್ಲಿ ಕ್ರಿಶ್ಚಿಯನ್ ಮಿಷನರಿಗಳಿಂದ ಪ್ರಾರಂಭವಾಯಿತು.

೨) ಎಂ. ವೆಂಕಟಕೃಷ್ಣಯ್ಯನವರಿಂದ ೧೮೮೫ರಲ್ಲಿ 'ವೃತ್ತಾಂತ ಚಿಂತಾಮಣಿ' ಮತ್ತು ೧೮೯೦ರಲ್ಲಿ 'ಸಾಧ್ವಿ' ಪತ್ರಿಕೆ ಸ್ಥಾಪಿಸಿದರು.

೩) ಕನ್ನಡದ ಮೊದಲ ಡೈಜೆಸ್ಟ್ 'ಕಸ್ತೂರಿ' ಪಾ. ಪಂ. ಆಚಾರ್ಯರಿಂದ ಪ್ರಾರಂಭವಾಯಿತು.

೪) ಡಿ. ವಿ. ಗುಂಡಪ್ಪನವರಿಂದ ೧೯೦೮ರಲ್ಲಿ ಭಾರತಿ ಪತ್ರಿಕೆ ಪ್ರಾರಂಭ

೫) ೧೯೨೫ರಲ್ಲಿ 'ವಿಶ್ವ ಕರ್ನಾಟಕ'- ತಿ. ತಾ. ಶರ್ಮರಿಂದ ಪ್ರಾರಂಭ

೬) ೧೯೩೧ರಲ್ಲಿ ಬಿ. ಎನ್. ಗುಪ್ತಾರಿಂದ ಪ್ರಜಾಮತ' ಆರಂಭ.

೭) ೧೯೩೧ರಲ್ಲಿ ಕೆ. ಸಿ. ರೆಡ್ಡಿ ಯವರಿಂದ 'ಜನವಾಣಿ' ಪತ್ರಿಕೆ ಪ್ರಾರಂಭ.

೮) ಆರ್. ಆರ್. ದಿವಾಕರ್‌ರಿಂದ 'ಸಂಯುಕ್ತ ಕರ್ನಾಟಕ' ೧೯೩೩ರಲ್ಲಿ ಪ್ರಾರಂಭ

೯) ೧೯೪೮ರಲ್ಲಿ ಬಿ. ಪುಟ್ಟಸ್ವಾಮಯ್ಯನವರಿಂದ 'ಪ್ರಜಾವಾಣಿ' ದಿನಪತ್ರಿಕೆ ಆರಂಭ.

೧೦) ೧೯೪೫ರಲ್ಲಿ ಪಾಟೀಲ್ ಪುಟ್ಟಪ್ಪನವರಿಂದ 'ಪ್ರಪಂಚ' ವಾರಪತ್ರಿಕೆ ಆರಂಭ.

೧೧) 'ಕನ್ನಡ ಪ್ರಭ' ದಿನಪತ್ರಿಕೆ ೧೯೬೭ರಲ್ಲಿ ಎನ್. ಎಸ್. ಸೀತಾರಾಮ್ ಶಾಸ್ತ್ರಿಯವರಿಂದ ಆರಂಭ

೧೨) ೧೯೭೦ರಲ್ಲಿ ಮಣಿಪಾಲ್‌ನಿಂದ 'ಉದಯವಾಣಿ' ಉದಯ.

೧೩) ಕನ್ನಡದಲ್ಲಿ ರಾಶಿಯವರ 'ಕೊರವಂಜಿ' ಅಲ್ಲದೆ, 'ನಗುವ ನಂದನ', 'ವಿಕಟ ವಿನೋದಿನಿ' ಎಂಬ ಹಾಸ್ಯಕ್ಕೆ ಮೀಸಲಾದ ಪತ್ರಿಕೆಗಳು ಇದ್ದವು.

೧೪) ಆಗ ಕನ್ನಡದಲ್ಲಿ ಅತ್ಯಧಿಕ ಪ್ರಸಾರವಾಗುತ್ತಿದ್ದ ದಿನಪತ್ರಿಕೆ 'ಪ್ರಜಾವಾಣಿ'

೧೫) ಉತ್ತಮ ಮುದ್ರಣಕ್ಕಾಗಿ ಹೆಚ್ಚು ಸಾರಿ ರಾಷ್ಟ್ರೀಯ ಪ್ರಶಸ್ತಿ ಗಳಿಸಿರುವ ಕನ್ನಡ ದಿನಪತ್ರಿಕೆ 'ಉದಯವಾಣಿ'.

## ii) ಆಕಾಶವಾಣಿ

ಇದು ಅಕ್ಷರ ಸಂಸ್ಕೃತಿಯಿಂದ ವಂಚಿತರಾದ ಹರಿಜನ ಗಿರಿಜನರಿಗೆಲ್ಲ ಮನೋರಂಜನೆ ಮತ್ತು ಜ್ಞಾನಾರ್ಜನೆಯ ಸಂಪನ್ಮೂಲ ರೇಡಿಯೋ, ಹೀಗಾಗಿ ರೇಡಿಯೋದಲ್ಲಿ ಬಳಕೆಯಾಗುವ ಕನ್ನಡದಲ್ಲಿ ಸಾಧ್ಯವಾದ ಮಟ್ಟಿಗೆ ಗ್ರಂಥಸ್ಥತೆ, ಸಂಸ್ಕೃತ ಭೂಯಿಷ್ಠತೆ, ಇಂಗ್ಲಿಷ್ ನಿಷ್ಠತೆಯನ್ನು ನಿವಾರಿಸಿರುತ್ತಾರೆ. ಜಾಗತಿಕ ಸಮಾಚಾರವನ್ನು ಬಿತ್ತರಿಸುವುದಕ್ಕೆ ಗ್ರಾಂಥಿಕ ಭಾಷೆಯನ್ನೇ ಉಪಯೋಗಿಸಬೇಕಾಗಿ ಬಂದರೂ ಅದು ನೇರ ಹಾಗೂ ಸರಳವಾಗಿರುತ್ತದೆ. ಅಲಂಕಾರ, ಹೋಲಿಕೆ, ಉತ್ಪ್ರೇಕ್ಷೆಗಳನ್ನು ಬಳಸಿ ವೇಳೆಯ ಅಪವ್ಯಯ ಮಾಡುವಂತಿಲ್ಲ. ಇಲ್ಲಿ ಪ್ರತಿನಿತ್ಯದ ಆಗುಹೋಗುಗಳನ್ನು ಜನತೆಗೆ ಮುಟ್ಟಿಸುವ ಜವಾಬ್ದಾರಿಯನ್ನು ಆಕಾಶವಾಣಿಯ ವಾರ್ತೆಯದು.

ಆಕಾಶವಾಣಿಯ ಭದ್ರಾವತಿ ನಿಲಯದ ಶಾಸ್ತ್ರೀಯ ಸಂಗೀತದ ಕಾರ್ಯಕ್ರಮಗಳಲ್ಲಿ ಕನ್ನಡ ಕೃತಿಗಳನ್ನು ಹಾಡಬೇಕೆಂದೂ, ಕನ್ನಡ ಕೃತಿಗಳನ್ನೇ ನುಡಿಸಬೇಕೆಂದೂ ಕಡ್ಡಾಯ ಮಾಡಿದ್ದ ದಿಟ್ಟ ಕನ್ನಡಿಗ ವಸಂತ ಕವಲಿ. ಇವರು ಆಕಾಶವಾಣಿಯಲ್ಲಿ ನಿರ್ದೇಶಕರಾಗಿದ್ದಾಗ ಮಾಡಿದರು.

---

೧. ಭಾಷೆ ರಚನೆ ಬಳಕೆ (ಸೋಮಶೇಖರ ಗೌಡ) ಪು. ಸಂ. ೧೬೮

ಕನ್ನಡದ ಸಂಗೀತ, ಸಾಹಿತ್ಯ, ಜನಪದ, ನಾಟಕ, ಸಣ್ಣಕಥೆ, ಚಲನಚಿತ್ರ- ಇತ್ಯಾದಿಗಳನ್ನೆಲ್ಲ ಕೇಳುಗರಿಗೆ ವ್ಯವಸ್ಥಿತವಾಗಿ ಮುಟ್ಟಿಸುವಲ್ಲಿ ಮಹತ್ವದ ಪಾತ್ರವಹಿಸಿದೆ ಆಕಾಶವಾಣಿ. ಹಿರಿಯ ಕವಿಗಳ ಭಾವಗೀತೆಗಳು, ಕಿರಿಯ ಕವಿಗಳ ಸ್ವರಚಿತ ಕವನಗಳು ಆಕಾಶವಾಣಿಯಿಂದ ಸಾಕಷ್ಟು ಪ್ರೋತ್ಸಾಹ ಪಡೆದಿವೆ. ಜನಪದ ಹಾಡುಗಳನ್ನು ಲೋಕಪ್ರಿಯಗೊಳಿಸುವುದರಲ್ಲಿ ರೇಡಿಯೋಗೆ ವಿಶೇಷ ಆಸಕ್ತಿ. ಪ್ರತಿಭಾವಂತ ಜನಪದ ಕಲಾವಿದರನ್ನು ಕರೆಸಿ ಅವರ ಸಾಹಿತ್ಯ ಸಂಗೀತವನ್ನು ಧ್ವನಿ ಮುದ್ರಿಸಿಕೊಂಡು ಕಾಲಕಾಲಕ್ಕೆ ಪ್ರಸಾರ ಮಾಡುವ ಮೂಲಕ ಜನರ ಆಸಕ್ತಿ ಕೆರಳಿಸುವ ಕೆಲಸವನ್ನು ಆಕಾಶವಾಣಿ ಮಾಡುತ್ತ ಬಂದಿದೆ. ಹೀಗೆಯೇ ಯಕ್ಷಗಾನ, ಗೊಂಬೆಯಾಟ, ರಂಗನಾಟಕಗಳೂ ಆಕಾಶವಾಣಿಯ ಪ್ರಸಾರದಲ್ಲಿ ಜನರನ್ನು ತಲುಪಿದೆ. ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳು ಬಾನುಲಿಯ ರಾಷ್ಟ್ರೀಯ ಪ್ರಸಾರದಲ್ಲಿ ಆಗಾಗ ಬಿತ್ತರಗೊಳ್ಳುತ್ತಿರುತ್ತದೆ.

ದೂರದರ್ಶನಕ್ಕಿಂತ ಮೊದಲು ವಿವಿಧ ಕ್ರೀಡೆಗಳ ವೀಕ್ಷಕ ವಿವರಣೆಯನ್ನು ಪ್ರಚಾರಕ್ಕೆ ತಂದದ್ದು ಆಕಾಶವಾಣಿ. ಹಾಕಿ, ಕ್ರಿಕೆಟ್, ಫುಟ್‌ಬಾಲ್, ಟೆನ್ನಿಸ್ ಇತ್ಯಾದಿ ಆಟಗಳು ರಾಜ್ಯ, ರಾಷ್ಟ್ರಮಟ್ಟದಲ್ಲಿ ನಡೆದಾಗ ಇವುಗಳ ಕಾಮೆಂಟ್ರಿಯನ್ನು ಕನ್ನಡದಲ್ಲಿ ಕೊಡುವ ಕೆಲಸವನ್ನು ಮಾಡಿ ಆಕಾಶವಾಣಿ ಕ್ರೀಡಾಸಕ್ತರ ಅಭಿಮಾನಕ್ಕೆ ಪಾತ್ರವಾದದ್ದಿದೆ. ಕ್ರಿಕೆಟ್ ಆಟದ ವೀಕ್ಷಕ ವಿವರಣೆ ಕೊಡುವಾಗ ಕನ್ನಡ ತನ ಮರೆಯಲು ಹೋಗಿ 'ಬ್ಯಾಟ್ಸ್‌ಮನ್' ಅನ್ನು 'ದಾಂಡಿಗ; 'ವಿಕೆಟ್ ಕೀಪರ್' ಅನ್ನು 'ಗೂಟರಕ್ಷಕ' ಎಂದೆಲ್ಲ ಕರೆದು ಅಪಹಾಸ್ಯಕ್ಕೆ ಗುರಿಯಾದದ್ದೂ ಇದೆ. ಇತ್ತೀಚೆಗೆ ಪಾರಿಭಾಷಿಕ ಶಬ್ದಗಳನ್ನೇ ಧಾರಾಳವಾಗಿ ಬಳಸುವಂಥ ಪ್ರವೃತ್ತಿ ಹೆಚ್ಚಾಗಿದೆ. ಇದಕ್ಕೂ ಈಗ ವೀಕ್ಷಕ ವಿವರಣೆಯಲ್ಲಿ ಜನ ಆಸಕ್ತಿ ಕಳೆದುಕೊಳ್ಳುತ್ತಿದ್ದಾರೆ ದೂರದರ್ಶನದ ದಾಳಿಯಿಂದಾಗಿ.

ಸಾಂಸ್ಕೃತಿಕ ಚಟುವಟಿಕೆಗಳ ಪ್ರತ್ಯಕ್ಷ ವರದಿ, ವೈಭವದ ದಸರಾ ಮೆರವಣಿಗೆಯ ಪ್ರತ್ಯಕ್ಷ ವೀಕ್ಷಕ ವಿವರಣೆ, ಕುಂಭಮೇಳ ಮಹಾಮಸ್ತಕಾಭಿಷೇಕ ಪ್ರತ್ಯಕ್ಷ ವಿವರಣೆಗಳನ್ನು ಕನ್ನಡದಲ್ಲಿ ಆಕಾಶವಾಣಿ ಪ್ರಸಾರ ಮಾಡುವ ಪರಂಪರೆಯನ್ನು ಹೊಂದಿದೆ. ಇದು ಶಾಲಾ ಕಾರ್ಯಕ್ರಮ, ಯುವವಾಣಿ, ಮಹಿಳಾ ಕಾರ್ಯಕ್ರಮ, ಕೃಷಿರಂಗ ಇತ್ಯಾದಿಗಳಲ್ಲಿ ವಿದ್ಯಾರ್ಥಿಗಳಿಗೆ, ಯುವಕರಿಗೆ, ಸ್ತ್ರೀಯರಿಗೆ, ರೈತರಿಗೆ ಮಾತೃಭಾಷೆಯಲ್ಲಿ ಮಾಹಿತಿ ನೀಡುತ್ತದೆ ಕೂಡಾ. ಆಕಾಶವಾಣಿಯ ಆಡಳಿತ ಕಛೇರಿಯಲ್ಲಿ ಕನ್ನಡದ ಬಳಕೆ ಶೂನ್ಯವಾದರೂ ಪ್ರಸಾರದಲ್ಲಿ ಅದರ ಬಳಕೆ ಪ್ರೀತ್ಯಾರ್ಹವಾಗಿದೆ. ಆಕಾಶವಾಣಿ ಸಂಪೂರ್ಣವಾಗಿ ಕನ್ನಡ ವಾಣಿಯಾಗಬೇಕೆಂಬುದು ಕನ್ನಡಿಗರ ಅಪೇಕ್ಷೆ.

"ಆಕಾಶವಾಣಿ, ವಿವಿಧ ವಿನೋದಾವಳಿಗಳನ್ನು ಪೂರೈಸುವ ಸಂಸ್ಥೆಯಲ್ಲ. ಜನತೆಯ ಕಲ್ಯಾಣ, ಪ್ರಗತಿ, ಮಾಹಿತಿ, ಹಕ್ಕುಬಾಧ್ಯತೆ, ಹೊಣೆಗಾರಿಕೆಯ ಅರಿವು, ಆಧುನಿಕತೆ, ವೈಜ್ಞಾನಿಕ ಮನೋವೃತ್ತಿ, ಆರೋಗ್ಯ, ಅಭಿವೃದ್ಧಿಗಳತ್ತ ಲಕ್ಷ್ಯ ಹರಿಸುವಂತೆ ಮಾಡಲು ಸರ್ವ ಪ್ರಯತ್ನ" ನಡೆಸುವಂಥದು ಎನ್ನುತ್ತಾರೆ, ಕರ್ನಾಟಕ ಸಾಂಸ್ಕೃತಿಕ ರಾಜಧಾನಿ ಮೈಸೂರು ಆಕಾಶವಾಣಿಯ ನಿಲಯ ನಿರ್ದೇಶಕರಾಗಿದ್ದ ಜ್ಯೋತ್ಸ್ನಾ ಕಾಮತ್ ಕನ್ನಡದ ಸವಿಯನ್ನು ನಿರಕ್ಷರಕುಕ್ಷಿಗಳಿಗೂ ನಾಡಿನ ಮೂಲೆ ಮೂಲೆಯಲ್ಲಿ ಮುಟ್ಟಿಸುವ ಸಮೂಹ ಮಾಧ್ಯಮ ಇದು.

## iii) ದೂರದರ್ಶನ

ಆಕಾಶವಾಣಿಗಿಂತಲೂ ದೂರದರ್ಶನ ಪರಿಣಾಮಕಾರೀ ಸಮೂಹ ಮಾಧ್ಯಮ. ಅದು ಶ್ರವಣ ಮಾಧ್ಯಮ ಮಾತ್ರವಾದರೆ, ಬಳಕೆಯಾದಂತೆ ದೂರದರ್ಶನದಲ್ಲಿ ಬಳಕೆಯಾಗುತ್ತಿಲ್ಲ. ದೂರದರ್ಶನದವರು ಕನ್ನಡವನ್ನು ಇನ್ನೂ ಒಗ್ಗಿಸಿಕೊಳ್ಳಬೇಕಿದೆ. ದೂರದರ್ಶನಕ್ಕೆ ಹೋಲಿಸಿದರೆ ಉದಯ ಟಿ. ವಿ. ಹೆಚ್ಚು ಜನಾದರಣೀಯವಾಗಿದೆ. ಡಿ. ಡಿ. ೯ ರಲ್ಲಿ ಕನ್ನಡ ಕಾರ್ಯಕ್ರಮಗಳು ಬರುತ್ತವಾದರೂ ಹಳೇ ಸಿನಿಮಾ ವೀಕ್ಷಣೆಯ ಸಮಯಕ್ಕೆ ಜನರು ಈ ಚಾನಲ್ ಕಾಯುವುದು ಗಮನಾರ್ಹ ಅಂಶ. ವಾರ್ತೆಗಳನ್ನು ಬಿತ್ತರಿಸುವಲ್ಲಿ ತಪ್ಪಾಗಿ ಮಾಡುತ್ತಿದ್ದ ಕನ್ನಡದ ಉಚ್ಚಾರಣೆ ಈಗ ಸುಧಾರಿಸಿದೆ ವಾಚಕರಲ್ಲಿ.

ಆಕಾಶವಾಣಿಯಂತೆಯೇ ದೂರದರ್ಶನದವರು ವೈವಿಧ್ಯಮಯ ಕನ್ನಡ ಕಾರ್ಯಕ್ರಮಗಳನ್ನು ಕಿರುತೆರೆಯ ಮೇಲೆ

---

೧. ಪ್ರತಿಭಾ ವಾರ್ಷಿಕ ಸಂಚಿಕೆ ಪು. ಸಂ. ೪೯

ಮೂಡಿಸುತ್ತಾರಾದರೂ ಅವುಗಳ ಆಕರ್ಷಣೆಗೆ ಧಾರಾವಾಹಿಗಳು, ಸಿನಿಮಗಳಷ್ಟು ಜನರು ವಾಲಿದಂತೆ ಅನಿಸುವುದಿಲ್ಲ. ಇತ್ತೀಚಿನ ಸಿಟಿ ಕೇಬಲ್ ಹಾವಳಿಯಿಂದಾಗಿ ನೂರಾರು ಪ್ರತಿಷ್ಠಿತ ಚಾನಲ್‌ಗಳು ಲಭ್ಯವಿರುವಾಗ ಡಿ. ಡಿ. ವೀಕ್ಷಣೆ ಸಮಾಚಾರ ಕೇಳುವಷ್ಟಕ್ಕೆ ಸೀಮಿತವಾಗಿರುವುದು ತಿಳಿದು ಬರುತ್ತದೆ. ತಮ್ಮ ಅಭಿರುಚಿಗೆ ತಕ್ಕಂತೆ ಆಯ್ಕೆ ಮಾಡಿಕೊಂಡು ವೀಕ್ಷಿಸುವ ಅವಕಾಶವಿರುವಾಗ ಡಿಸ್ಕವರಿ, ಬಿ. ಬಿ. ಸಿ, ಸ್ಟಾರ್ ಟಿ. ವಿ, ಜೀ. ಟಿ. ವಿ, ಎಂ. ಟಿ. ವಿಗಳು ವೈವಿಧ್ಯ ಕಾರ್ಯಕ್ರಮಗಳನ್ನು ದೊರಕಿಸಿಕೊಡುವಾಗ ಸೀಮಿತ ಅವಧಿಯ ದೂರದರ್ಶನಕ್ಕೆಲಿದೆ ಆಸ್ಪದ.

## iv) ಚಲನ ಚಿತ್ರ

ಒಂದು ಭಾಷೆಯ ಅಭ್ಯುದಯದಲ್ಲಿ ಆ ಪ್ರಾಂತ್ಯದ ಸಂಸ್ಕೃತಿ, ಕಲೆಗಳಂತೆಯೇ ಚಲನಚಿತ್ರವು ಮಹತ್ವದ ಪಾತ್ರವಹಿಸುತ್ತದೆ. ಅಷ್ಟೇ ಅಲ್ಲ, ಅದೊಂದು ಪ್ರಭಾವಶಾಲಿ ಮಾಧ್ಯಮವೂ ಹೌದು. ಕನ್ನಡ ಚಿತ್ರಗಳಲ್ಲಿ, ಪ್ರಾರಂಭಕ್ಕೆ ಕಂಡುಬರುತ್ತಿದ್ದ ಸದಭಿರುಚಿ, ಕಲೆಗಾರಿಕೆ, ಸಂಗೀತ, ಸಾಹಿತ್ಯದ ಮಧುರ ಬಾಂಧವ್ಯ ಈಗಿನ ಸಿನಿಮಾಗಳಲ್ಲಿ ಕಾಣಸಿಗುವುದು ದುರ್ಲಭ. ಹಿಂದೆಲ್ಲ ಕನ್ನಡದ ಹೆಸರಾಂತ ಲೇಖಕರ ಕಾದಂಬರಿಗಳು ಚಲನ ಚಿತ್ರಗಳಾಗಿ ಕೀರ್ತಿ ಪಡೆದವು. ಚಿತ್ರ ಸಾಹಿತ್ಯವನ್ನು ವೃತ್ತಿ ನಿರತ ಸಾಹಿತಿಗಳ ಜತೆಗೆ ಕವಿಗಳೂ, ಕಾದಂಬರಿಕಾರರೂ ರಚಿಸುತ್ತಿದ್ದರು. ಕನ್ನಡದ ಮೇಲೆ ಅಭಿಮಾನ ಇದ್ದಂಥ ನಿರ್ದೇಶಕರ ದಂಡೇ ಇತ್ತು.

ಸಾಮಾಜಿಕ, ಪೌರಾಣಿಕ, ಐತಿಹಾಸಿಕ, ಜಾನಪದೀಯ ವಸ್ತುಗಳ ಚಿತ್ರಗಳು ಕಣ್ಮನ ತಣಿಸುತ್ತಿದ್ದವು. ಚಿತ್ರರಂಗದಲ್ಲಿ ಕನ್ನಡದ ಪತಾಕೆ ಹಾರಿಸುತ್ತಿದ್ದವು. ಈಗ ಹಣ ಚೆಲ್ಲುವ ನಿರ್ಮಾಪಕರಿದ್ದಾರೆ. ಅವರ ಅಭಿರುಚಿಗೆ ಮಣೆ ಹಾಕುವ ನಿರ್ದೇಶಕರಿದ್ದಾರೆ. ಮರ್ಯಾದೆ ಮೀರಿ ಚೆಲ್ಲುಚೆಲ್ಲಾಗಿ ಅಭಿನಯಿಸುವ ನಟನಟಿಯರಿದ್ದಾರೆ. ಬೇಕಾದ ಹಾಗೆ ಸ್ಕ್ರಿಪ್ಟ್ ಬರೆದುಕೊಡುವ ಸಾಹಿತಿಗಳಿದ್ದಾರೆ. ಕೀಳು ಸಾಹಿತ್ಯ, ದ್ವಂದ್ವಾರ್ಥ-ಸಂಭಾಷಣೆ, ಅಶ್ಲೀಲ ಹಾಡುಗಳು ಹೇರಳವಾಗಿ ಇಂದಿನ ಕನ್ನಡ ಚಿತ್ರಗಳಲ್ಲಿ ಕಂಡು ಬರುತ್ತಿವೆ. ಆಮದು ನಟ-ನಟಿಯರು, ನಿರ್ದೇಶಕರು, ನಿರ್ಮಾಪಕರು ತುಂಬಿ ತುಳುಕುತ್ತಿರುವ ಕನ್ನಡ ಚಿತ್ರರಂಗದಲ್ಲಿ ಕನ್ನಡದ ಬಳಕೆ ಈಗ ಕಬ್ಬಿಣದ ಕಡಲೆ.

ಹೀಗೆ ಭಾಷೆಯೇ ಸಂವಹನದ ನೈಜ ನೆಲೆ. ಸಮೂಹ ಮಾಧ್ಯಮಗಳು ಭಾಷೆಯನ್ನು ಬಿಟ್ಟು ಬದುಕಲಾರವು. ಭಾಷೆಗೂ ಅಷ್ಟೇ, ಸಮೂಹ ಮಾಧ್ಯಮಗಳು ಒಡನಾಟ ಬೇಕೇಬೇಕು. ಪತ್ರಿಕೆಗಳು, ರೇಡಿಯೋ, ದೂರದರ್ಶನ ಮತ್ತು ಚಲನಚಿತ್ರ ಸಮೂಹ ಮಾಧ್ಯಮಗಳ ಕನ್ನಡ ಭಾಷೆಯನ್ನು ಬಳಸಿಕೊಂಡಿರುವ ಬಗೆ ಪರಿಶೀಲನಾರ್ಹ.

ಸಂವಹನ ಅಥವಾ ಇನ್ನೊಬ್ಬ ಜೀವಿಯೊಂದಿಗೆ ಸ್ಪಂದನ ಮನುಷ್ಯನಿಗೆ ಮೂಲಭೂತವಾದಕ ಕ್ರಿಯೆ. ನೀರಡಿಕೆಯಷ್ಟೇ ಮನುಷ್ಯನಿಗೆ ಸಂವಹನವೂ ಅಗತ್ಯ ಯಾವುದಾದರೊಂದು ರೀತಿಯಲ್ಲಿ ಸಂವಹನ ಮಾಡದ ಜೀವಿಯಿಲ್ಲ. ಅಂದರೆ ಜೀವಿಗೆ ಸಂವಹನವೇ ಭೂಷಣ, ಬದುಕಿರುವುದಕ್ಕೆ ಸಾಕ್ಷ್ಯಧಾರ

ಸಂವಹನದಲ್ಲಿ ಅನೇಕ ಹಂತಗಳಿವೆ. ನಮ್ಮೊಳಗೆ ನಡೆಯುವ ಸಂವಹನವನ್ನು ಆಂತರಿಕ ಸಂವಹನವೆಂದೂ (Intrapersonal Communication) ಇಬ್ಬರು ವ್ಯಕ್ತಿಗಳ ನಡುವೆ ನಡೆಯುವ ಸಂವಹನವನ್ನು ಅಂತರ್ ವ್ಯಕ್ತಿ ಸಂವಹನವೆಂದೂ (Interpersonal Communication) ಕರೆಯುತ್ತೇವೆ ಸಂವಹನದ ಹಂತ ದೊಡ್ಡದಾದಂತೆ ಗುಂಪುಸಂವಹನ (Group Communicatio). ಸಮೂಹ ಸಂವಹನ ( Group Communication ). ಸಂಮೂಹ ಸಂವಹನ (Mass Communication )ಗಳು ಉಪಯುಕ್ತವಾಗುತ್ತವೆ.

---

೧. ಸಮೂಹ ಮಾಧ್ಯಮಗಳು ಮತ್ತು ಶಿಕ್ಷಣ (ನಿರಂಜನವಾನಳ್ಳಿ) ಪು. ಸಂ. ೧೪೩

೧. ಭಾಷೆ ರಚನೆ ಬಳಕೆ (ಸೋಮಶೇಖರ ಗೌಡ) ಪು. ಸಂ. ೧೫೯

ವ್ಯಕ್ತಿಯ ನೆಲೆಯಲ್ಲಿ ನಡೆಯುವ ಮಾತುಕತೆಗಳೂ ವ್ಯಕ್ತಿಗಳಿಂದಾದ ಗುಂಪಿನ ನಡುವೆ ನಡೆಯುವ ಸಂವಹನಕ್ಕೂ ಜನಜಾತ್ರೆಗೆ ನಡೆಸುವ ಸಂವಹನಕ್ಕೂ ವ್ಯತ್ಯಾಸವಿದೆ. ನಿಮ್ಮ ಪಕ್ಕದವರಿಗೆ ಪಿಸುಮಾತು ಸಾಕು. ಗುಂಪಿನಲ್ಲಿರುವ ಜನಕ್ಕೆ ಕೂಗಿಹೇಳಬೇಕು. ಆದರೆ ಜನಸಾಗರವೇ ಸೇರಿದಾಗ ಎಲ್ಲರಿಗೂ ಕೇಳುವಂತೆ ಮಾತನಾಡಲು ಮೈಕು ಬೇಕಾಗುವುದಿಲ್ಲವೇ? ಹಾಗೆ.

ಅಸಂಖ್ಯ ಜನಕ್ಕೆ ಮಾಡುವ ಸಂವಹನವನ್ನು ಸಮೂಹ ಸಂವಹನ ಎನ್ನುತ್ತೇವೆ. ಇಲ್ಲಿ 'ಸಮೂಹ'ವೆಂಬುದು ಸ್ಪಷ್ಟ ವ್ಯಾಖ್ಯಾನಕ್ಕೆ ಒಳಪಟ್ಟಿರುವುದಿಲ್ಲ. ಶಿಸ್ತುಬದ್ಧ ಸಂಘಟನೆಯೂ ಸಮೂಹವಲ್ಲ. ಅದೊಂದು ಜನಗಳ ಅತಿ ದೊಡ್ಡಗುಂಪು. ಈ ಗುಂಪಿನಲ್ಲಿ ಎಲ್ಲ ವಯಸ್ಸಿನವರು ಎಲ್ಲ ಭಾಷೆಯವರು, ಎಲ್ಲ ಆಸಕ್ತಿಗಳವರು ಇರಬಹುದು ಗಂಡಸರು-ಹೆಂಗಸರು, ಶಿಕ್ಷಕರು, ಶಿಕ್ಷಿತರು ಮುಂತಾದ ವೈರುಧ್ಯಗಳಿರಬಹುದು. ಹೀಗಾಗಿ ಗುಂಪಿನ ಬಗ್ಗೆ ಸ್ಪಷ್ಟ ವ್ಯಾಖ್ಯಾನ ಕಷ. ಉದಾಹರಣೆಗೆ ಪ್ರಧಾನಮಂತ್ರಿಯವರು ರೇಡಿಯೋ ಅಥವಾ ಟಿವಿಯನ್ನು ಬಳಸಿ ಮಾಡುವ ಪ್ರಸಾರ ಭಾಷಣವನ್ನು ಇಂತಿಷ್ಟೇ ಜನ ಕೇಳಿದರು ಅಥವಾ ನೋಡಿದರೆಂದು ನಿಖರವಾಗಿ ಹೇಳಲು ಸಾಧ್ಯವೇ? ಆದರೆ ಏಕಕಾಲಕ್ಕೆ ಬಹು ದೊಡ್ಡ ಸಂಖ್ಯೆಯ ಜನರನ್ನು ಪ್ರಸಾರ ಭಾಷಣದ ಮೂಲಕ ಪ್ರಧಾನಮಂತ್ರಿ ತಲುಪಿದ್ದು ನಿಜ ಅದುವೇ ಸಮೂಹ ಸಂವಹನ.

ಹಿಂದೆಲ್ಲ ಏಕಕಾಲಕ್ಕೆ ಬಹುಸಂಖ್ಯೆಯ ಜನರನ್ನು ತಲುಪುವ ಪ್ರಮೇಯವೇ ಇರಲಿಲ್ಲ ಅಕ್ಷರವೇ ಇರದಿದ್ದ ಕಾಲದಲ್ಲಿ ಚಿತ್ರಮಯ ಸಾಮಾಜಿಕ ಬರವಣಿಗೆಗಳು ಸಮೂಹಕ್ಕೆ ಮಾಹಿತಿಯ ವಾಹಕಗಳಾಗಿದ್ದಿರಬೇಕು ನಾಲ್ಕು ಜನಕ್ಕೆ ತಿಳಿಸುವ ವಿಷಯವಿದ್ದಾಗ 'ಡಂಗುರ ಸಾರುವುದು' ಮಾನವ ಸಂಸ್ಕೃತಿಯ ಅಂಗವೇ ಆಗಿ ಬೆಳೆದುಬಂತು.

ಸಮೂಹ ಸಂವಹನ ನಡೆಯಲು ಅಗತ್ಯವಾಗಿ ಬೇಕಾಗುವುದು ಸಂವಹನಕಾರ ಸಮೂಹ ಅಥವಾ ಮಾಹಿತಿಯನ್ನು ಪಡೆಯುವ ದೊಡ್ಡ ಗುಂಪು ಹಾಗೂ ಇವುಗಳ ನಡುವೆ ಸಂಪರ್ಕ ಬೆಳೆಸಲು ಒಂದು ಮಾಧ್ಯಮ ಮಾಧ್ಯಮದ ನೆರವು ಸಮೂಹ ಸಂವಹನಕ್ಕೆ ಅನಿವಾರ್ಯ ಅಗತ್ಯ. ಏಕಕಾಲಕ್ಕೆ ವಿಶಾಲ ಪ್ರದೇಶದ ವೈವಿಧ್ಯಮಯ ಹಿನ್ನೆಲೆಯ ಜನಸಂಖ್ಯೆಗೆ ಮಾಹಿತಿ ಮತ್ತು ಅನುಭವಗಳನ್ನು ಪ್ರವಹಿಸಲು ಮತ್ತು ದಾಖಲಿಸಲು ಇರುವ ಸಂವಹನ ಸಾಧನಗಳೇ ಸಂವಹನಮಾಧ್ಯಮಗಳು ಆದಿ ಮಾನವನ ಡಂಗುರದಿಂದ ಆಧುನಿಕ ಮಾನವನ ಟಿವಿಯವರೆಗೆ ನಮೂಹ ಮಾಧ್ಯಮಗಳ ಲೋಕ ವಿಸ್ತಾರ ಆಧುನಿಕ ಸಮೂಹ ಮಾಧ್ಯಮಗಳು ಅರೆಕ್ಷಣದಲ್ಲಿ ಅಮಿತವಾಗಿ ಮಾಹಿತಿಯನ್ನು ಪ್ರದೇಶದ ನಿರ್ಬಂಧವಿಲ್ಲದೇ ಎಲ್ಲಾ ಕಡೆ ಪ್ರಸಾರ ಮಾಡಬಲ್ಲವು. ಏನೂ ಅಲ್ಲದವರನ್ನು ದೊಡ್ಡವರನ್ನಾಗಿ ದೊಡ್ಡವರನ್ನು ಸಣ್ಣವನ್ನಾಗಿ ಜಗತ್ತಿನ ಕಣ್ಣಿನಲ್ಲಿ ನಿಲ್ಲಿಸಬಲ್ಲವು ವೈಯಕ್ತಿಕ ಪರಿಚಯವಿಲ್ಲದ ಅಸಂಖ್ಯ ಗ್ರಾಹಕರನ್ನು ಏಕಕಾಲದಲ್ಲಿ ತಲುಪುವ ಸಮೂಹಮಾಧ್ಯಮಗಳು ಅವರ ಮೇಲೆ ಮೋಡಿಮಾಡಿ ಬಿಡಬಲ್ಲವು. ಜನರಿಗೆ ತಿಳಿಯದ ಸಂಗತಿಯನ್ನು ತಿಳಿಸುತ್ತಾ, ಅರಿವಿನ ಮಟ್ಟವನ್ನು ವಿಸ್ತರಿಸುತ್ತ ಬದುಕಿನ ರೀತಿಯನ್ನೇ ಬದಲಾಯಿಸಬಲ್ಲವು. ಅದಕ್ಕೇ ಅಂತರರಾಷ್ಟ್ರೀಯ ಖ್ಯಾತಿಯ ಸಂವಹನ ತಜ್ಞ ವಿಲ್ಬರ್ ಪ್ರಮ್‌ರವರು ಸಮೂಹ ಮಾಧ್ಯಮಗಳನ್ನು ದ್ವಿಗುಣಗೊಳಿಸುವ ಇಂದ್ರಜಾಲಿಗಳು (Magic Muitplievs ) ಎಂಬುದಾಗಿ ಕರೆದರು. ಸಮೂಹಮಾಧ್ಯಮಗಳು ಜನರನ್ನು ಯಾವ ರೀತಿಯಲ್ಲಿ ಬುಟ್ಟಿಗೆ ಹಾಕಿಕೊಳ್ಳುತ್ತವೆಯಂದರೆ ಒಂದು ಹಂತದಲ್ಲಿ ಮಾಧ್ಯಮಗಳೇ ಸಂದೇಶಗಳಾಗುತ್ತವೆ. (Medium is messasge) ಎಂಬುದಾಗಿ ಸಂವಹನ ತಜ್ಞ ಮಾರ್ಷಲ್ ಮಾಯಕ್‌ಲುಹಾನ್ ಅಭಿಪ್ರಾಯಪಡುತ್ತಾರೆ.

ಆಧುನಿಕ ದಿನಮಾನದಲ್ಲಿ ಸಮೂಹಮಾಧ್ಯಮಗಳಿಗೆ ಬಹುಮುಖ್ಯ ಪಾತ್ರವಿದೆ. ಅವುಗಳ ಪರಿಣಾಮವನ್ನು ಅರಿತೇ ಸಮೂಹಮಾಧ್ಯಮಗಳಿಗೆ ಹಿಡಿತದಲ್ಲಿ ಇರುಕೊಳ್ಳುವ ಪ್ರಯತ್ನಗಳು ಸಮಾಜದ ಶಕ್ತಿ ಕೇಂದ್ರಗಳಿಂದ ನಿರಂತರ ನಡೆಯುತ್ತವೆ. ಇಂದಿನ ಯುಗವನ್ನು ಪ್ರಚಾರದ ಯುಗವೆಂದು ಕರೆಯುತ್ತಾರೆ. ಏನು ಮಾಡುದರೂ ಮಾಡದಿದ್ದರೂ ಪ್ರಚಾರ ಪಡೆಯುವ ದುರಾಸೆ

---

೧. ಭಾಷೆ ರಚನೆ ಬಳಕೆ (ಸೋಮಶೇಖರ ಗೌಡ) ಪು. ಸಂ. ೧೬೦

೨. ಕನ್ನಡದ ಅಭಿವೃದ್ಧಿಉ (ಕೆ. ವಿ. ತಿರುಮಲೇಶ್) ಪು. ಸಂ. ೩

ಸಮಾಜದಲ್ಲಿ ಕಂಡುಬರುತ್ತದೆ. ಈ ತೆರನ ಪ್ರಚಾರಕ್ಕೆ ಸಮೂಹಮಾಧ್ಯಗಳು ಸಾಧನೆಗಳು ಏನೂ ಅಲ್ಲದ ಜನಸಾಮಾನ್ಯರಿಂದ ಹಿಡಿದು ಎಲ್ಲವನ್ನೂ ತೊರೆಯಬೇಕಾದ ಸ್ವಾಮಿಗಳ ವರೆಗೆ ಎಲ್ಲರೂ ಒಂದಲ್ಲಾ ಒಂದು ಮಾಧ್ಯಮವನ್ನು ತಮ್ಮ ಕೈಯಲ್ಲಿರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಪ್ರಚಾರದ ಸಾಧ್ಯತೆ. ಸಮೂಹಮಾಧ್ಯಮಗಳಿಗೆ ವರವೂ ಹೌದು ಶಾಪವೂ ಹೌದು.

ಸಮಾಜದಲ್ಲಿ ಸಮೂಹಮಾಧ್ಯಮಗಳ ಕಾರ್ಯವೇನು? ಸಾಮಾನ್ಯವಾಗಿ ಸಂವಹನ ಸಿದ್ಧಾಂತದಲ್ಲಿ ಸಮೂಹಮಾಧ್ಯಮಗಳ ಬವಬ್ದಾರಿಯನ್ನು ಈ ಕೆಳಗಿನಂತೆ ವಿವರಿಸುತ್ತಾರೆ.

| | |
|---|---|
| ಮಾಹಿತಿ | (To inform) |
| ಶಿಕ್ಷಣ ನೀಡುವುದು | (To Educate) |
| ಮನರಂಜನೆ ನೀಡುವುದು | (TO Entertain) |
| ಜಾಹೀರಾತು ಮಾಡುವುದು | (To Advertise) |
| ಸಮಾಜೀಕರಣಗೊಳಿಸುವುದು | (To socialise) |
| ಅಭಿಪ್ರಾಯ ರೂಢಿಸುವುದು | (To Develop) |

ಸಮೂಹಮಾಧ್ಯಮ ಎಂದಕೂಡಲೇ ಈಗ ನಮ್ಮ ಕಣ್ಣೆದುರಿಗೆ ಬರುವುದು ಟಿ. ವಿ. ಸಮೂಹಮಾಧ್ಯಮದ ಸಾಧ್ಯತೆಯಲ್ಲಿ ವಿಸ್ತರಿಸಿ ಜನಪ್ರಿಯತೆಯನ್ನು ಅದರ ಬಗ್ಗೆ ಅತ್ಯುತ್ಸಾಹ ಸಹಜವೇ. ಆದರೆ ಸಮೂಹಮಾಧ್ಯಮವೆಂದರೆ ಟಿ. ವಿ. ಒಂದೇ ಅಲ್ಲ. ಹೆಚ್ಚು ಜನರನ್ನು ಏಕಕಾಲಕ್ಕೆ ತಲುಪಬಲ್ಲ ಮಾಧ್ಯಮ ಯಾವುದಿದೆಯೋ ಅದೆಲ್ಲ ಸಮೂಹ ಮಾಧ್ಯಮವೇ ಪುಸ್ತಕಗಳು ದಿಪತ್ರಿಕೆಗಳು, ಪೋಸ್ಟರುಗಳೂ ಹೆಚ್ಚು ಜನರಿಗೆ ಮಾಹಿತಿ ತಲುಪಿಸುವ ಉಪಾಯಗಳೇ. ಚಲನಚಿತ್ರ, ರೇಡಿಯೋ, ಟೆಲಿನಿಜನ್, ವೀಡಿಯೋ, ಈಗ ಕಂಪ್ಯೂಟರ್ ಕೂಡ ಆಧುನಿಕ ಸಮೂಹಮಾಧ್ಯಗಳ ಸಾಲಿಗೆ ಸೇರುತ್ತವೆ. ಇದಲ್ಲದೇ ಸಹಸ್ರಾರು ವರ್ಷಗಳಿಂದ ಜನರ ಜೊತೆಯೇ ಬಳೆದುಬಂದ ಜನಪದ ಕಲೆಗಳಾದ ಗೊಂಬೆಯಾಟ, ಹರಿಕಥೆ, ಯಕ್ಷಗಾನ, ದೊಡ್ಡಾಟ, ಸಣ್ಣಾಟ, ಇವೆಲ್ಲ ಜನರ ನಡುವಿನ ಮಾಧ್ಯಮಗಳು. ಆ ಜನಪದ ಕಲಾಪ್ರದರ್ಶನಗಳೂ ಸಮೂಹಮಾಧ್ಯಮಗಳೇ.

ಶಿಕ್ಷಣವನ್ನು ಕೇವಲ ಶಾಲೆ-ಕಾಲೇಜುಗಳಲ್ಲಿ ಕಲಿಸುವ ಶಿಸ್ತಿಗೆ ತಳಕುಹಾಕಬೇಕಿಲ್ಲ. ಅದು ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆ. ಭಾರತದಂಥ ವಿಶಾಲವಾದ, ವೈವಿಧ್ಯಮಯ ಸಂಸ್ಕೃತಿಯ ದೇಶ ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯೊಂದನ್ನೇ ನೆಚ್ಚಿಕೊಳ್ಳಲು ಸಾಧ್ಯವಿಲ್ಲ. ಇಲ್ಲಿಗೆ ಸಾಕ್ಷರತಾ ಆಂದೋಳನಗಳು ಬೇಕು ವಯಸ್ಕರ ವಯಸ್ಕರ ಶಿಕ್ಷಣ ಕಾರ್ಯಕ್ರಮಗಳೂ ನಡೆಯಬೇಕು. ಜೀವನವೇ ಒಂದು ಶಾಲೆಯಾಗಿ ಜನಗಳು ಕಲಿಯಬೇಕು.

ಜಗತ್ತಿನಲ್ಲಿ ಇಂದು ಸಮೂಹಮಾಧ್ಯಮಗಳು ಸಮೂಹಶಿಕ್ಷಣದ ಪ್ರಬಲ ಮಾಧ್ಯಮಗಳಾಗಿ ನೆಲೆ ನಿಂತಿವೆ. ನಾವು ಬಯಸಲಿ-ಬಿಡಲಿ ಅವು ಮುಂದುವರೆಯಲಿವೆ ಹಾಗೂ ಗೊತ್ತಿದ್ದೋಗೊತ್ತಿಲ್ಲದೆಯೋ ಸಮಾಜದ ಪ್ರತಿಯೊಬ್ಬ ವ್ಯಕ್ತಿಯ ಮೇಲೆ ಪ್ರಭಾವ ಬೀರುವುದನ್ನು ಮುಂದುವರೆಸುತ್ತವೆ. ದೇಶದ ತಂದೆ, ತಾಯಿ ತಮ್ಮ ಶಿಕ್ಷಕರುಗಳಿಗಿಂತ ಹೆಚ್ಚಾಗಿ ಮಾಧ್ಯಮಗಳಿಂದ ಪ್ರಭಾವಿತರಾಗುತ್ತಲೆ. ಮಕ್ಕಳೇ ಏಕೆ, ದೊಡ್ಡವರೂ ಮಾಧ್ಯಮಗಳಿಲ್ಲದೇ ದಿನದೂಡುವುದು ಹೇಗೆ ಎಂಬ ಸ್ಥಿತಿಗೆ ತಲುಪಿದ್ದಾರೆ. ಟಿವಿ ಜಗತ್ತಿನ ಆಯಾ

---

೧. ಕರ್ನಾಟಕ ಸಂಪದ (ಡಾ. ಟಿ. ವಿ. ವೆಂಕಟಾಚಲಶಾಸ್ತ್ರಿ) ಪು. ಸಂ. ೧೦೫

೨. ಕನ್ನಡ ನಾಡಿನಲ್ಲಿ ಮತ ಸಮನ್ವಯ (ರಾಮನಾಥಯ್ಯ) ಪು. ಸಂ. ೨೦೫

೩. ಕನ್ನಡ ಭಾಷಾ ಸ್ವರೂಪ (ಡಾ. ಕೆ. ಕೆಂಪೇಗೌಡ) ಪು. ಸಂ. ೫೦

೪. ಕನ್ನಡ ಮತ್ತು ಕನ್ನಡಿಗರು (ಎಸ್. ಕೃಷ್ಣಪ್ಪ) ಪು. ಸಂ. ೬೯

ದೇಶಗಳ ಸಂಸ್ಕೃತಿ, ಸ್ಮಂತಿಕೆಗಳನ್ನೇ ಪುಡುಗಟ್ಟಿ, ಸಮಾಜಿಕವಾಗಿ ಬಹುಮುಖ ಉಪಯುಕ್ತತೆಯು ಸಾಧ್ಯತೆಯುಳ್ಳ ನಕಾರಾತ್ಮಕ ಪ್ರೇಕ್ಷಣೀಯಕಗೆ ಕಾರಣವಾಗುತ್ತಿದೆಯೆಂಬ ಅಪಾದನೆಯೂ ಇದೆ. ಮಾಧ್ಯಮಗಳನ್ನು ಬಳಸುವಲ್ಲಿ ನಾವು ದಾರಿತಪ್ಪುತ್ತಿದ್ದೇವೆಯೇ ಎಂಬ ಪ್ರಶ್ನೆಯೂ ನಮ್ಮೆದುರು ಇದೆ.

ಅದೇನೇ ಇದ್ದರೂ, ಸಮೂಹ ಮಾಧ್ಯಮದಿಂದ ಶಿಕ್ಷಣವನ್ನು ಬೇರ್ಪಡಿಸಿ ನೋಡುವುದೇ ಅಸಾಧ್ಯವಾದುದು. ಪುಸ್ತಕಗಳಿಲ್ಲದೆ ವಿದ್ಯಾರ್ಥಿಗಳು ಶಿಕ್ಷಣವನ್ನು ಊಹಿಸಬಹುದೆ? ಪುಸ್ತಕವೂ ಸಮೂಹ ಮಾಧ್ಯಮ ಸಾಧನವೇ. ಪುಸ್ತಕದಲ್ಲಿರುವ ಒಂದು ಕತೆ - ಓದುವ ಎಲ್ಲ ಮಕ್ಕಳಿಗೂ ಮನದಟ್ಟಾಗುತ್ತದೆ-ಆಗಬೇಕು, ಪುಸ್ತಕದ ಒಂದು ಪಾಠವನ್ನು ಎಲ್ಲರೂ ಕಲಿಯಬೇಕು ಪುಸ್ತಕದ ಮೂಲಕ ಸಮೂಹ ಶಿಕ್ಷಣ ನಡೆಯುತ್ತದೆ.

ವಿದ್ಯರ್ಥಿಗಳ ಅರಿವಿನ ಮಟ್ಟವನ್ನು ಹೆಚ್ಚಿಸುವುದು ಶಾಲಾ ಪುಸ್ತಕಗಳು ಮಾತ್ರಲ್ಲ ಸಾಲೆಯಲ್ಲಿ ಕಲಿತಿದ್ದೊಂದೇ ಕಲಿಯಲ್ಲ. ಶಾಲೆಯ ಹೊರಗಿನ ಪರಿಸರ, ಮನೆಯ ವಾತಾವರಣ ವಿದ್ಯಾರ್ಥಿಗಳಿಗೆ ಕಲಿಯುವುದು ಟಿವಿ ಪರದೆಯ ಮೇಲೆ ಪತ್ರಿಕೆಗಳಲ್ಲಿ ಬರುವ ಸುದ್ದಿ, ನಿಯತಕಾಲಿಕಗಳಲ್ಲಿ ಬರುವ ಮಕ್ಕಳ ಪುಟದ ಕತೆಗಳು, ಲೇಖನಗಳು ರೇಡಿಯೋದಲ್ಲಿ ಕೇಳಿಬರುವ ಸನಿಮಾ ಹಾಡು, ಜಾಹೀರಾತುಗಳು ಹಾಗೂ ಟಿವಿಯಲ್ಲಿ ಪ್ರಾಸಾರಗೊಳ್ಳುವ ನಾನಾ ಕಾರ್ಯಕ್ರಮಗಳು ಕಲಿಯುವ ಮಕ್ಕಳ ಮನಸ್ಸಿನ ಮೇಲೆ ಆಗಾಧ ಪರಿಣಾಮ ಬೀರುತ್ತವೆ. ಸಮೂಹ ಮಾಧ್ಯಮಗಳು ಶಿಕ್ಷಣದ ಪರ್ಯಾಯ ವ್ಯವಸ್ಥೆಗಳಾಗುವುದು ಹೀಗೆ. ನಗರಗಳ ಮಕ್ಕಳಿಗೆ ಟಿವಿಯ ರಾಮಾಯಣ, ಮಹಾಭಾರತ ಧಾರವಾಹಿಗಳು ಅಚ್ಚೊತ್ತಿದ ಉದಾಹರಣೆಯಿದೆ. ಉತ್ತರ-ದಕ್ಷಣ ಕನ್ನಡ ಜಿಲ್ಲೆಗಲ ಮಕ್ಕಳಿಗೆ ರಮಾಯಣ-ಮಹಾಭಾರತದ ಅನೇಕ ಪ್ರಸಂಗಗಳು ಸದಾ ಕಣ್ಣೆದುರಿಗಿರುತ್ತವೆ. ಅದಕ್ಕೆ ಕಾರಣ ಹಳ್ಳಿಯಲ್ಲಿ ನಡೆಯುವ ಯಕ್ಷಗಾನ ಪ್ರದರ್ಶನಗಳುಯ.

ಸಂಪ್ರಾದಾಯಿಕ ಶಿಕ್ಷಣ ವ್ಯವಸ್ಥೆಗೆ ಸಮೂಹ ಮಾಧ್ಯಮಗಳು ಪೂರಕ ಪಾತ್ರವನ್ನು ವಹಿಸಬಲ್ಲವು. ಶಾಲೆಗಳಲ್ಲಿ ಗುರುಗಳು ಕಲಿಸಿದ್ದನೇ ಮಾಧ್ಯಮಗಳು ವಿಶೇಷ ಕಾರ್ಯಕ್ರಮಗಳ ಮೂಲಕ ಇನ್ನೂ ಚೆನ್ನಾಗಿ ಮನದಟ್ಟುಮಾಡಬಲ್ಲವು. ಮೈಸೂರು ವಿಶ್ವವಿದ್ಯಾನಿಲಯದ ದೃಶ್ಯ-ಶ್ರವ್ಯಸಂಶೋಧನಾ ಕೇಂದ್ರ (ಎ. ವಿ. ಆರ್. ಸಿ.) ಬೆಂಗಳೂರು ದೂರದರ್ಶನದ ಮೂಲಕ ಪ್ರತೀ ಶನಿವಾರ ಪ್ರ,ಸಾರ ಮಾಡುತ್ತಿರುವ ಕನ್ನಡ ಶೈಕ್ಷಣಿಕ ಕಾರ್ಯಕ್ರಮ ಈ ಮಾದರಿಯದು. ದ್ವಿತೀಯ ಪಿ. ಯು. ಸಿ. ವಿಜ್ಞಾನ ಪಠ್ಯವನ್ನು ತೆಗೆದುಕೊಂಡು ಕನ್ನಡದಲ್ಲಿ ವಿಜ್ಞಾನ ಪಾಠಗಳನ್ನು ಈ ಕಾರ್ಯಕ್ರಮದಲ್ಲಿ ಪ್ರಸಾರಮಾಡಲಾಗುತ್ತಿದೆ. ಸಮಾನ್ಯವಾಗಿ ನಮ್ಮ ಪಿಯುಸಿ. ಕಾಲೇಜುಗಳಲ್ಲಿ ಇಂಗ್ಲಿಷ್ ಮಾಧ್ಯಮದಲ್ಲೇ ವಿಜ್ಞಾನ ಪಾಠಗಳು ನಡೆಯುತ್ತವೆ. ಇಂಗ್ಲಿಷ್ ಸರಿಯಾಗಿ ಅರ್ಥವಾಗದ ವಿದ್ಯಾರ್ಥಿಗಳಿಗೆ ವಿಜ್ಞಾನ ಪಾಠಗಳು ಕಬ್ಬಿಣದ ಕಡಲೆ ಅಂಥವರಿಗೆ ಯು. ಜಿ. ಸಿ. ಕಾರ್ಯಕ್ರಮದಡಿ ದೂರದರ್ಶನದಲ್ಲಿ ಪ್ರಸಾರವಾಗುತ್ತಿರುವ ಕನ್ನಡ-ವಿಜ್ಞಾನ ಪಾಠಘುಲು ತರಗತಿ.ಲ್ಲಿ ಅಸ್ಪಷ್ಟವಾಗಿ ಕಲಿತದ್ದನ್ನು ಚೆನ್ನಾಗಿ ಮನದಟ್ಟುಮಾಡಿಕೊಳ್ಳಲು ಸಹಾಯಕವೆಂದು ಅಬಿಪ್ರಾಯ ವ್ಯಕ್ತವಾಗುತ್ತದೆ.

ಭಾರತದಂಥ ದೇಶದಲ್ಲಿ ಸಾರ್ವಜನಿಕ ಅರಿವನ್ನು ಹೆಚ್ಚಿಸಲಿಕ್ಕೂ, ಶಿಕ್ಷಣವನ್ನು ಪ್ರಸಾರ ಮಾಡಲಿಕ್ಕೂ ಸಮೂಹ ಮಾಧ್ಯಮಗಳ ಪಾತ್ರ ಬಹಳ ಮುಖ್ಯ ಎಲ್ಲರಗೂ ಶಾಲೆ- ಕಾಲೇಜುಗಳಲ್ಲಿ

ಶಿಕ್ಷಣ ನೀಡವ ಸ್ಥಿತಿಯಲ್ಲಿ ಈ ದೇಶವಿಲ್ಲ. ಸ್ವತಂತ್ರ್ಯ ಬಂದ 50 ವರ್ಷಗಳ ಬಳಿಕವೂ ಜನಸಂಖ್ಯಯ ಅರ್ಧಧಷ್ಟು ಜನರಿಗೆ ಓದು-ಬರಹ ಗೊತ್ತಿಲ್ಲ ಹೀಗಿರುವಾಗ ಸಾಂಪ್ರದಾಯಿಕ ಶಿಕ್ಷಣಕ್ಕಿಂತ ಹೆಚ್ಚಾಗಿ ಅ - ಸಾಂಪ್ರದಾಯಿಕ ಶಿಕ್ಷಣಕ್ಕೆ ಮಾಧ್ಯಮ ಸಹಕಾರ ಹೆಚ್ಚು ಬೇಕು. ಶಿಕ್ಷಣ, ಜೀವನಮಟ್ಟ, ಭಾಷೆ, ಸಂಸ್ಕೃತಿ, ವಯಸ್ಸು, ಲಿಂಗ ಎಲ್ಲದಲ್ಲೂ ಅಸಮಾನತೆಯುಳ್ಳ ಬೃಹತ್ ಜನಸಂಖ್ಯೆಯ ವಿಶಾಲ ದೇಶವನ್ನು ತಲುಪಲು ಸಮೂಹಮಾಧ್ಯಮಗಳೇ ಬೇಕು. ಉದಾಹರಣೆಗೆ ಪಲ್ಸ್ ಪೋಲಿಯೋ ಕಾರ್ಯಕ್ರಮ ಭಾರತದಲ್ಲಿ ಯಶಸ್ವಿಯಾದ ರೀತಿಯನ್ನು ನೋಡಿ. ಸರ್ಕಾರವೂ ಸರ್ಕಾರೇತರ ಸಂಸ್ಥೆಗಳೂ ಸಾದ್ಯವಿರುವ ಎಲ್ಲಾ

ಸಮೂಹಮಾಧ್ಯಮಗಳನ್ನು ಬಳಸಿ ಪಲ್ಸ್ ಪೋಲಿಯೋ ಕಾರ್ಯಕ್ರಮದ ಪ್ರಖ್ಯಾತೆಯನ್ನು ಜನರಿಗೆ ತಿಳಿಹೇಳಿದ ಪರಿಣಾಮವಾಗಿ ಹಳ್ಳಿಮೂಲೆಗಳ ಅನಕ್ಷರಸ್ಥ, ಬಡ ತಂದೆ-ತಾಯಿಗಳೂ ಕೂಡ ಮುಂದೆ ಬಂದ ಮಕ್ಕಳಿಗೆ ಪೋಲಿಯೋ ಹಾಕಿಸಿದರು. ಸಮೂಹ ಮಾಧ್ಯಮಗಳಿಲ್ಲದಿದ್ದರೆ ಜನರನ್ನು ಕಾರ್ಯಪ್ರವೃತ್ತಗೊಳಿಸುವ ಈ ಸಾರ್ವತ್ರಿಕ ಶಿಕಷಣ ಸಾಧ್ಯವಿತ್ತೇ?

ಆದರೂ ಸಮೂಹಮಾಧ್ಯಮಗಳ ಸಾಧ್ಯತೆಗಳ ಬಗ್ಗೆ ಅತಿಕಲ್ಪಿತ ಭ್ರಮೆಗಳೂ ಇರಬಾರದು ಯಾಕೆಂದರೆ ಸಮೂಹಮಾಧ್ಯಮದ ಮಿತಿಯೆಂದರೆ ಇಲ್ಲಿ ಪ್ರತಿಕ್ರಿಯೆ ವಿರಳ ಅಥವಾ ನಿಧಾನ. ಉದಾಹರಣೆಗೆ ದೇಶದ 9% ಜನರನ್ನು ತಲುಪುವದೆನ್ನಲಾದ, ಶೇಕಡಾ 100 ಭೂಪ್ರದೇಶಕ್ಕೆ ಮುಟ್ಟುವ ಸಾಧ್ಯತೆಯುಳ್ಳ ಟಿ. ವಿ. ನಿಜಕ್ಕೂ ನಾವು ತಿಳಿದುಕೊಂಡಷ್ಟು ಪ್ರಬಾವಶಾಲಿಯೇ? ಕೆಲವು ಅನುಮಾನಗಳಿವೆ. ಟಿ. ವಿ. ಜನರನ್ನು ತಲಿಪುದೆ ಅಂದರೆ ಅವರು ಕಾರ್ಯಕ್ರಮ ನೋಡುತ್ತಾರೆ ಎಂಬ ಅರ್ಥವಲ್ಲ. ಪತ್ರಿಕೆ ಮನೆಗೆ ಬಂದಾಕ್ಷಣ ನೋಡಿದವರು, ಮಾಹಿತಿಯನ್ನು ಸರಿಯಾದ ಅರ್ಥದಲ್ಲಿ ಎಷ್ಟು ಜನ ಗ್ರಹಿಸಿದರೆಂಬುದು ತಕ್ಷಣ ಎಣಿಕೆಗೆ ಸಿಗುವುದಿಲ್ಲ. ಇಷ್ಟಾಗಿ 1991ರಲ್ಲಿ ನಡೆಸಿದ ಗಣತಿಯ ಆಧಾರದಲ್ಲಿ ಹೇಳುವುದಾದರೆ ಭಾರತ ಜನಸಂಖ್ಯೆ ಹೋಲಿಸಿದರೆ ಇಲ್ಲಿಯ ಮನೆಗಳಲ್ಲಿರುವ ರೇಡಿಯೋ (24%) ಟಿವಿ (5%)ಗಳ ನಿಕೃಷ್ಟವೆನ್ನಬಹುದು ನಮ್ಮಲ್ಲಿ ಹೆಚ್ಚು ಮಾರಾಟವಾಗಬಲ್ಲದಿಪತ್ರಿಕೆಗಳು ಪ್ರಸಾರ ಮಿಲಿಯನ್ನೂ ತಲುಪಿಲ್ಲ. ಈ ಮಿತಿಯನ್ನು ಗಮನದಲ್ಲಿರಿಸಿಕೊಳ್ಳಬೇಕು.

ಯುಕ್ತವಾಗಿ ಬಳಸಿದಾಗ ಸಮೂಹಮಾಧ್ಯಮಗಳು ಸಾರ್ವತ್ರಿಕ ಶಿಕ್ಷಣಕ್ಕೆ ಪೂರಕವಾಗಿ ಕೆಲಸ ಮಾಡಬಲ್ಲವು. ಶಿಕ್ಷಣದಲ್ಲಿ ಸಮೂಹಮಾಧ್ಯಮಗಳ ಬಳಕೆ ಶಿಕ್ಷಕನ ಸಾಧ್ಯತೆಯನ್ನು ಹೆಚ್ಚಿಸಬಲ್ಲದು. ಆದರೆ ಎಂದೂ ಶಿಕ್ಷನಿಗೆ ಪರ್ಯಾಯವಾಗಲಾರದು. ಇದನ್ನು ಅರ್ಥಮಾಡಿಕೊಂಡು ಸೂಕ್ತವಾಗಿ ಮಾಧ್ಯಮಗಳನ್ನು ಶಿಕ್ಷಣದಲ್ಲಿ ಬಳಸಿಕೊಳ್ಳವತ್ತ ಪ್ರಯೋಗಗಳು ನಡೆಯಬೇಕು.

## ಊ) ಕನ್ನಡ ಅಂಕಿ

ಕನ್ನಡ ಅಂಕಿ ಕನ್ನಡ ಭಾಷೆಯ ಅವಿಭಾಜ್ಯ ಅಂಗ. ಕನ್ನಡ ಅಂಕಿಗಳ ಸ್ಥಾನವನ್ನು ಇಂಗ್ಲಿಷ್ ಅಂಕಿಗಳು ಕಿತ್ತುಕೊಂಡಿವೆ. ಮುಕ್ಕಾಲು ಪಾಲು ಕನ್ನಡಿಗರಿಗೆ ಕನ್ನಡ ಅಂಕಿಗಳ ಪರಿಚಯವಿಲ್ಲ. ಕನ್ನಡ ಲೇಖಕರೇ ಇವುಗಳನ್ನು ಬಳಸುತ್ತಿಲ್ಲ. ಕನ್ನಡ ಲಿಪಿಗೂ ಕನ್ನಡ ಅಂಕಿಗೂ ಅಪೂರ್ವ ಹೊಂದಾಣಿಕೆ ಇದೆ. ಇದು ಬಹಳಷ್ಟು ಜನರಿಗೆ ಗೊತ್ತಿಲ್ಲ. ಕನ್ನಡ ಬೆಳವಣಿಗೆಯ ಸೌಂದರ್ಯ ಇನ್ನಷ್ಟು ವರ್ಧಿಸಲು ಕನ್ನಡ ಅಂಕಿಗಳನ್ನು ನಾವು ತಪ್ಪದೇ ಬಳಸಬೇಕು. 'ಕನ್ನಡ ಅಂಕಿಗಳನ್ನು ಬಳಸಿ' ಆಂದೋಲನವನ್ನು ಸ್ವಯಂ ಸ್ಫೂರ್ತಿಯಿಂದ ಡಾಕ್ಟರ್. ಎಂ. ಎನ್. ವಿ. ಪಂಡಿತಾರಾಧ್ಯ ಅವರು ಮಾಡುತ್ತ ಬಂದಿದ್ದಾರೆ. 'ಕನ್ನಡ ಅಂಕಿಗಳ ಪಾದ್ರಿ' ಎಂಬ ಅಭಿಮಾನದ ಅಡ್ಡ ಹೆಸರಿಗೆ ಪಕ್ಕಾಗಿರುವ ಈ ಮಹಾನುಭಾವರು ಈ ನಿಟ್ಟಿನಲ್ಲಿ ಉಂಟುಮಾಡುತ್ತಿರುವ ಕನ್ನಡ ಜಾಗೃತಿ ಕಡೆಗಣಿಸುವಂಥದಲ್ಲ.

ಒಂದು ಸಂಸ್ಥೆ ಮಾಡಬಹುದಾದ ಕೆಲಸವನ್ನು ಒಬ್ಬ ವ್ಯಕ್ತಿ ಮಾಡಿ ತೋರಿಸಿದ್ದಾರೆ. ಕನ್ನಡ ವಿಶ್ವವಿದ್ಯಾನಿಲಯ ತನ್ನ ಪ್ರಕಟಣೆಗಳಲ್ಲಿ ಕನ್ನಡ ಅಂಕಿಗಳನ್ನೇ ಬಳಸಿ ಉತ್ತಮ ಮಾರ್ಗದರ್ಶನ ನೀಡುತ್ತಿದೆ. ವಿಶ್ವವಿದ್ಯಾನಿಲಯದ ಪ್ರಸಾರಂಗಗಳಲ್ಲಿ ಕನ್ನಡ ಅಂಕಿಗಳ ಜೊತೆಗೆ ಇಂಗ್ಲಿಷ್ ಅಂಕಿಗಳೂ ಬಳಕೆಯಾಗುತ್ತಿವೆ. ಸಂಪೂರ್ಣವಾಗಿ ಕನ್ನಡ ಅಂಕಿಗಳನ್ನೇ ವ್ಯವಹಾರ - ಆಡಳಿತದಲ್ಲಿ ಎಲ್ಲೆಲ್ಲೂ ಬಳಸುವಂಥ ದಿವಸಗಳು ಬೇಗ ಬರಬೇಕಿದೆ.

ಕನ್ನಡಿಗರೆಲ್ಲಾ ಕನ್ನಡ ಅಂಕಿಗಳನ್ನು ಕಲಿಯಬೇಕು ಹಾಗೂ ಉಪಯೋಗಿಸಬೇಕು ಎಂಬುದರಲ್ಲಿ ಸಂದೇಹವಿಲ್ಲ. ಎಲ್ಲಾ

---

೧. ಕನ್ನಡ ತಂತ್ರಾಂಶ (ಡಾ. ಎಂ. ಎನ್. ವಿ. ಪಂಡಿತಾರಾಧ್ಯ) ಪು. ಸಂ. ೩

೨. ಮಾನವ ಮಿತ್ರ ಗಣಕ (ಕ್ಷಮಾ) ಪು. ಸಂ. ೧೭

ಪಠ್ಯಪುಸ್ತಕಗಳಲ್ಲೂ ಇದಕ್ಕೆ ಅನುವಿರತಕ್ಕದ್ದು. ಆದರೂ ಈಗ ಜನ ಬಳಸುತ್ತಿರುವಂಥ 'ಇಂಗ್ಲಿಷ್' ಅಂಕಿಗಳಿರುವಲ್ಲೆಲ್ಲಾ ಕನ್ನಡ ಅಂಕಿಗಳನ್ನೇ ಬಳಸಬೇಕು ಎಂದರೆ ಅದಕ್ಕೆ ಜನಬೆಂಬಲ ಸಿಗುವುದು ಕಷ್ಟವಾಗುತ್ತದೆ. ನಾವು 'ಇಂಗ್ಲಿಷ್' ಎಂದು ತಿಳಿದುಕೊಂಡಿರುವ ಅಂಕಿಗಳು ಇಂಗ್ಲಿಷ್ ಅಲ್ಲವೇ ಅಲ್ಲ! ಇವು ಮೂಲತಃ ಅರೇಬಿಕ್, ಸೊನ್ನೆ ಭಾರತದಿಂದಲೇ ಅರೇಬಿಯಾಕ್ಕೆ ಹೋಯಿತು ಎನ್ನುತ್ತಾರೆ.

ಅದೇನೇ ಇದ್ದರೂ ಈ ಹೊತ್ತು ಈ 'ಇಂಗ್ಲಿಷ್' ಅಂಕಿಗಳು ನಮ್ಮದೇ ಆಗಿದೆ. ಹಾಗೂ ಈ ಅಂಕಿಗಳನ್ನು ಉಪಯೋಗಿಸಿದ ಮಾತ್ರಕ್ಕೆ ನಮ್ಮ ಕನ್ನಡತನವೇನೂ ನಷ್ಟವಾಗುವುದಿಲ್ಲ. ಆದರೂ ಕನ್ನಡ ಅಕಿಗಳನ್ನು ಕೂಡ ನಾವು ಬಿಡಬಾರದು. ಪುಸ್ತಕಗಳ ಪುಟಸಂಖ್ಯೆ, ಖಾಸಗಿ ಪತ್ರಗಳ ತಾರೀಖು, ಅಂಚೆ ಪಿನ್‌ಕೋಡು ಮುಂತಾದ ಕಡೆ ಕನ್ನಡ ಅಂಕಿಗಳನ್ನು ಇಟ್ಟುಕೊಂಡು ಸಾರ್ವಜನಿಕ ಜಾಗಗಳಲ್ಲಿ ಈಗ ನಾವು ಬಳಸುವ ಅಂಕಿಗಳನ್ನು ಮುಂದುವರಿಸುವುದು ಅಗತ್ಯ. ರೋಮನ್ ಅಂಕಿಗಳು ಈ ರೀತಿಯಾಗಿ ಸದ್ಯ ಕೆಲವು ಕಡೆ ಬಳಕೆಯಾಗುತ್ತಿರುವುದನ್ನು ಗಮನಿಸಬೇಕು. ಕನ್ನಡ ಚಳುವಳಿಯ ಶಕ್ತಿ ವೃಥಾ ಪೋಲಾಗದೆ ಸರಿಯಾದ ಕಡೆ ಉಪಯೋಗವಾಗಬೇಕಾದರೆ ಯಾವುದು ಮುಖ್ಯ, ಯಾವುದು ಅಮುಖ್ಯ, ಯಾವುದು ಜನೋಪಯೋಗಿ, ಯಾವುದು ಜನ ವಿರೋಧಿ ಎನ್ನುವ ತಾರತಮ್ಯ ವಿವೇಕ ಮೂಡುವುದು ಅಗತ್ಯವಾಗಿದೆ.

ವ್ಯಕ್ತವಾಗಿ ಕಾಣಿಸುವಂಥ ನೆಲೆಯಲ್ಲಿ ಮಾತ್ರವೇ ಕನ್ನಡಕ್ಕೆ ಅಪಾಯ ಎನ್ನುವುದು ಇನ್ನೊಂದು ದೊಡ್ಡ ತಪ್ಪುಕಲ್ಪನೆ. ಅಂಗಡಿ ಫಲಕ, ಬಸ್ಸು ನಂಬರ್, ಪ್ಲೇಟು ಮುಂತಾದವನ್ನು ಕನ್ನಡಕ್ಕೆ ಬದಲಿಸುವುದು, ಅಂಕೆಗಳನ್ನು ಕನ್ನಡದಲ್ಲಿ ಬರೆಯುವುದು- ಇವೆಲ್ಲ ಸಾಂಜ್ಞಿಕವಾಗಿ ಮುಖ್ಯವೇ ಹೊರತು ಆಳದಲಿಲ್ಲ. ಕನ್ನಡಕ್ಕೆ ಈ ಹೊರಮಟ್ಟದ ಯಾವುದರಿಂದಲೂ ಅಪಾಯವಿಲ್ಲ. ಅಪಾಯವಿರುವ ಸ್ತರ ಸುಲಭವಾಗಿ ನಮ್ಮ ಗೋಚರಕ್ಕೆ ಬರುವಂಥದಲ್ಲವಾದ್ದರಿಂದ ಆ ಕುರಿತು ಮಾತನಾಡುವುದೂ ಕಷ್ಟವಾಗುತ್ತದೆ. ಆದ್ದರಿಂದಲೇ ಜನಕ್ಕೆ ಇದರ ಅರಿವು ಮಾಡಿಕೊಡುವುದಾಗಲಿ ಅವರ ಬೆಂಬಲ ಗಳಿಸುವುದಾಗಲಿ ಸುಲಭದ ಕಾರ್ಯವಾಗದೆ ಉಳಿದಿರುವುದು. ಆದರೂ ಈ ಕಾರಣಕ್ಕೇ ಸಮಸ್ಯೆಗಳನ್ನು ಅವುಗಳ ಗಂಭೀರ ನೆಲೆಯಲ್ಲಿ ಅರ್ಥಮಾಡಿಕೊಳ್ಳುವುದು ಅಗತ್ಯ. ಕರ್ನಾಟಕ ಸಾಂಸ್ಕೃತಿಕ ರಾಜಧಾನಿ ಮೈಸೂರು ನಗರದ ಜನಪ್ರಿಯ ಕನ್ನಡ ದಿನಪತ್ರಿಕೆ ಆಂದೋಲನದಲ್ಲಿ ಪೂರ್ಣಪ್ರಮಾಣದಲ್ಲಿ ಕನ್ನಡ ಅಂಕಿಯನ್ನು ಬಳಸುತ್ತಿರುವುದು ಸ್ವಾಗತಾರ್ಹ.

## ಧರ್ಮ

ಕರ್ನಾಟಕ ರಾಜ್ಯದಲ್ಲಿ ಬೌದ್ಧ, ಜೈನ್, ಶೈವ, ವೀರಶೈವ, ವೈಷ್ಣವ, ಮುಸ್ಲಿಂ, ಕ್ರೈಸ್ತ ಮುಂತಾದ ಧರ್ಮಗಳು ಹೆಚ್ಚು ಪ್ರಚಾರದಲ್ಲಿ ಇದ್ದ ಕಾರಣ ಈ ಬೇರೆ - ಬೇರೆ ಧರ್ಮಗಳ ಆಚರಣೆ ಇತ್ಯಾದಿಗಳಿಗೆ ಸಂಬಂಧಿಸಿದ ಶಬ್ದಗಳು ಕನ್ನಡವನ್ನು ಪ್ರವೇಶಿಸಲು ಅವಕಾಶವಾಯಿತು. ಈ ಬಗೆ-ಬಗೆಯ ಧಾರ್ಮಿಕ ಶಬ್ದಗಳು ಆ ಬೇರೆ-ಬೇರೆ ಧರ್ಮಗಳನ್ನು ಪ್ರತಿನಿಧಿಸಿದರೂ ಅವು ಸಾಮಾನ್ಯವಾಗಿ ಕನ್ನಡದಲ್ಲಿ ರೂಢಿಗೆ ಬಂದು ಹೋಗಿವೆ. ಕರ್ನಾಟಕದಲ್ಲಿ ನೆಲೆಸಿರುವ ಮುಸ್ಲಿಮರ ಮೂಲಕ ಅವರ ಧರ್ಮ ಮತ್ತು ಆಚರಣೆಗೆ ಸಂಬಂಧಿಸಿದ ಅರಬ್ಬಿ, ಪಾರಸಿ, ಉರ್ದು, ಹಿಂದೂಸ್ತಾನಿ, ಮುಂತಾದ ಶಬ್ದಗಳು, ಕ್ರೈಸ್ತರ ಮೂಲಕ ಇಂಗ್ಲಿಷ್, ಪೋರ್ಚುಗೀಸ್, ಗ್ರೀಕ್ ಮುಂತಾದ ಶಬ್ದಗಳು ಕನ್ನಡದಲ್ಲಿ ಸ್ವೀಕೃತಗೊಂಡು ಬೆರೆತುಹೋಗಿವೆ.

ಅಲ್ಲಾ (ದೇವರು), ಸೈತಾನ (ಪಿಶಾಚಿ), ಕುರಾನ್ (ಧರ್ಮಗ್ರಂಥ), ಮೊಹರಮ್, ಈದ್‌ಮಿಲಾದ್, ರಂಜಾನ್, ಬಕ್ರೀದ್ ಮುಂತಾದ ಧರ್ಮ ಸಂಬಂಧಿ ಶಬ್ದಗಳು, ಕವಾಲಿ, ಇನಾಮು, ಇಮಾಮು, ಸಲಾಂ, ಮಸೀದಿ, ಕಬೀರ, ಫಕೀರ, ನಮಾಜು (ಪ್ರಾರ್ಥನೆ), ಶಾದಿ, ನಿಖಾಹ, ತಲಾಕ್, ದಫನ್, ಮೊದಲಾದ ಶಬ್ದಗಳು ಕನ್ನಡದಲ್ಲಿ ಬಳಕೆಯಲ್ಲಿವೆ. ಇವು ಅರಬ್ಬಿ, ಪಾರಸಿ ಮತ್ತು ಉರ್ದು ಶಬ್ದಗಳು, ಕ್ರಿಶ್ಚಿಯನ್ನರು ಬಳಸುವ ಚರ್ಚು, ಸಿಲುಬೆ, ಏಸು, ಏಸುಕ್ರಿಸ್ತ, ಬೈಬಲ್ (ಧರ್ಮಗ್ರಂಥ), ಆರ್ಚ್‌ಬಿಷಪ್, ಪೋಪ್,

---

೧. ಕನ್ನಡ ಜನಪದರ ರಾಜಕೀಯ ಹೃದಯ (ತಾತಾಚಾರ್ಯ ಶರ್ಮ) ಪು. ಸಂ. ೮೩

೨. ಕನ್ನಡದಿಂದ ಕನ್ನಡಿಗರ ಉದ್ಧಾರ (ರಾಜಶೇಖರ್) ಪು. ಸಂ. ೧

ಬಿಶಪ್, ಕ್ರಿಸ್‌ಮಸ್, ಕ್ರಿಸ್ತ ಮುಂತಾದ ಶಬ್ದಗಳು ಕನ್ನಡಕ್ಕೆ ಬಂದು ಸೇರಿವೆ. ಇದೇ ರೀತಿ ಇಂಗ್ಲಿಷ್, ಪಾರಸಿ, ಗ್ರೀಕ್ ಮತ್ತು ಪೋರ್ಚುಗೀಸ್ ಶಬ್ದಗಳು ಕೂಡ ಕನ್ನಡದಲ್ಲಿ ಬಳಕೆಯಲ್ಲಿವೆ. ಇವುಗಳನ್ನೇ ಧರ್ಮ ಮತ್ತು ಆಚರಣೆಗೆ ಸಂಬಂಧಿಸಿದ ಶಬ್ದಗಳು ಎನ್ನುವರು.

ಕನ್ನಡ ಚಳುವಳಿ ಜನ್ಮ ತಳೆದ ಹಿನ್ನೆಲೆ, ತಮಿಳು ನಾಡಿನಲ್ಲಿ ಪೆರಿಯಾರ್ ರಾಮಸ್ವಾಮಿನಾಯ್ಕರ್‌ರವರು ಬ್ರಾಹ್ಮಣರ ಜುಟ್ಟು ಮತ್ತು ಜನಿವಾರವನ್ನು ಕತ್ತರಿಸುವ ಚಳುವಳಿ ಮಾಡಿದ ಸಂದರ್ಭ ಹಾಗೂ ಮೈಸೂರು ಬ್ರಾಹ್ಮಣರು ನಾಲ್ವಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ತಮಿಳುನಾಡು ಬ್ರಾಹ್ಮಣರಿಗೆ ಹೆಚ್ಚಿನ ಆದ್ಯತೆಯಿದೆ ಎಂದು ಪ್ರತಿಭಟಿಸಿದುದರ ಪರಿಣಾಮವಾಗಿ, ಕನ್ನಡ ಚಳುವಳಿಯನ್ನು ಪ್ರಾರಂಭಿಸಿದವರು, ಮೂಲತಃ ತಮಿಳುನಾಡಿನ ಬ್ರಾಹ್ಮಣರಾದ ಅಯ್ಯಂಗಾರಿಗಳು, ತಮಿಳು ದ್ರಾವಿಡರ ಮೇಲಿನ ಸಿಟ್ಟಿಗಾಗಿ ಕನ್ನಡ ಚಳುವಳಿ ಉಗಮವಾಯಿತು. ದ್ರಾವಿಡ ಚಳುವಳಿಯ ಸಂದರ್ಭದಲ್ಲಿ ತಮಿಳು ಭಾಷೆಯಲ್ಲಿದ್ದ ಸಂಸ್ಕೃತವನ್ನೆಲ್ಲಾ ಒಂದು ಅಕ್ಷರವೂ ಬಿಡದಂತೆ ಅಲ್ಲಿನ ಸಾಹಿತಿಗಳು, ಸಂಶೋಧಕರು, ವಿದ್ವಾಂಸರು ಕಸ ತೆಗೆಯುವಂತೆ ತೆಗೆದು ಹಾಕಿದರು.

## ಋ) ಸೈನ್ಯ

ಕನ್ನಡ ಭಾಷೆಯ ಧ್ವನಿ ವ್ಯವಸ್ಥೆಗೆ ತಕ್ಕಂತೆ ವಿದೇಶೀ ಶಬ್ದಗಳನ್ನು ಕನ್ನಡೀಕರಣಗೊಳಿಸಿಕೊಳ್ಳಲಾಗಿದೆ. ಹೀಗೆ ಕನ್ನಡೀಕರಣಗೊಂಡ ಶಬ್ದಗಳನ್ನು ಬಳಸಲಾಗುತ್ತಿದೆ. ಕನ್ನಡದ ಪ್ರಾಚೀನ ಶಿಲಾಶಾಸನಗಳಲ್ಲಿ ಹಾಗೂ ಸಾಹಿತ್ಯ ಗ್ರಂಥಗಳಲ್ಲಿ ಇವುಗಳಿಗೆ ಸಂಬಂಧಿಸಿದ ಅನೇಕ ಉಲ್ಲೇಖನಗಳು ದೊರೆಯುತ್ತದೆ. ಕನ್ನಡಿಗರೊಡನೆ ಉಂಟಾಗಿದ್ದ ಗ್ರೀಕರ, ಅರಬ್ಬರ, ಪೋರ್ಚುಗೀಸರ, ಇಂಗ್ಲಿಷ್‌ರ ಸಂಪರ್ಕ ಮುಂತಾದವುಗಳಿಗೆ ಸಂಬಂಧಿಸಿದ ಉಲ್ಲೇಖನಗಳು ಇತಿಹಾಸದ ಉದ್ದಕ್ಕೂ ದೊರೆಯುತ್ತದೆ. ವಿಜಯನಗರದ ಕಾಲದಲ್ಲಿ ಬಹಮನಿ ಸುಲ್ತಾನರ ಮೂಲಕ ಅನಂತರ ಮೊಗಲರ ಮೂಲಕ, ಮರಾಠರ ಮೂಲಕ, ಇಂಗ್ಲಿಷ್‌ರ ಮೂಲಕ, ಆಡಳಿತ, ಸಮರ, ಸಮರಜೀವನ, ಧಾರ್ಮಿಕ ಆಚರಣೆ ಇತ್ಯಾದಿಗಳಿಗೆ ಸಂಬಂಧಿಸಿದ ಅನೇಕ ಶಬ್ದಗಳು ಕನ್ನಡವನ್ನು ಪ್ರವೇಶಿಸಿದೆ.

ಮುಸಲ್ಮಾನರ, ಬ್ರಿಟೀಷರ, ಮರಾಠಿಗರ, ಪೋರ್ಚುಗೀಸರ ಹಲವಾರು ಬಗೆಯ ಸಮರತಂತ್ರಕ್ಕೆ ಸಂಬಂಧಿಸಿದ ಶಬ್ದಗಳು ಯಥಾವತ್ತಾಗಿ ಇಲ್ಲವೇ ಅಲ್ಪ-ಸ್ವಲ್ಪ ಬದಲಾವಣೆಯೊಡನೆ ಕನ್ನಡಕ್ಕೆ ಬಂದು ಬಳಕೆಯಲ್ಲಿದೆ. ವಿದೇಶೀಯರ ಸಮರತಂತ್ರಗಳ ಪ್ರಭಾವ ಕನ್ನಡ ನಾಡಿನ ಅರಸರ ಮೇಲೂ ಉಂಟಾಗಿದೆ. ಅವರು ವಿದೇಶಗಳಿಂದ ಪಡೆದುಕೊಂಡ ಫಿರಂಗಿ, ಬಂದೂಕು, ತುಫಾಕಿ, ಮುಂತಾದ ಆಯುಧಗಳನ್ನು, ಕಂಜರ, ಜಂಬಿಯಗಳಂತಹ ಕತ್ತಿಗಳನ್ನು, ಒಂದು ಬಗೆಯ ಈಟಿ ಸಾಧನಗಳನ್ನು, ಬೆಲೆಯ ಎಂಬ ಲೋಹದ ಕವಚಗಳನ್ನು ಬಳಸುತ್ತಿದ್ದರು. ಇದರಿಂದ ಇವುಗಳಿಗೆ ಸಂಬಂಧಿಸಿದ ಎಷ್ಟೋ ಶಬ್ದಗಳು ಕನ್ನಡದಲ್ಲಿ ಸೇರಿ ಬೆರತು ಹೋಗಲು ಅವಕಾಶವಾಯಿತು. ಸೈನ್ಯ ವಿಭಾಗಗಳಿಗೆ ಸಂಬಂದಿಸಿದ ಲಷ್ಕರಿ, ಖಿಲ್ಲೆ ಇತ್ಯಾದಿ ಶಬ್ದಗಳು ಕನ್ನಡವನ್ನು ಪ್ರವೇಶಿಸಿದೆ.

ಸಿಪಾಯಿಗಳನ್ನು, ವೀರಯೋಧರನ್ನು 'ಬಹಾದ್ದೂರ್' ಎಂದು ಗೌರವಿಸುವುದು ಮುಂತಾದವುಗಳಿಗೆ ಸಂಬಂಧಿಸಿದ ಅನೇಕ ಶಬ್ದಗಳನ್ನು, ಅರಬ್ಬಿ, ಪಾರಸಿ ಮುಂತಾದ ಭಾಷೆಗಳಿಂದ ಪಡೆದುಕೊಳ್ಳಲಾಗಿದೆ. ಹಾಗೆಯೇ ಆಟಂಬಾಂಬು, ತೇಪು, ಕ್ಯಾಪ್ಟನ್, ಅಡ್ಮಿರಲ್, ಗನ್, ಟ್ಯಾಂಕು, ಪಿಸ್ತೂಲು, ರೈಫಲ್ ಮುಂತಾದ ಇಂಗ್ಲಿಷ್ ಶಬ್ದಗಳು ಇಂದಿಗೂ ಬಳಕೆಯಲ್ಲಿರುವುದನ್ನು ಕಾಣಬಹುದು.

## ಎ) ಕನ್ನಡ ತಂತ್ರಾಂಶ

ಮಾಹಿತಿ ತಂತ್ರಜ್ಞಾನ ಯುಗವೆಂದು ಕರೆಯಲ್ಪಡುತ್ತಿರುವ ಈ ದಿನಗಳಲ್ಲಿ ಗಣಕಗಳ ಬಳಕೆ ವ್ಯಾಪಕವೂ, ಅನಿವಾರ್ಯವೂ ಆಗಿ ಪರಿಣಮಿಸುತ್ತಿದೆ. ಗಣಕಗಳನ್ನು ಬಳಸುವವರ ಸಂಖ್ಯೆ ಹೆಚ್ಚುತ್ತಿದೆ. ಅಂತೆಯೇ ಎಲ್ಲ ವ್ಯವಹಾರಗಳ ಗಣಕೀಕರಣದ ಅವಶ್ಯಕತೆ ಈಗ ಹೆಚ್ಚಿದೆ. ಈ ಆಕರ್ಷಕ ತಾಂತ್ರಿಕತೆಯನ್ನು ಒಗ್ಗಿಸಿಕೊಂಡು, ಇದಕ್ಕೆ ಅಗತ್ಯವಾದ ಅನೇಕ ಬಗೆಯ ಅನ್ವಯಿಕ ತಂತ್ರಾಂಶಗಳನ್ನು

ಅಭಿವೃದ್ಧಿ ಪಡಿಸಬಲ್ಲ ತಂತ್ರಜ್ಞರಾಗಿ ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳಬೇಕೆಂಬ ಅಪೇಕ್ಷೆ ವಿದ್ಯಾರ್ಥಿಗಳಲ್ಲಿ ಸಹಜವಾಗಿಯೇ ಮೂಡುತ್ತಿದೆ.

'ನುಡಿ' ಕನ್ನಡ ಲಿಪಿ ತಂತ್ರಾಂಶದಲ್ಲಿದೆ. ಹಲವಾರು ತಂತ್ರಾಂಶಗಳ ಅಭಿವೃದ್ಧಿಯಲ್ಲಿ ತೊಡಗಿಕೊಂಡಾಗ ಕನ್ನಡ ಭಾಷಾ ಸಂಬಂಧಿ ವಿಚಾರಗಳನ್ನು ವಿಶೇಷವಾಗಿ ಗಮನಿಸಿ, ಸಾಕಷ್ಟು ಚಿಂತನ, ಮಂಥನಗಳನ್ನು ನಡೆಸಿ ಸುಮಾರು ೧೫ ಸಾವಿರಕ್ಕೂ ಮೀರಿದ ಗಣಕ ಪದಗಳು, ಪದಗುಚ್ಛಗಳು ಹಾಗೂ ವಾಕ್ಯಗಳನ್ನು ಕನ್ನಡದಲ್ಲಿ ಅನುವಾದಿಸಿ ಸಮರ್ಥವಾಗಿ ಪ್ರಸ್ತುತ ಪಡಿಸಿರುವ ಅನೇಕ ಪುಸ್ತಕಗಳು ಪ್ರಕಟಗೊಂಡಿವೆ.

ಉದಾ :- ಮಾನವ ಮಿತ್ರ ಗಣಕ (ಕನ್ನಡ ಸಾಹಿತ್ಯ ಪರಿಷತ್ತು)

ಹತ್ತು ವರ್ಷಗಳ ಹಿಂದೆ ಕನ್ನಡ ಭಾಷೆಯಲ್ಲಿಯೇ ಗಣಕಯಂತ್ರ ಉಪಯೋಗಿಸಬೇಕು ಎಂಬ ಹಲವು ಸಮಾನ ಮನಸ್ಕರ ಆಲೋಚನೆಯ ರೂಪವೇ ಈಗ ಎಲ್ಲೆಡೆ ಕಂಡು ಬರುವ ಕನ್ನಡದ ನುಡಿ ತಂತ್ರಾಂಶ. ಶಾಸನ, ತಾಮ್ರಪತ್ರ, ಓಲೆಗರಿ ಹೀಗೆ ಕನ್ನಡದ ದಾಖಲೆಗಳನ್ನು ಉಳಿಸುವ ಪ್ರಯತ್ನದ ವರ್ತಮಾನದ ರೂಪ ಕನ್ನಡ ತಂತ್ರಾಂಶ. ಕನ್ನಡದಲ್ಲಿ ತಂತ್ರಾಂಶ ರೂಪಿಸಲು ಮೊದಲಡಿಯಿಟ್ಟದ್ದು ಅಮೇರಿಕಾದಲ್ಲಿ ವಾಸ ಮಾಡುತ್ತಿದ್ದ ಕೆಲ ಕನ್ನಡಾಭಿಮಾನಿಗಳು. ಎಲ್ಲ ಭಾಷೆಯಲ್ಲಿ ಗಣಕಯಂತ್ರದ ತಂತ್ರಾಂಶಗಳನ್ನು ಬಳಸಿಕೊಂಡು ಹೊಸ ಪ್ರಯೋಗ ನಡೆಸುವಾಗ ತಮ್ಮ ಭಾಷೆಯಲ್ಲಿಯೇ ತಂತ್ರಾಂಶ ಕಂಡು ಹಿಡಿಯಬೇಕು ಎಂಬ ಆಲೋಚನೆಯಲ್ಲಿ ಹುಟ್ಟಿಕೊಂಡದ್ದು ಹಲವು ಕನ್ನಡದ ತಂತ್ರಾಂಶಗಳು.

ಬೇರೆ-ಬೇರೆ ಕಂಪೆನಿಗಳು ಕನ್ನಡದಲ್ಲಿ ತಂತ್ರಾಂಶಗಳನ್ನು ರೂಪಿಸಿದವು. ಆದರೆ ಎಲ್ಲರೂ ಸಾಮೂಹಿಕವಾಗಿ ಬಳಸುವ ಕನ್ನಡ ತಂತ್ರಾಂಶ ಇರಲಿಲ್ಲ. ಈ ಹಿನ್ನೆಲೆಯಲ್ಲಿ ನುಡಿ ತಂತ್ರಾಂಶ ರೂಪಿಸುವ ಆಲೋಚನೆ ಹುಟ್ಟಿಕೊಂಡಿತು. ರಾಜ್ಯ ಸರಕಾರ ಈ ದಿಸೆಯಲ್ಲಿ ಆಸಕ್ತಿ ತಳೆದಿದ್ದರಿಂದ ನುಡಿತಂತ್ರಾಂಶ ಸರಕಾರದ ಅಧಿಕೃತತೆ ಪಡೆದುಕೊಂಡಿತು. ಎಲ್ಲ ಸಾಫ್ಟ್‌ವೇರ್‌ಗಳಲ್ಲಿ ಉಪಯೋಗಿಸಬಹುದಾದ ನುಡಿ ತಂತ್ರಾಂಶವನ್ನು ಈಗ ಹೆಚ್ಚಿನ ಮಂದಿ ಉಪಯೋಗಿಸುತ್ತಿದ್ದಾರೆ.

"ಜಾಗತೀಕರಣದ ಹಿನ್ನೆಲೆಯಲ್ಲಿ ಗಣಕಯಂತ್ರದ ಉಪಯೋಗ ಹಿಂದಿಗಿಂತಲೂ ಈಗ ಅಧಿಕವಾಗಿದೆ ಎನ್ನುತ್ತಾರೆ ಪಂಡಿತಾರಾಧ್ಯರು." ಕನ್ನಡದ ಶಿಷ್ಟತೆಯ ನುಡಿ ತಂತ್ರಾಂಶ ರೂಪಗೊಂಡ ಅನಂತರದಲ್ಲಿ ಗಣಕ ಯಂತ್ರದಲ್ಲಿ ಕನ್ನಡ ಬಳಸುವವರ ಸಂಖ್ಯೆ ಹಿಂದಿಗಿಂತಲೂ ಅಧಿಕಗೊಂಡಿದೆ. ಅದಕ್ಕೆ ಗಣಕಯಂತ್ರ ಸಾಮಾನ್ಯರಿಗೂ ಅನಿವಾರ್ಯವಾಗಿ ಪರಿಣಮಿಸಿರುವುದು. ಮಾತೃಭಾಷೆಯಲ್ಲಿ ಗಣಕಯಂತ್ರ ಬಳಸಬಹುದು ಎಂಬ ಅವಕಾಶ ದೊರೆತಾಗ ಸಹಜವಾಗಿ ಎಲ್ಲರೂ ಆ ಕಡೆಗೆ ಹೆಚ್ಚಿನ ಗಮನ ಹರಿಸುತ್ತಾರೆ. ನುಡಿ ತಂತ್ರಾಂಶ ಬಳಸಲು ಅತ್ಯಂತ ಸುಲಭ ಮತ್ತು ಸರಳವಾಗಿರುವುದರಿಂದ ವ್ಯಾಪಕವಾಗಿ ಬಳಕೆಯಾಗುತ್ತದೆ.

ಕನ್ನಡದ ಅತ್ಯಂತ ಪ್ರಮುಖ ದಾಖಲೆಗಳನ್ನು ಸಂರಕ್ಷಣೆ ಮಾಡಲು ಈಗ ಯಾವುದೇ ಚಿಂತೆ ಇಲ್ಲ. ಮುಂದಿನ ಜನಾಂಗಕ್ಕೆ ಅನುಕೂಲವಾಗುವಂತೆ ಸಂರಕ್ಷಣೆ ಮಾಡುವ ಎಲ್ಲ ಅವಕಾಶಗಳಿವೆ ಎಂದು ಅವರು ಹೇಳುತ್ತಾರೆ.

ಇಲ್ಲಿ ಬೇರೆ ಭಾಷೆಯ ಪ್ರಭಾವವಿಲ್ಲ. ಕನ್ನಡ ತಂತ್ರಾಂಶವನ್ನು ಕನ್ನಡಿಗರು ಕಡೆಗಣನೆ ಮಾಡಲು ಸಾಧ್ಯವೇ ಇಲ್ಲ. ಏಕೆಂದರೆ, ಸುಲಭವಾಗಿ ಮಾತೃಭಾಷೆಯಲ್ಲಿ ಅರ್ಥವಾಗುವ ಗಣಕಯಂತ್ರದ ಕೆಲಸವನ್ನು ಮಾಡಲು ನಮ್ಮವರು ಇಷ್ಟಪಡುತ್ತಾರೆ. ಆಡಳಿತ ವ್ಯವಹಾರ ಈಗ ಸಂಪೂರ್ಣ ಗಣಕಯಂತ್ರದಲ್ಲಿ ನಡೆಯುವುದರಿಂದ ಕನ್ನಡ ಬಳಸುವುದು ಬಹುತೇಕರಿಗೆ ಅನಿವಾರ್ಯವಾಗಿದೆ. ಹೀಗಾಗಿ ಕನ್ನಡ ತಂತ್ರಾಂಶವು ಮುಂದೆ ವ್ಯಾಪಕ ಬಳಕೆಯಾಗುವುದರಲ್ಲಿ ಅನುಮಾನವಿಲ್ಲ.

ಕನ್ನಡ ತಂತ್ರಾಂಶ ಬಳಕೆಯಾಗುತ್ತಿರುವ ಹಿನ್ನೆಲೆಯಲ್ಲಿ ನಾವು ಜಾಗತೀಕವಾಗಿ ಗುರುತಿಸಿಕೊಂಡಿದ್ದೇವೆ. ಇದು ಕನ್ನಡದ ಭಾಷೆಯ ಸೊಗಡು ಪರಿಚಯ ಮಾಡಿಕೊಡಲು ಸಹಕಾರಿಯಾಗಿದೆ.

---

೧. ವಿಜ್ಞಾನ ಮತ್ತು ಕನ್ನಡ (ಎ. ಆರ್. ಸಿ. ರಾವ್) ಪು. ಸಂ. ೯

ಭಾಷೆಯ ಅಭಿವೃದ್ಧಿಗೆ ನುಡಿ ತಂತ್ರಾಂಶ ತನ್ನದೇ ಆದ ಕೊಡುಗೆಯನ್ನು ನೀಡುತ್ತಿದೆ. ಮುಂದಿನ ದಿನಗಳಲ್ಲಿ ಗಣಕಯಂತ್ರದ ಬಳಕೆ ಹೆಚ್ಚಿದಂತೆ ಕನ್ನಡದ ತಂತ್ರಾಂಶ ಭವಿಷ್ಯ ಹೆಚ್ಚುತ್ತದೆ. ಅದಕ್ಕೆ ಅಗತ್ಯವಾದ ಎಲ್ಲ ಅನುಕೂಲಗಳು ಈಗಾಗಲೇ ಕಲ್ಪಿಸಲಾಗಿದೆ ಎಂದು ಪಂಡಿತಾರಾಧ್ಯರು ಹೇಳುತ್ತಾರೆ. ಒಟ್ಟಿನಲ್ಲಿ ಕನ್ನಡ ಭಾಷೆಯ ಅಭಿವೃದ್ಧಿ ಗಣಕಯಂತ್ರದ ಮೂಲಕ ಸಾಗುತ್ತಿದೆ. ಬರಗೂರು ರಾಮಚಂದ್ರಪ್ಪನವರು ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅಧ್ಯಕ್ಷರಾಗಿದ್ದಾಗ ಗಣಕ ತಂತ್ರಾಂಶಕ್ಕೆ ಅನುಗುಣವಾಗಿ ಕನ್ನಡದಲ್ಲಿ ಒಂದು ಪದಕೋಶವನ್ನು ಪ್ರಕಟಿಸಲಾಗಿದೆ, ಮಾತ್ರವಲ್ಲ ಆ ಬಗ್ಗೆ ತಂತ್ರಾಂಶವನ್ನು ರೂಪಿಸಿ ಸರಕಾರದ ಅನುಮತಿಯನ್ನು ಪಡೆದುಕೊಳ್ಳಲಾಗಿದೆ.

## ಏ) ರಾಜಕೀಯ

ಕನ್ನಡವನ್ನು ಕಡೆಗಣಿಸುವಲ್ಲಿ, ನಿರಭಿಮಾನದಿಂದ, ಆತ್ಮವಂಚನೆಯಿಂದ ನಡೆದುಕೊಳ್ಳುತ್ತಿರುವ ರಾಜಕಾರಣಿಗಳು ಯಾವುದೋ ಒಂದು ಪಕ್ಷಕ್ಕೆ ಮಾತ್ರ ಸೇರಿದವರಲ್ಲ. ರಾಜಕೀಯ ಕೆಸರೆರಚಾಟ ನಡೆಯುತ್ತಿರುವ ಈ ದಿನಗಳಲ್ಲಿ ಈ ರಾಜಕಾರಣಿಗಳು, ಸುದ್ದಿಗಾರರು ಹಾಗೂ ಸುದ್ದಿ ಮೊಳಗಿದುದವರ ಮುಂದೆ ಹೇಳಬೇಕೆನ್ನುವುದನ್ನು ಕನ್ನಡದಲ್ಲಿ ಸರಾಗವಾಗಿ, ಸಲೀಸಾಗಿ ಅಪಾರ್ಥಕ್ಕೆ ಆಸ್ಪದವಿಲ್ಲದಂತೆ ಸರಿಯಾಗಿ ಹೇಳುವುದನ್ನು ಬಿಟ್ಟು ಬಹಳಷ್ಟು ಸಂದರ್ಭಗಳಲ್ಲಿ ತಡವರಿಸುತ್ತಾ ಬಂದು ಅಪಾರ್ಥಕ್ಕೆ ಆಸ್ಪದ ಕೊಡುವ ರೀತಿಯಲ್ಲಿ ಅನಗತ್ಯವಾಗಿ ಇಂಗ್ಲಿಷ್‌ನಲ್ಲಿ ಹೇಳಲು ಹೋಗಿ ತಮ್ಮ ಮರ್ಯಾದೆಯನ್ನು ಮಾತ್ರವಲ್ಲ, ಕನ್ನಡದ ಮಹತ್ತನ್ನು, ಘನತೆಯನ್ನೂ ಕಡಿಮೆ ಮಾಡುತ್ತಿರುವುದು ಕನ್ನಡಿಗರ ದುರಂತವೇ ಸರಿ.

ಆಡಳಿತದ ಚುಕ್ಕಾಣಿ ಹಿಡಿದಿದ್ದ ಇಂತಹವರು ಕನ್ನಡವನ್ನು ಕಡೆಗಣಿಸಿದ್ದರಿಂದಲೇ ಇವತ್ತಿಗೂ ಕರ್ನಾಟಕದಲ್ಲಿ ಕನ್ನಡದ ಮಕ್ಕಳಿಗೆ ಕನ್ನಡದಲ್ಲೇ ಶಿಕ್ಷಣ ಕೊಡಿಸಬೇಕು ಎಂಬ ಹೋರಾಟಕ್ಕೆ ಹಿನ್ನೆಡೆಯಾಗಿದೆ. ಕನ್ನಡವನ್ನು ಕಡೆಗಣಿಸಿ ಇಂಗ್ಲಿಷ್‌ಗೆ ಮಣೆಹಾಕುವ ರಾಜಕಾರಣಿಗಳ ಇಂತಹ ಹಾಸ್ಯ ಮನೋಭಾವ ನಾಡು-ನುಡಿ ಅಷ್ಟೇ ಅಲ್ಲ, ಒಟ್ಟಾರೆ ಕನ್ನಡ ಜನತೆಯ ಏಳಿಗೆಗೇ ಮಾರಕವಾಗಿಬಿಟ್ಟಿದೆ.

ನಮ್ಮ ಬದುಕನ್ನು ಭವಿಷ್ಯತ್ತಿಗೆ ರೂಪಿಸುವ ಹಂತದಲ್ಲಿ ವರ್ತಮಾನವನ್ನು ಕಟ್ಟುವ ಕೆಲಸದಲ್ಲಿ ದೂರದರ್ಶಿತ್ವವನ್ನು ಕಳೆದುಕೊಳ್ಳುತ್ತಿದ್ದೇವೆ. ಮುಂದಿನ ಕನ್ನಡ ಬದುಕು ಹೇಗಿರಬೇಕೆಂಬ ಆರೋಗ್ಯ ಪೂರ್ಣ ದರ್ಶನ ಶೂನ್ಯರಾಗಿರುವ ಕಾರಣ ವರ್ತಮಾನದಲ್ಲಿ ಟೊಳ್ಳುತನ ನಿರ್ಮಾಣವಾಗುತ್ತಿದೆ. ಈ ಸ್ಥಿತಿಗೆ ನಾವು ಸಾಮಾನ್ಯವಾಗಿ ನಮ್ಮ ರಾಜಕಾರಣಿಗಳಿಗಿರುವ ಕನ್ನಡತನ-ಬದುಕಿನ ಬಗೆಗಿರುವ ಇಚ್ಛಾಶಕ್ತಿಯ ಕೊರತೆ ಕಾರಣ. ನಮ್ಮ ನೆರೆಯ ರಾಜ್ಯಗಳ ರಾಜಕಾರಣಿಗಳಿಗಿರುವ ತಂತಮ್ಮ ನಾಡು-ನುಡಿಗಳ ಬಗೆಗೆ ಇರುವ ಪ್ರೀತಿ-ಪ್ರೇಮಗಳ ಕ್ರಿಯಾ ಸ್ವರೂಪದ ನಡೆಗಳು ಅವರ ರಾಜ್ಯದ ಸ್ವಾಭಿಮಾನವನ್ನು ಎತ್ತಿಹಿಡಿದಿವೆ.

ಅವರ ಸ್ವಭಾಷಾಭಿಮಾನ ಎಂದೂ ಕುರುಡು ಪ್ರೇಮವಾಗಿ ಕಂಡಿಲ್ಲ. ಅದು ಅವರ ಮುಂದಿನ ಜನಾಂಗವನ್ನು ಅಸ್ತಿತ್ವ ಕಳೆದುಕೊಳ್ಳದ, ಅಂತರಂಗದಲ್ಲಿ ಗಟ್ಟಿಯಾದ ಸಾಂಸ್ಕೃತಿಕ ಕನ್ನಡತನವನ್ನು ರೂಪಿಸಿಕೊಳ್ಳುವ ಸಮುದಾಯ ಶಕ್ತಿಯನ್ನಾಗಿ ಬೆಳೆಸುವ ಕ್ರಿಯೆಯಾಗಿದೆ. ತಮಿಳು ತನವೆಂಬುದು, ಬೆಂಗಾಳಿತನವೆಂಬುದು ಸಾಹಿತ್ಯ ರೂಪ ಮಾತ್ರವಾಗಿರದೆ, ಅದು ಜೀವನ ರುಚಿಯಾಗಿ ಅರಳುವ ಪ್ರಕ್ರಿಯೆಯನ್ನು ಅಲ್ಲಿ ಕಾಣಬಹುದು. ಜನಾಂಗವೊಂದನ್ನು ಭಾಷಿಕ ಸಮುದಾಯವನ್ನಾಗಿ ಬೆಳೆಸುವ ಪ್ರಕ್ರಿಯೆಯಾಗಲೀ, ಇಚ್ಛಾಶಕ್ತಿಯಾಗಲಿ ನಮ್ಮ ರಾಜಕಾರಣಿಗಳಿಗಿಲ್ಲ.

ನಮ್ಮ ರಾಜಕಾರಣಿಗಳು ಪಂಪ, ರನ್ನ, ಪೊನ್ನರ ವಂಶಗಳಿಂದ ನೇರವಾಗಿ ಇಳಿದು ಬಂದವರೇನಲ್ಲ. ಅವರು ನಮ್ಮ ಜನತೆಯಿಂದ ನೇರವಾಗಿ ಆರಿಸಿ ಹೋದವರು. ನಮ್ಮ ಜನರ ನೇರ ಪ್ರತಿನಿಧಿಗಳು. ನಮ್ಮ ಜನರು ಹೇಗಿದ್ದಾರೋ ಹೇಗಿರುತ್ತಾರೋ ಅವರೂ ಹಾಗೇ ಇರುತ್ತಾರೆ. ನಮ್ಮ ಜನರ ಬಗ್ಗೆ ಯೋಚನೆ ಮಾಡಿದರೆ ಕನ್ನಡತನದ ಬಗ್ಗೆ ಅವರಿಗಿರುವ ತಿಳಿವು ಮತ್ತು ಕಾಳಜಿಯ ಬಗ್ಗೆ ನಿರಾಸೆಯಾಗುತ್ತದೆ. ನೆರೆಯ ತಮಿಳುನಾಡು ಮತ್ತು ಆಂಧ್ರ - ಮಹಾರಾಷ್ಟ್ರದ ಜನರಿಗೆ ಹೋಲಿಸಿದರೆ ಅಕ್ಷರಸ್ಥರೂ, ಸ್ಥಿತಿವಂತರೂ

---

೧. ಕನ್ನಡ ಭಾಷಾ ಸ್ವರೂಪ (ಡಾ. ಕೆ. ಕೆಂಪೇಗೌಡ) ಪು. ಸಂ. ೫೬

೨. ಕರ್ನಾಟಕ ಸಂಪದ (ಡಾ. ಟಿ. ವಿ. ವೆಂಕಟಾಚಲಶಾಸ್ತ್ರಿ) ಪು. ಸಂ. ೪೮

ಆಗಿರುವ ಕನ್ನಡಿಗರು ಸಾಂಸ್ಕೃತಿಕವಾಗಿ ಅವರಷ್ಟು ಅಭಿಮಾನಿ ಗಳಾಗಿಲ್ಲದಿರುವುದು ಬೇಸರದ ಸಂಗತಿ. ಇವರಿಗೆ ಸಾಂಸ್ಕೃತಿಕ ಪ್ರಜ್ಞೆ ಇದೆ. ಆದರೆ ಅದಕ್ಕೊಂದು ಬದ್ಧತೆಯಿಲ್ಲ. ಆ ಬದ್ಧತೆಯ ಕೊರತೆಯನ್ನು ಅವರು 'ವಿಶಾಲ ಭಾವನೆ' ಎಂಬ ಭ್ರಮಾತ್ಮಕ ಮೌಲ್ಯದಲ್ಲಿ ಮುಚ್ಚಿಕೊಳ್ಳಲು ಯತ್ನಿಸುತ್ತಿದ್ದಾರೆ.

ನಮ್ಮ ರಾಜಕಾರಣಿಗಳು ಕನ್ನಡದಿಂದಲೇ ಕನ್ನಡಿಗರ ಉದ್ಧಾರ, ಕನ್ನಡವೇ ಕನ್ನಡಿಗರ ಸರ್ವಸ್ವ ಎಂಬುದನ್ನು ಅರಿತು ನಡೆದುಕೊಂಡಾರೆಯೇ? ಅವರು ಹಾಗೆ ನಡೆದುಕೊಳ್ಳುತ್ತಾರೋ ಬಿಡುತ್ತಾರೋ, ನಾವು ಕನ್ನಡಿಗರಾದರೂ ಇದನ್ನು ಅರಿತು ನಡೆದುಕೊಂಡರೆ ಇಂಗ್ಲಿಷ್ ಹುಚ್ಚಿನಿಂದ ಹೊರಬಂದರೆ ಕನ್ನಡದ ಉದ್ಧಾರ ಸಾಧ್ಯ, ನಮ್ಮ ಉದ್ಧಾರವೂ ಸಾಧ್ಯ.

ಕರ್ನಾಟಕ ಶಾಸನ ಸಭೆ ಹಾಗೂ ವಿಧಾನ ಪರಿಷತ್ತಿನಲ್ಲಿ ಕನ್ನಡ ಭಾಷೆಯ ಬಗ್ಗೆ ತೀರ್ವ ಕಳಕಳಿಯಿರುವ ಶಾಸಕರ ಸಂಖ್ಯೆ ಹೆಮ್ಮೆ ಪಡುವಂತೆ ಇದೆ. ಆದರೆ ಕರ್ನಾಟಕ ವಿಧಾನ ಮಂಡಲದಲ್ಲಿ ಕೋಲಾರ ಭಾಗದ ತಮಿಳು ಮಾತನಾಡುವ ಶಾಸಕರು ಹಾಗೂ ಬೆಳಗಾವಿ ಗಡಿ ಪ್ರದೇಶದ ಮಹಾರಾಷ್ಟ್ರ ಏಕೀಕರಣ ಸಮಿತಿ ಸದಸ್ಯರು ಕನ್ನಡ ಭಾಷೆಯ ಹೊರತಾಗಿ ಕನ್ನಡದ ಬಗ್ಗೆ ಕೀಳರಿಮೆ ಹೊಂದಿರುವುದು ದುರ್ದೈವದ ಸಂಗತಿ. ಶಾಸನ ಸಭೆಯಲ್ಲಿ ಕನ್ನಡ ಪರ ಹೋರಾಟ ಮಾಡುವ ಸದಸ್ಯರುಗಳು ಎಲ್ಲಾ ಪಕ್ಷದಲ್ಲೂ ಇದ್ದಾರೆ. ಆದರೆ ಕನ್ನಡ ಚಳುವಳಿಯ ಮೂಲಕ ಆಯ್ಕೆಯಾದ ಸದಸ್ಯರ ಸಂಖ್ಯೆ ಶೂನ್ಯ ಮಟ್ಟಕ್ಕೆ ಇಳಿಯುತ್ತಿರುವುದು ದುರಂತವೇ ಸರಿ. ಹಾಗೆಂದು ಕನ್ನಡ ನಾಡಿನ ಕರ್ನಾಟಕ ವಿಧಾನ ಸಭೆಯಲ್ಲಿ ಕನ್ನಡ ಭಾಷೆಯ ರಣದುಂದುಭಿಗೆ ವಿವಿಧ ಪಕ್ಷಗಳಿಂದ ಗೆದ್ದಿರುವ ಕನ್ನಡ ಪರ ಹೋರಾಟ ಮಾಡುವ ಶಾಸಕರಿಗೇನು ಕೊರತೆಯಿಲ್ಲ. ಕರ್ನಾಟಕದಲ್ಲಿ ಆಡಳಿತ ಭಾಷೆಯಾಗಿ ಪೂರ್ಣ ಪ್ರಮಾಣದಲ್ಲಿ ಕನ್ನಡ ಜಾರಿಗೆ ಬರಲು ರಾಜಕಾರಣಿಗಳು ಜನಸಾಮಾನ್ಯರು ಆಶೋತ್ತರಗಳಿಗೆ ಪ್ರತಿಬಿಂಬಿಸಬೇಕಾದದ್ದು ಇಂದಿನ ಅಗತ್ಯ.

## ಐ) ವಿಜ್ಞಾನ

'ಕನ್ನಡದಲ್ಲಿ ಎಲ್ಲವನ್ನೂ ಹೇಳುವುದು ಸಾಧ್ಯವಾಗಬೇಕು' ತಿರುಮಲೇಶ್. ಆದರೆ ಯಾರೂ ಹೇಳಿಲ್ಲ. ಹೇಳುವುದಕ್ಕೆ ಪ್ರಯತ್ನವನ್ನೂ ಮಾಡಿಲ್ಲ. ವಿಜ್ಞಾನ ಸಾಹಿತ್ಯವನ್ನು ಅಲಕ್ಷ್ಯ ಮಾಡಿದ್ದಾರೆ. ಆಗಾಗ್ಗೆ 'ಅಭಿಮಾನಿಗಳು' ಕನ್ನಡದಲ್ಲಿ ವಿಜ್ಞಾನವನ್ನು ಹೇಳಲೇಬೇಕು ಎಂದು 'ಕೊರಳು ಸೇವೆ' ಮಾಡಿದ್ದಾರೆ. ಬೇರೆ ಭಾಷೆಗಳಲ್ಲಿ ಪದವಿ ತರಗತಿಗಳವರೆಗೆ ಶಿಕ್ಷಣ ಕೊಡುವುದು ಸಾಧ್ಯವಾದರೆ ಕನ್ನಡದಲ್ಲಿ ಏಕೆ ಸಾಧ್ಯವಿಲ್ಲ? ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ ಎಷ್ಟಿದೆ? ಇಂಗ್ಲಿಷ್ ಭಾಷೆಯನ್ನು ಕೂಡ ೧೭ನೇ ಶತಮಾನದವರೆಗೆ ಇಂಗ್ಲೆಂಡ್‌ನಲ್ಲಿಯೇ ಯಾರೂ ಕೇಳುವವರಿರಲಿಲ್ಲ. ನಂತರವೂ ಆ ಭಾಷೆ ಶಾಲಾ-ಕಾಲೇಜುಗಳಲ್ಲಿ ಮಾಧ್ಯಮವಾಗಬೇಕಾದರೆ ಮತ್ತೆರಡು ಶತಮಾನಗಳನ್ನು ಕಾಯಬೇಕಾಯಿತು. 'ಗಿಮ್ಮಿ ಲಿಟಲ್ ಸೆಂಚುರೀಸ್' ವಿಜ್ಞಾನದ ಬೆಳವಣಿಗೆಗೆ ಕೆಲವು ಶತಮಾನಗಳು ಬೇಕು ಎಂದು ಬೇಕನ್ ೧೬ನೇ ಶತಮಾನದಲ್ಲಿಯೇ ಹೇಳಿದ್ದ.

ಬರಗೂರು ರಾಮಚಂದ್ರಪ್ಪ: "ಕನ್ನಡದ ಅಭಿಮಾನವು ತನ್ನ ಸ್ವರೂಪವನ್ನು ಸಮಕಾಲೀನ ಅಗತ್ಯಗಳಿಗೆ ಅನುಗುಣವಾಗಿ ಪರಿವರ್ತಿಸಿಕೊಳ್ಳಬೇಕಾಗಿದೆ. ಭಾಷೆಯ ಮೂಲಕ ಬಂದ ಜ್ಞಾನವನ್ನು ನಿರಾಕರಿಸಲಿಲ್ಲ. ಇದು ಕನ್ನಡದ ವಿವೇಕ. ಕನ್ನಡದಲ್ಲಿ ತಿಳಿವಳಿಕೆ ನೀಡುವ ಕೆಲಸ ನಿರಂತರವಾಗಿ ಆಗಬೇಕು." ಈ ಕೆಲಸ ಆಗಿಲ್ಲ. ಈಗ ಆರಂಭ ಮಾಡಬೇಕು. ವಿಶ್ವವಿದ್ಯಾನಿಲಯಗಳು ಈ ಕೆಲಸ ಮಾಡಿಲ್ಲ. ಅಭಿವೃದ್ಧಿ ಪ್ರಾಧಿಕಾರ, ವಿಜ್ಞಾನ ಅಕಾಡೆಮಿ ಸ್ಥಾಪಿಸಲು ಮೀನಾಮೇಷ ಎಣಿಸುತ್ತಿದೆ. ಅನುವಾದ ಅಕಾಡೆಮಿ ಈ ಬಗ್ಗೆ ಯೋಚನೆಯನ್ನೇ ಮಾಡಿಲ್ಲ. ವಿಜ್ಞಾನ ಕನ್ನಡವನ್ನು ಬೆಳೆಸುತ್ತೇವೆ ಎಂದು ಧೃಡಸಂಕಲ್ಪ ಮಾಡಬೇಕು. ವಿಜ್ಞಾನವನ್ನು ಕನ್ನಡದಲ್ಲಿ ಹೇಳಬೇಕು.

## ಒ) ಸಮಾಜ

ಈ ವರ್ಗಕ್ಕೆ ಸಂಬಂಧಿಸಿದ ಶಬ್ದಗಳು ಬೇರೆ-ಬೇರೆ ಕಾಲಗಳಲ್ಲಿ ಜನರು ವಿದೇಶದಿಂದ ಭಾರತಕ್ಕೆ ಬಂದು ನೆಲಸಿದ ಪರಿಣಾಮವಾಗಿ ಅವರ ಸಮಾಜ, ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿದ ಶಬ್ದಗಳು ಕನ್ನಡ ನುಡಿಯಲ್ಲಿ ಕನ್ನಡ ನಾಡಿನ ಜನರ ಜೀವನದಲ್ಲಿ ಬೆರೆತು ಹೋಗಿವೆ.

ಸಿಹಿ-ತಿಂಡಿಗಳಾದ ಜಿಲೇಬಿ, ಜಹಾಂಗೀರು, ಗುಲ್ಕನ್ (ಗುಲ್ಕಂದ್), ಪೇಡಾ, ಬಾದುಷಾ (ಬಾಲುಷಾ), ಜಾಮೂನು, ಬೇಕರಿ ತಿನಿಸುಗಳಾದ- ಬರ್ಫಿ, ಬ್ರೆಡ್ಡು, ಜಾಮ್, ಫಫ್ಸು, ಬಿಸ್ಕತ್ತು, ರಸ್ಕು, ಖಾರತಿಂಡಿಗಳಾದ - ಬಿರಿಯಾನಿ, ದೋಸೆ, ಚೆಟ್ನಿ, ಆಭರಣಗಳಿಗೆ ಸಂಬಂಧಿಸಿದ- ಲೂಲಾಕು, ಚೈನು, ನತ್ತು, ನೆಕ್ಲೇಸ್, ತುರಾಯಿ ಮುಂತಾದ ಶಬ್ದಗಳು, ರುಮಾಲು, ಪಗಡಿ, ಪೈಜಾಮ, ಜುಬ್ಬಾ, ಪ್ಯಾಂಟು, ಕೋಟು, ಹ್ಯಾಟು ಮುಂತಾದ ಉಡುಪಿಗೆ ಸಂಬಂಧಿಸಿದ ಶಬ್ದಗಳು, ಸಾರಾಯಿ, ಬ್ರಾಂದಿ, ವಿಸ್ಕಿ, ಬಿಯರು ಮುಂತಾದ ಮಾದಕ ಪಾನೀಯಗಳಿಗೆ ಸಂಬಂಧಿಸಿದ ಶಬ್ದಗಳು, ಹೀಗೆ ಪಾನೀಯ (ಟೀ, ಕಾಫಿ) ಮುಂತಾದವುಗಳಿಗೆ ಸಂಬಂಧಿಸಿದ ಶಬ್ದಗಳು ಕನ್ನಡಕ್ಕೆ ಬಂದು ಕನ್ನಡ ಶಬ್ದಭಂಡಾರವನ್ನು ಹಿಗ್ಗಿಸಿವೆ.

ಕರ್ಣಾಟಕದ ಸಾಮಾಜಿಕ ಪರಿಸ್ಥಿತಿಯು ಸುಮಾರು ಎರಡು ಸಾವಿರ ವರ್ಷದ ಶಾಸನಗಳು, ಕಾವ್ಯಗಳು, ನಾಣ್ಯಗಳು ಮತ್ತು ಜಾನಪದ ಕಥಾಸಮೂಹಗಳು ಇವುಗಳಿಂದ ವಿಶದೀಕೃತವಾಗಿದೆ. ಭಾರತೀಯ ಸಮಾಜ ಸಂಸ್ಥೆಗಳಂತೆಯೇ ಕರ್ಣಾಟಕದ ಸಮಾಜ ವ್ಯವಸ್ಥೆ ಸಾಮಾನ್ಯವಾಗಿ ತೀವ್ರಗತಿಯ ಅಥವಾ ಕ್ರಾಂತಿಕಾರಕ ಬದಲಾವಣೆಗಳಿಗೆ ಒಳಗಾಗುವುದಿಲ್ಲ. ಅದು ನಿಧಾನವಾಗಿ ವಿಕಾಸ ಗೊಳ್ಳುವುದು. ಭಿನ್ನಭಿನ್ನ ದೇಶಿಯ ಪರಿಸರಗಳಿಂದ ಮತ್ತು ವಿವಿಧಕಾಲಿಕ ರಾಜಕೀಯ ವಾತಾವರಣದಿಂದ ಅಲ್ಪಸ್ವಲ್ಪ ವ್ಯತ್ಯಾಸವಾಗಬಹುದೇ ವಿನಾ ಮೂಲಭೂತವಾದ ಮೌಲ್ಯಗಳು ಬಹುಮಟ್ಟಿಗೆ ಪರಿವರ್ತನವಾಗುವುದಿಲ್ಲ. ಅವುಗಳ ವಿವಿಧ ರೂಪುರೇಖೆಗಳನ್ನು ಸ್ಥೂಲವಾಗಿ ಪರಶೀಲಿಸಬಹುದು. ಅದರಿಂದ ಕರ್ಣಾಟಕ ಸಂಸ್ಕೃತಿಯ ಪ್ರತ್ಯಕ್ಷ ಪರಿಚಯವಾಗುವುದು.

"ಕನ್ನಡನಾಡು ಕಾವೇರಿಯಿಂದ ಗೋದಾವರಿಯವರೆಗೆ ಪ್ರಸರಿಸಿದ ನಾಡು ಆ ಕನ್ನಡದೊಳ್ ಭವಿಸಿದ ಜನಪದಂ ವಸುಧಾವಳಯ ವಿಲೀನ ವಿಶದ ವಿಷಯ" ವಿಶೇಷ'ವಾಗಿತ್ತು. ಅದರ ವೈಭವವನ್ನು ಬಾಯಿತುಂಬ ಹೊಗಳಿ ಅದರ ಪ್ರತ್ಯಕ್ಷ ಪರಿಚಯವನ್ನು ಮಾಡದ ಕವಿಗಳಿಲ್ಲ, ಕನ್ನಡದ ಕವಿಕುಲಾಗ್ರಣಿಯಾದ ಪಂಪನು ತನ್ನ 'ವಿಕ್ರಮಾರ್ಜುನವಿಜಯ'ದಲ್ಲಿ ಕುರುಜಾಂಗಣವನ್ನು ಮುಂದಿನ ಪದ್ಯಗಳಲ್ಲಿ ವಿಶದೀಕರಿಸಿದ್ದಾನೆ.

ಜಲಜಲನೊಜ್ಜುಕಿರ್ಪ ಪರಿಕಾಲ್ ಪರಿಕಾಲೊಳಳುರ್ಕೆಗೊಂಡ ನೈ
ದಿಲ ಪೊಸಪೂ, ಪೂದಳ್ಟಿ ಪೊಸನೈದಿಲಕಂಪನೆ ಬೀಜೆ ಕಾಯ್ತಕೆಂ
ಗೊಲೆಯೊಳೆ ಜೋಲ್ವ ಶಾಳಿ ನವಶಾಳಿಗೆ ಪಾಯ್ವ ಶುಕಾಳಿ, ತೋಜೆಕೆ
ಯ್ದೊಲಗಳಿನೊಪ್ಪಿತೋಜೆ ಸಿರಿ ನೋಡುಗುಮಾ ವಿಷಯಾಂತರಾಳದೊಳ್
ಆವಲರುಂ ಪಣ್ಣಂ ಬೀ
ತೋವವು ಗಡ ಬೀಯವಲ್ಲಿ ಮಲ್ಲಿಗೆಗಳುಮಿ
ಮ್ಮಾ ವುಗಳುಮೆಂದೊಡಿಂ ಪೆಱ
ತಾವುದು ಸಂಸಾರ ಸಾರಸರ್ವಸ್ವ ಫಲಂ||

ಕಮೀಷನನ್ನು ನೇಮಿಸಿತು. ಇದರ ವರದಿಯಲ್ಲಿ ಕೆಲವು ಬದಲಾವಣೆಗಳನ್ನು ಮಾಡಿ ೧೯೫೬ ೧ನೆಯ ಸ್ಟೇಟ್ ರಿ ಆರ್ಗನೈಸೇಷನ್ ಆಕ್ಟ್ ಭಾರತದ ರಿಪಬ್ಲಿಕ್ಕಿನ ಏಳನೆಯ ವರ್ಷದಲ್ಲಿ ಜಾರಿಗೆ ಬಂತು. ಇದರ ಪ್ರಕಾರ ಭಾರತದಲ್ಲಿ ೧೫ ಪ್ರಾಂತಗಳೂ ಏಳು ಕೇಂದ್ರ ಸರ್ಕಾರದಾಳ್ವಿಕೆಗೆ ಸೇರಿದ ಭಾಗಗಳೂ ಇರಬೇಕೆಂದೂ ರಾಜಪ್ರಮುಖ ಪದವಿ ಹೋಗಬೇಕೆಂದೂ ಪ್ರಾಂತ್ಯಗಳಲ್ಲಿ 'ಎ' 'ಬಿ'ಎಂಬ ವ್ಯತ್ಯಾಸವಿರಕೂಡದೆಂದೂ, ಐದು ಮಂಡಲಗಳಲ್ಲಿ (ಜೋನ್ಸ್) ಸೇರಬೇಕೆಂದೂ ವ್ಯವಸ್ಥೆಯಾಯಿತು. ಇದರ ಪ್ರಕಾರ ಆಗಿನ ಮೈಸೂರು ಸಂಸ್ಥಾನದ ಜಿಲ್ಲೆಗಳು ಚಂದಗಡ ತಾಲ್ಲೂಕು ಬಿಟ್ಟು ಬೆಳಗಾಂ, ಬಿಜಾಪುರ, ಧಾರವಾಡ, ಉತ್ತರ ಕನ್ನಡ, ಗುಲ್ಬರ್ಗ (ಕೋಡಂಗಲ್ ಮತ್ತು ಕಂಡೂರ್ ತಾಲ್ಲೂಕ್ ವಿನಾ) ಆಲಂಪುರ, ಗದ್ವಾಲ್ ತಾಲ್ಲೂಕುಗಳನ್ನು ಬಿಟ್ಟು ರಾಯಚೂರು, ಬೀದರ್ ಜಿಲ್ಲೆಯ ಬಿದರ್ ಭಾಲ್ಕಿ, ಹುಮ್ನಾಬಾದ್, ಸಂತ್ಪುರ ತಾಲ್ಲೂಕುಗಳು, ಕಾಸರಗೋಡು ಅಮೀನ್‌ದೇವಿ ವಿನಾ ದಕ್ಷಿಣಕನ್ನಡ, ಕೊಡಗು

ಮತ್ತು ಕೊಳ್ಳೇಗಾಲ, ಮೈಸೂರು ಪ್ರಾಂತಕ್ಕೆ ಸೇರಬೇಕೆಂದು ತೀರ್ಮಾನವಾಯಿತು. ಕೋಟಿ ಕನ್ನಡಿಗರು ತಮ್ಮ ಇತಿಹಾಸದಲ್ಲಿ ಒಟ್ಟಿಗೆ ಏಕೀಕರಣವಾಗಿ ಒಂದು ಸರ್ಕಾರದ ಆಡಳಿತದಲ್ಲಿ ಸೇರುವ ಭಾಗ್ಯವನ್ನು ಪಡೆದರು. ಆದರೂ ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ಮತ್ತು ಆಡಳಿತ ಕಾರಣಗಳಿಂದ ಕರ್ನಾಟಕಕ್ಕೆ ಸೇರಬೇಕಾಗಿದ್ದ ಕೆಲವು ಭಾಗಗಳು ಬಿಟ್ಟು ಹೋಗಿವೆಯೆಂದು ಭಾವಿಸಲಾಗಿದೆ. ಕಾಸರಗೋಡು, ನೀಲಗಿರಿ, ಹೊಸೂರು, ತಾಳವಾಡಿ, ಮಡಕಶಿರ, ಆಲೂರು, ಆದವಾನಿ, ರಾಯದುರ್ಗ, ದೇಗಲೂರು, ಕೊಲ್ಹಾಪುರ, ಅಕ್ಕಲಕೋಟೆ, ಗಡಹಿಂಗ್ಲೇಜ, ಇವುಗಳು ಆ ಭಾಗಗಳು. ಮಹಾರಾಷ್ಟ್ರ-ಮೈಸೂರು ಗಡಿ ವಿವಾದವನ್ನು ಪುನರ್ವಿಮರ್ಶಿಸಿ ಇತ್ಯಾರ್ಥಪಡಿಸಲು ನೇಮಿಸಿದ್ದ ಮಹಾಜನ್ ಆಯೋಗ ಅಕ್ಕಲಕೋಟೆ ಮತ್ತು ಕಾಸರಗೋಡುಗಳು ಮೈಸೂರು ದೇಶಕ್ಕೂ ನಿಪ್ಪಾಣಿ, ಖಾನಾಪುರ, ಹಲ್ಯಾಳ ಮೊದಲಾದುವು ಮಹಾರಾಷ್ಟ್ರಕ್ಕೂ ಸೇರಬೇಕೆಂದೂ, ಬೆಳಗಾಂವಿ ಮೈಸೂರಿನಲ್ಲಿಯೇ ಉಳಿಯಬೇಕೆಂದು ತೀರ್ಪು ನೀಡಿತು. ಆದರೂ ಅದು ಇನ್ನೂ ಕಾರ್ಯಾವಸ್ಥೆಗೆ ಬರದೆ ಚರ್ಚಾಸ್ಥಿತಿಯಲ್ಲಿಯೇ ಉಳಿದುಕೊಂಡು ಬಂದಿದೆ. ಏಕೀಕೃತ ಮೈಸೂರನ್ನು ಚಂಗಲರಾಯ ರೆಡ್ಡಿಯಾದ ಮೇಲೆ ಕೆ. ಹನುಮಂತಯ್ಯ, ಕಡಿದಾಳಮಂಜಪ್ಪ ಬಿ. ಡಿ. ಜತ್ತಿ, ನಿಜಲಿಂಗಪ್ಪ, ವೀರೇಂದ್ರ ಪಾಟೀಲ್ ಮತ್ತು ದೇವರಾಜ ಅರಸ್, ಗುಂಡೂರಾವ್ ಮಂತ್ರಿಮಂಡಲಗಳು ಆಳುತ್ತಾ ಬಂದಿವೆ. ಪಂಚವಾರ್ಷಿಕ ಯೋಜನೆಯ ವಿವಿಧ ಕಾರ್ಯಕ್ರಮಗಳಿಂದ ದೇಶವನ್ನು ವಿವಿಧ ರೀತಿಯಲ್ಲಿ ಬಹಳ ಉಚ್ಛ್ರಾಯಸ್ಥಿತಿಗೆ ತಂದಿದೆ. ವಿಸ್ತೃತ ಮೈಸೂರನ್ನು ಕರ್ನಾಟಕವೆಂದು ಕರೆಯುವ ಬಗ್ಗೆ ದೀರ್ಘವಾದ ವಿಚಾರ ವಿನಿಮಯ ನಡೆದು ೧೯೭೩ನೆಯ ನವೆಂಬರ್ ಒಂದರಂದು 'ಕರ್ನಾಟಕ'ವೆಂಬ ಹೆಸರಿನಲ್ಲಿ ವೈಭವದ ರಾಜ್ಯೋತ್ಸವವನ್ನು ಆಚರಿಸಿದೆ. ಅದರ ಸರ್ವತೋಮುಖವಾದ ಅಭಿವೃದ್ಧಿಗೆ ಈಗಿನ ಮಂತ್ರಿಮಂಡಲವು ಅಹರ್ನಿಶಿ ದುಡಿಯುತ್ತದೆ. ಗುಂಡೂರಾಯರ ಆಳ್ವಿಕೆಯಲ್ಲಿ ವಿದ್ಯಾಭ್ಯಾಸಕ್ರಮದಲ್ಲಿ ಕನ್ನಡಕ್ಕೆ ಏಕೈಕ ಪ್ರಥಮಸ್ಥಾನವಿದ್ದು ಜನಸಮಾಜ ಕಲ್ಯಾಣಸೇವೆ ಇತೋಪ್ಯತಿಶಯವಾಗಿ ರಾಜ್ಯಾಡಳಿತ ನಡೆಯುತ್ತಿದೆ.

ಬನವಾಸಿಯ ವರ್ಣನೆಯಂತೂ ದೇಶದ ವೈಭವವನ್ನು ಮತ್ತಷ್ಟೂ ವಿಶದೀಕರಿಸುತ್ತದೆ.

ಸೊಗಯಿಸಿ ಬಂದ ಮಮರನೆ ತಳ್ತೆಲೆವಳ್ಳಿಯೆ ಪೂತ ಜಾತಿ ಸಂ
ಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರೊಳ್ಮೆಗಂ
ನಗೆ ಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಳ್ಪೊಡಾವಬೆ
ಟ್ಟುಗಳೊಳಮಾವ ನಂದನ ವನಂಗಳೊಳಂ ಬನವಾಸಿದೇಶದೊಳ್.......

ಅದನ್ನೇ ಚಿಕ್ಕುಪಾಧ್ಯಾಯನು

ಗಾಡಿಯ ಸೀಮೆ, ಚೆಲ್ವೊಗೆದ ತಾಣ, ಅಲಂಪಿನ ಸಂತೆ ಪೆಂಪು ಸಾ
ರ್ದಾಡುವ ಭೂಮಿ, ಸೈಖ್ಯದೆಡೆ, ಪುಣದ ಗೊತ್ತು, ವಿಮೋದದಾಗರಂ,
ಮೋಡಿಯ ಮಂಟಪಂ, ಸಿರಿಯ ಪೆರ್ಚಿಮೊಳ್ಮನೆ, ಮುಕ್ತಿಕಾಂತೆ ಕೈ
ಗೂಡುವ ಬೀಡು, ಕನ್ನಡದ ನಾಡು ವಿರಾಜಿಪುದದೆಂತು ಬಣ್ಣಿಪೆಂ

ಎನ್ನುತ್ತಾನೆ.

ಶಾಸನದ ಕವಿಯೊಬ್ಬನ ಅಭಿಪ್ರಾಯದಂತೆ ಅಲ್ಲಿಯ

ಪೊಲನೆಲ್ಲಂ ಗಂಧ ಶಲಿಪ್ರಕರ ಪರಿವೃತಂ, ನಂದಶ್ರೇಣಿಯೆಲ್ಲಂ
ಘಮಭಾರಾನಮ್ರಚೂತಾವನಜವಳಯಿತಂ, ಜೀರ್ಘಕಾನೀಕಮೆಲ್ಲಂ
ದಳಿತಾಂಭೋಜಾತರೇಣುಸ್ಥಗಿತ ಲಲಿತಮೂರೂರ್ಗಳೆಲ್ಲಂ ಪ್ರಜಾನೀ
ಕುಳಗೋಧಾನ್ಯಪ್ರಕೀರ್ಣಾಂಚಿಕಮೆನಲೆಸೆಗ್ರಂ................||

ಬಿ.ಎಂ ಶ್ರೀಯವರು ಅದನ್ನು 'ಕನ್ನಡನಾಡು ಮುನ್ನೀರ್ ಮೊಱಂಗು ಕರೆನಾಡು, ಮಲೆನಾಡು, ಬಯಲ ಪೊನ್ನಾಡು, ಚೆಲ್ವಿನ ಬೆಲೆ, ಕಣ್ಗಳ ಬಲೆ, ಸುಖಮೆರಚುವ ಬನವಾಸಿ' ಎಂದು ವರ್ಣಿಸಿದ್ದಾರೆ. ಅದರ ಜನ ನೃಪತುಂಗನ ಮಾತಿನಲ್ಲಿ 'ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣಿತಮತಿಗಳ್' ಪಂಪನ ಪ್ರಕಾರ ಅಲ್ಲಿಯ ಮಾನಿಸರ್ 'ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರಮಾದ ಮಾನಸರೆ ಅಂತವರಾಗಿ ಪುಟ್ಟಲೇನಾಗಿಯುಂ ತೀರದು. ತೀರದೊಡಂ ಮಱಿದುಂಬಿಯಾಗಿ ಮೋಣ್ಕೋಗಿಲೆಯಾಗಿ' ಅಲ್ಲಿಯ ವನಗಳಲ್ಲಿ ಹುಟ್ಟಬೇಕು. ಒಂದು ಶಾಸನದ ಪ್ರಕಾರ ಅಲ್ಲಿಯ ಜನರು 'ಭೋಗೋಪಾ ಭೋಗದಿಂದನುರಾಗದಿಂ ಅನವದ್ಯವೃತ್ತಿಯಿಂ ಸುಕೃತ ಶತೋದ್ಯೋಗದಿನಿರ್ಪ ಜನಂಗಳ್! ಅವರು 'ಸಾರಂ ಅನಂಗಜಂಗಮ ಲತಾಂಗಿಯರಿಂದ ಮಲ್ತೆಸಂಸಾರಂ'ಎಂದರಿತಿದ್ದರು. ಆದರೂ ಭೋಗದ ಮಿತಿಯೂ ತ್ಯಾಗದ ಹಿತವೂ ಅವರಿಗೆ ತಿಳಿಯದಿರಲಿಲ್ಲ 'ಧರ್ಮ ಪ್ರಧಾನಂ, ಅರ್ಥ ಧರ್ಮಾಂಘ್ರಿಪ ಫಳಂ ಅದರ್ಕೆ ರಸಮದು ಕಾಮಂ' ಎಂಬುದನ್ನು ಅವರು ಚೆನ್ನಾಗಿ ಅರಿತಿದ್ದರು.

ಕರ್ಣಾಕದ ಧರ್ಮವು ಮೂರು ಶಾಖೆಗಳಲ್ಲಿ ವ್ಯಕ್ತವಾಗಿದೆ. ನನ್ನಿ ಚಾಗಂ, ಅಣ್ಮು ಎಂಬುದೇ ಅವು ಸತ್ಯವನ್ನು ನುಡಿಯುವುದು, ನುಡಿದುದನ್ನು ಸ್ವಲ್ಪವೂ ತಪ್ಪದೆ ನಡೆಸುವುದು, ಆರ್ತರಾದವರಿಗೂ ಕಾರ್ಯಕ್ಕೂ ಯಾವಾಗಲೂ ತ್ಯಾಗ ಮಾಡುವುದು. ಎಂದೂ ಧೈರ್ಯಗೆಡೆದೆ ಪರಾಕ್ರಮ ಪ್ರದರ್ಶನ ಮಾಡುವುದು - ಇವೆಲ್ಲ ಕನ್ನಡಿಗರ ಅಭಿಮಾನಧನ. ಇದನ್ನು ಪಂಪ ರನ್ನಾದಿಗಳು ದುರ್ಯೋಧನನ್ನು ಪ್ರಶಂಸೆ ಮಾಡುವ ಮುಂದಿನ ಪದ್ಯಗಳಲ್ಲಿ ವಿಶದಪಡಿಸಿದ್ದಾರೆ.

ನುಡಿದುದನೆಯ್ದೆ ತುತ್ತತುದಿಯೆಯ್ದುವಿನೆಗಂ ನುಡಿದಂ ಚಲಂ ಚಲಂ
ಬಿಡಿದುದನೆಯ್ದೆ ಮುಂಪಿಡಿದುದಂ ಪಿಡಿದಂ ಸಲೆ ಪೂಣ್ದಪೂಣ್ಕೆನೇ
ರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡ
ಲ್ವಡುವಿನೆಗಂ ಅಣ್ಮುಗುಂದನೆ ದಲ್..............||
ಅರ್ಜುನನ ಮಾತಿದು: .
ಒತ್ತಿ ತಱುಂಬಿನಿಂದ ರಿಪುಭೂಜನಕಜದ ಬೇರ್ಗಳಂ ನಭ
ಕ್ಕೆತ್ತದೆ ಬಂದು ತನ್ನ ಮಱೆವೊಕ್ಕಡೆ ಕಾಯದೆ ಚಾಗದೊಳ್ಪಿನ
ಚ್ಚೊತ್ತದೆ ಮಾಣ್ಣು ಬೂಳ್ವ ಪುಱುವಾನಿಸನ್ ಅಜಾಂಡವೆಂಬೊಂ
ದತ್ತಿಯ ಪಣ್ಣೊಳಿರ್ಪ ಪುಱುವಾನಿಸನ್..............||

ಇವುಗಳನ್ನೇ ಶಾಸನಗಳಲ್ಲಿ ಬರುವ ರಾಜರುಗಳು ಬಿರುದುಗಳಾದ 'ಸತ್ಯವಾಕ್ಯಕೊಂಗಣಿವರ್ಮ' 'ನುಡಿದುದ ಮೀರದ ನನ್ನಿಗಾರ', 'ಪದವಾಕ್ಯ ಪ್ರಮಾಣ','ಅರಿರಾಯ ವಿಮರ್ದಕ ','ಇಱಿವ ಬೆಡಂಗ', 'ದಾನ ಚಿಂತಾಮಣಿ', 'ದಾನವಿನೋದ

'ಮೊದಲಾದವು ಸ್ಪಷ್ಟಪಡಿಸುತ್ತದೆ.

ಕನ್ನಡಿಗರ ತ್ಯಾಗಗುಣವು ಅಸಂಖ್ಯಾತ ಶಾಸನಗಳಿಂದ ಪ್ರಕಟವಾಗಿದೆ. ಅವುಗಳೆಲ್ಲ ಧರ್ಮದ ಅಡಿಗಲ್ಲಿನ ಮೇಲೆಯೇ ನಿರ್ಮಿತವಾದುವು ಅವುಗಳು ಬಹು ಮುಖ್ಯವಾದುವು. ರಾಜಾಧಿರಾಜರೇ ಅಲ್ಲದೆ ಸಾಮಂತರಾಜರು, ರಾಜ್ಯಾಧಿಕಾರಿಗಳು, ಊರ ಗಾವುಂಡ ವರ್ತಕರ ಗುಂಪು, ದೇವಾಲಯದ ನರ್ತಕಿ, ಧರ್ಮಶ್ರದ್ಧೆಯುಳ್ಳ ಸ್ತ್ರೀಪುರುಷರು ವಿಧವಿಧವಾದ ದಾನಗಳನ್ನು ಕೊಟ್ಟಿದ್ದಾರೆ. ಶೈವ, ವೈಷ್ಣವ ದೇವಾಲಯ, ಜೈನರ ಬಸದಿ, ಬೌದ್ಧರ ವಿಹಾರಗಳು, ಜಂಗಮರ ಮಠಗಳು ಮುಂತಾದವುಗಳ ಸ್ಥಾಪನೆ, ಜೀರ್ಣೋದ್ದಾರ, ಗೋಡೆಗಳ ನಿರ್ಮಾಣ, ಅಂಗಭೋಗ-ರಂಗಭೋಗ ಪೂಜಾಪುರಸ್ಕಾರಾದಿಗಳು, ಜಪತಪಾದಿಗಳು, ಸ್ತೋತ್ರಪಾರಾಯಣ, ಸಂಸ್ಥೆಗಳ ಆಶ್ರಮದಲ್ಲಿರುವ ವಿದ್ವಾಂಸರು, ವಿದ್ಯಾರ್ಥಿಗಳು, ಕೈಂಕರ್ಯದವರು, ವಿದ್ಯಾಸಂಸ್ಥೆಗಳು, ಇವುಗಳ ಪೋಷಣೆಗಾಗಿ ಸಾರ್ವಜನಿಕರ

ಅನ್ನದಾನ, ವಿದ್ಯಾದಾನ ಇವುಗಳಿಗೆ ಹೊಲವನ್ನೋ, ಗದ್ದೆಯನ್ನೋ, ಊರನ್ನೋ. ಕಟ್ಟಿಸಿದ ಕರೆಯನ್ನೋ, ಸುಂಕದ ಹಣವನ್ನೋ ಉದಾರವಾಗಿ ದಾನಮಾಡಿದ ಅನೇಕ ಶಾಸನಗಳು ಕರ್ಣಾಟಕದಲ್ಲೆಲ್ಲ ಸಿಗುತ್ತವೆ.

ವ್ಯಕ್ತಿಯ ಇಹಪರ ಸಾಧನೆಗಾಗಿಯೂ ರಾಜರು ಇತರ ಬಂಧುಗಳು ಇಲ್ಲಿಯ ಪ್ರಗತಿ ಮತ್ತು ಮುಂದಿನ ಸದ್ಗತಿಗಾಗಿಯೂ ದಾನಮಾಡಿರುವ ಪ್ರಸಂಗಗಳು ಅಲ್ಪವೇನಲ್ಲ. ಅನ್ನದಾನ ವಿದ್ಯಾದಾನ ವಾಪೀಕೂಪ ತಟಾಕಾದಿಗಳ ನಿರ್ಮಾಣ ಪರಮೋತ್ಕೃಷ್ಟವೆಂದು ಕರ್ಣಾಟಕದಲ್ಲಿ ಭಾವಿಸಲ್ಪಟ್ಟಿತ್ತು

ದುಷ್ಟಶಿಕ್ಷಣ ಮತ್ತು ಶಿಷ್ಟಸಂರಕ್ಷಣೆಗಾಗಿ ಪರಾಕ್ರಮ ಪ್ರದರ್ಶನ ಮಾಡುವುದೂ ಪ್ರಾಣತ್ಯಾಗಮಾಡುವುದೂ ಅಂತಹ ಕಾರ್ಯವನ್ನು ಶ್ಲಾಘಿಸಿ ನೊಂದವರಿಗೆ ಸಹಾಯ ಮಾಡಿ, ಪ್ರದರ್ಶನಕಾರರ ಹಿರಿಮೆಯನ್ನು ಚಿರಸ್ಥಾಯಿಯನ್ನಾಗಿ ಮಾಡುವುದು, ಕನ್ನಡ ಸಮಾಜದ ಒಂದು ಶ್ರೇಷ್ಠ ಸಂಪ್ರದಾಯ. ಕರ್ಣಾಟಕದಲ್ಲೆಲ್ಲ ಸಹಸ್ರ ಸಂಖ್ಯೆಯಲ್ಲಿ ಹರಡಿರುವ ವೀರಗಲ್ಲುಗಳು ಇದನ್ನು ಉದ್ಘೋಷಿಸುತ್ತದೆ. ಇವು ಸತ್ತವರ ಸಾಹಸವನ್ನೇ ಅಲ್ಲದೆ ಉಳಿದವರ ಪರಾಕ್ರಮವನ್ನು ವಿಶದಪಡಿಸುತ್ತೇವೆ. ಇವು ಧರ್ಮಕ್ಕಾಗಿ ದೇಹವನ್ನು ಒಪ್ಪಿಸಿದವರ, ಸೆರೆಹಿಡಿದ ತುರುಗಳನ್ನು ಮರುಕಳಿಸಿದವರ ಸಾಹಸದಲ್ಲಿ ಸತ್ತವರ, ಕಳ್ಳಕಾಕರನ್ನು ಓಡಿಸಿದವರ, ರಾಜರ ಪರವಾಗಿ ಶತ್ರುಗಳೊಡನೆ ಯುದ್ಧ ಮಾಡಿದವರ, ಸ್ವಾಮಿಭಕ್ತಿ ಪ್ರದರ್ಶನ ಮಾಡಿದವರ ಸ್ತ್ರೀಯರ ಮಾನ ಸಂರಕ್ಷಣೆ ಮಾಡಿದವರ ಜ್ಞಾಪಕಾರ್ಥವಾಗಿ ಹಾಕಿದ ಶಾಸನಗಳು.

ರಾಜಮಾತೆಯೊಬ್ಬಳು ತನ್ನ ಮಗುವಿಗೆ ಹಾಲುಣಿಸುವಾಗ ಆಶೀರ್ವದಿಸಿದ ರೀತಿಯ ಶಾಸನವೊಂದರಲ್ಲಿ ಹೀಗೆ ಉಕ್ತವಾಗಿದೆ.

ಕಱೆಯಂ ಕಟ್ಟಿಸು. ಬಾವಿಯಂ ಸವೆಸು. ದೇವಾಗಾರಮಂ ಮಾಡಿಸ<br>
ಜ್ಜೆಱೆಯೊಳ್ ಸಿಲ್ಕಿದನಾಥರಂ ಬಿಡಿಸು, ಮಿತ್ರರ್ಗಿಂಬುಕೆಯ್, ನಂಬಿದ<br>
ರ್ಗೆಱೆವಟ್ಟಾಗಿರು ಶಿಷ್ಯರಂ ಪೊರೆಯೆನುತ್ತಿಂತೆಲ್ಲಮಂ ಪಿಂದೆ ತಾ<br>
ಯೆಱೆದಳ್ ಪಾಲೆಱೆವಂದು. . . . . . . . . .||

ಕರ್ಣಾಟಕದಲ್ಲಿ ಭಾರತದ ಇತರ ಭಾಗದಂತೆಯೇ ಆದಿಕಾಲದಿಂದ ವರ್ಣಾಶ್ರಮ ಪದ್ಧತಿ ಬಹು ಕಟ್ಟುನಿಟ್ಟಾಗಿ ಪರಿಪಾಲಿತವಾಗಿದೆ. ಈ ಪದ್ಧತಿಯನ್ನು ಪಾಲಿಸಿಕೊಂಡು ಬರುವುದು ರಾಜರ ಕರ್ತವ್ಯದ ಒಂದು ಭಾಗವಾಗಿದ್ದಿತು. ಆದಿಕಾಲದಲ್ಲಿ ವರ್ಣಾಶ್ರಮದ ವ್ಯವಸ್ಥೆ ಬಹುಬಿಗಿಯಾಗಿದ್ದು ಮುಂದಿನ ಕಾಲಗಳಲ್ಲಿ ಅದು ಸಡಿಲಗೊಂಡಂತೆ ಕಂಡುಬರುತ್ತದೆ. ಸಮಾಜದಲ್ಲಿ ಬ್ರಾಹ್ಮಣರಿಗೆ ಉತ್ತಮಸ್ಥಾನ. ಅವರು ಬಹು ಗೌರವಾನ್ವಿತರಾಗಿರುತ್ತಿದ್ದರು. ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹವೆಂಬ ಷಟ್ಕರ್ಮಗಳಿಗೂ ಅಧಿಕಾರಿಗಳಾಗಿದ್ದರು. ಧರ್ಮನಿರ್ವಹಣ ಅವರ ಪ್ರಧಾನ ಕಾರ್ಯ ಕದಂಬ, ರಾಷ್ಟ್ರಕೂಟರ ಕಾಲದಲ್ಲಿ ಅವರು ಮಂತ್ರಿಗಳಾಗಿದ್ದುದ್ದು ಉಂಟು. ಸಾಮಾನ್ಯವಾಗಿದ್ದರೂ ವ್ಯವಸಾಯ ಮತ್ತು ವಾಣಿಜ್ಯ ಅವರಿಗೆ ನಿಷೇಧಿತವಾಗಿರಲಿಲ್ಲ. ವಿದ್ಯಾಕೇಂದ್ರಗಳು ಬಹುಮಟ್ಟಿಗೆ ಅವರದೇ ಆಗಿತ್ತು.

ಹುಯೆಂತ್ಸಾಂಗನು ಬ್ರಾಹ್ಮಣರು ಪರಿಶುದ್ಧಚಿತ್ತರೂ ನಿಷ್ಕಾಮಕರ್ಮಿಗಳೂ ನಿಷ್ಪಕ್ಷತತ್ತ್ವ ಪಾಲಕರೂ ಬ್ರಹ್ಮಚರ್ಯನಿಷ್ಠರೂ ಶುದ್ಧ ಧರ್ಮಾಭಿಮಾನಿಗಳೂ ಆಗಿದ್ದರೆಂದು ಹೇಳಿದ್ದಾನೆ. ಇತ್ಸಿಂಗನು ಅವರು ಅತ್ಯಂತ ಶ್ರೇಷ್ಠರೆಂದು ಹೇಳಿದ್ದಾನೆ ಶಾಸನಗಳಲ್ಲಿ ಬ್ರಾಹ್ಮಣರಿಗೆ ವಿಶೇಷ ದಾನಗಳನ್ನಿರುವುದು ಉಕ್ತವಾಗಿದೆ. ಧ್ರುವಶಮನೆಂದು ಬ್ರಾಹ್ಮಣನು ವೇದವೇದಾಂಗ ಪುರಾಣ, ನ್ಯಾಯ ಮೀಮಾಂಸಾದಿ ನಾನಾ ಶಾಸ್ತ್ರ ಪ್ರವೀಣನಾಗಿದ್ದನು. ಈತನ ಅನೇಕ ಯಜ್ಞಯಾಗಾದಿಗಳನ್ನು ಮಾಡಿದ್ದನು. ಪರಮೇಶ್ವರ ಸತ್ಯಕ್ರತುಯಾಜಿ ಎಂಬುವನು ' ಘುವ್ಯಸಾಸ'ನಾಗಿದ್ದ. ಅಂದರೆ ಘಟಿಕಾಧಿಪತಿಯಾಗಿದ್ದನು. ಜಯದ್ವಿತ್ಥನೆಂಬುವನು ತ್ರೈವಿದ್ಯೆಯಲ್ಲಿ ಪಾರಂಗತನಾಗಿ

ನಾಲ್ಕುನೂರು ಬ್ರಾಹ್ಮಣರಿಗೆ ಆಚ್ಯಾರ್ಯನಾಗಿದ್ದನು. ಅವರು ಅಗ್ನಿಷ್ಟೋಮ, ವಾಜಪೇಯ ಪೌಮಡರೀಕ ವೈಶ್ವದೇವ ಮುಂತಾದ ಯಜ್ಞಗಳನ್ನು ಮಾಡಿಸುತ್ತಿದ್ದರು. ಅಲ್ಲದೆ ಬಲಿ, ಚರು, ಕೃಚ್ಛ್ರ, ಅತಿಕೃಚ್ಛ್ರ ಮೊದಲಾದ ದೇಹದಂಡನೆಯಿಂದ ಕೂಡಿದ ಯಜ್ಞಗಳನ್ನು ನಡೆಸುತ್ತಿದ್ದರು. ಇವುಗಳಿಗಾಗಿ ಅವರಿಗೆ ಅನೇಕ ದಾನಗಳು ಕೊಡಲ್ಪಟ್ಟಿವೆ. ಅಗ್ನಿ ಚಯಣ, ಬಹುಸುವರ್ಣ, ಅಶ್ವಮೇಧ ಮೊದಲಾದುವುಗಳನ್ನು ರಾಜರಿಂದ ಮಾಡಿಸುತ್ತಿದ್ದರು. ಪಂಚಗ್ರಾಮದಾನ ಬ್ರಾಹ್ಮಣರಿಗೆ ವಿಶೇಷವಾಗಿ ಕೊಡುತ್ತಿದ್ದ ದಾನ. ಅಗ್ರಹಾರಗಳು ಬ್ರಾಹ್ಮಣರಿಗೆ ಮೀಸಲಾಗಿರುತ್ತಿದ್ದವು ಆದಿಕಾಲದಿಂದ ಎಲ್ಲ ರಾಜರುಗಳೂ ಇಂತಹ ಅನೇಕ ದಾನಗಳನ್ನು ಮಾಡಿದ್ದಾರೆ. ಬ್ರಾಹ್ಮಣರು ಮೇಲೆ ತಿಳಿಸಿದಂತೆ ಮಂತ್ರಿಗಳಾಗಿದ್ದರಲ್ಲದೆ ಕೆಲವು ಸಲ ಸ್ವತಃ ರಾಜ್ಯಪಾಲನೆ ಮಾಡಿದ್ದಾರೆ. ಕದಂಬರ ಮೂಲ ಪುರುಷನಾದ ಮಯೂರಶರ್ಮನು ಬ್ರಾಹ್ಮಣ. ವ್ಯಾಸರಾಯರು ವಿಜಯನಗರದಲ್ಲಿ ರಾಜನಿಗೆ ಕುಹೂ ಯೋಗದ ಕಾಲದಲ್ಲಿ ರಾಜ್ಯನಿರ್ವಹಣೆ ಮಾಡಿದ್ದಾರೆ. ಅವರು ಎಲ್ಲ ತೆರಿಗೆಗಳಿಂದಲೂ ಮರಣದಂಡನೆಯಿಂದಲೂ ನಿವೃತ್ತರಾಗಿದ್ದರು. ಬ್ರಾಹ್ಮಣರು ಲೋಕಕಲ್ಯಾಣಕ್ಕಾಗಿ ಅನವರತ ದುಡಿಯುತ್ತಿದ್ದ ಸಮಾಜದ ಅನಿವಾರ್ಯ ಭಾಗವೆಂದು ಪರಿಗಣಿತರಾಗಿದ್ದರು. ಅವರು ಈ ಭಾವನೆಯನ್ನು ಸಾರ್ಥಕಪಡಿಸಿಕೊಳ್ಳದೇ ಇರುತ್ತಿರಲಿಲ್ಲ.

ಸಮಾಜದಲ್ಲಿ ಕ್ಷತ್ರಿಯರು ಮುಂದಿನ ಗೌರವಕ್ಕೆ ಪಾತ್ರರಾಗಿರುತ್ತಿದ್ದರು. ರಾಜ್ಯಪಾಲನೆ ಅವರ ಮೀಸಲು ಕರ್ಮವಾಗಿದ್ದರೂ ವ್ಯವಸಾಯ ವಾಣಿಜ್ಯಾದಿಗಳಲ್ಲಿ ಭಾಗವಾಗಿದ್ದ ಸಂದರ್ಭಗಳೂ ಸೂಚಿತವಾಗಿವೆ ಇವರು ಯೋಧವರ್ಗದವರು, ಸಾರ್ವಭೌಮತ್ವವನ್ನು ತಾಳಿದವರು. ಆದಿಕಾಲದಲ್ಲಿ ಅನೇಕ ಯಜ್ಞಯಾಗಾದಿಗಳನ್ನು ಲೋಕಕಲ್ಯಾಣಕ್ಕಾಗಿಯೂ ಆತ್ಮೋನ್ನತಿಗಾಗಿಯೂ ನಡೆಸುತ್ತಿದ್ದರು. ಇಮ್ಮಡಿ ಪುಲಿಕೇಶಿಯು ಪ್ರಜಾಕಲ್ಯಾಣ ದೃಷ್ಟಿಯಿಂದ ರಾಜ್ಯಭಾರ ಮಾಡುತ್ತಿದ್ದನೆಂದು ಹುಯೆತ್ಸಾಂಗನು ತಿಳಿಸಿದ್ದಾನೆ. ಕೃಷ್ಣದೇವರಾಯನ ರಾಜ್ಯಾಭಾರರ ವೈಭವವನ್ನು ಪರದೇಶಿಯ ಯಾತ್ರಿಕರು ಬಾಯಿತುಂಬ ಹೊಗಳಿದ್ದಾರೆ. ಬಹುಕಾಲದವರೆಗೆ ಇವರಿಗೆ ವೇದಾಧಿಕಾರವಿದ್ದಂತೆ ಕಂಡುಬರುತ್ತದೆ.

ಸಮಾಜದಲ್ಲಿ ಮೂರನೆಯ ಸ್ಥಾನ ವೈಶ್ಯರದು. ಇವರು ವಾಣಿಜ್ಯಾದಿ ಕಾರ್ಯಗಳಲ್ಲಿ ನಿರತರಾಗಿದ್ದರು. ಆದಿಕಾಲದಲ್ಲಿ ಇವರಿಗೂ ವೇದಾಧಿಕಾರವಿದ್ದರೂ ಆಲ್ಬರೋನಿಯ ಕಾಲಕ್ಕೆ ಅವರು ಅದನ್ನು ಕಳೆದುಕೊಂಡಿದ್ದರು ಶೂದ್ರರು ಚತುರ್ಥ ವರ್ಣದವರು. ಇವರದು ದಾಸ್ಯವೃತ್ತಿಯಾಗಿತ್ತಿತ್ತು. ಅಸ್ಪೃಶ್ಯತೆ ಬಹಳ ಕಾಲದಿಂದಲೂ ಉಲ್ಲೇಖವಾಗಿದೆ. ಅವರು ಸೇವಾವೃತ್ತಿಗಳಲ್ಲದೆ ನಗರ ನೈರ್ಮಲ್ಯಾದಿ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದುದು ನಿರೂಪಿತವಾಗಿದೆ.

ಸಮಾಜವು ಸ್ಥೂಲವಾಗಿ ನಾಲ್ಕು ವರ್ಣಗಳಾಗಿ ವಿಭಾಗವಾಗಿದ್ದರೂ ಸ್ಮೃತಿ ಗ್ರಂಥಗಳೂ ಶಾಸನಗಳೂ ಜನಸಮುದಾಯವನ್ನು ಹದಿನೆಂಟು ಪ್ರಕೃತಿಗಳಾಗಿ ವಿಭಾಗಿಸುತ್ತದೆ. ಕ್ರಿ. ಶ ೭ ನೆ ಶತಮಾನದ ಲಕ್ಮೀಧರನ ಶಾಸನ ಹದಿನೆಂಟು ಪ್ರಕೃತಿಗಳಿಗೆ ಅರಸು ಮಹಾಜನರೊಂದಿಗೆ ಹಕ್ಕು ಬಾಧ್ಯತೆಗಳನ್ನು ದಯಪಾಲಿಸಿರುವುದನ್ನು ಉಲ್ಲೇಖಿಸಿದೆ. ಈ ಹದಿನೆಂಟು ಪ್ರಕೃತಿಗಳನ್ನು ಜನತಾಸಮೂಹ ಅಥವಾ ಅಧಿಕಾರಿವರ್ಗ ಎಂಬ ಭಿನ್ನ ಭಿನ್ನ ನಾಮಧೇಯಗಳಿಂದ ಕರೆದಿದೆ. 'ಸ್ಮೃತಿಚಂದ್ರಿಕೆ'ಯಲ್ಲಿ ಈ ೧೮ ಭಾಗಗಳ ನಿರೂಪಣೆಯಿದೆ. ಇವೆಲ್ಲ ವರ್ಣಾಶ್ರಮದಿಂದ ಹೊರಗಿನವು. ಮುಂದಿನ ಕಾಲದಲ್ಲಿ ಕನ್ನಡ ಕವಿಸಮೂಹ ಮತ್ತು ಶಾಸನಗಳು ಜನಸಾಮಾನ್ಯವು ಹದಿನೆಂಟು ಪ್ರಮೇಯಗಳಿಗೆ ಸಂಬಂಧಪಟ್ಟವೆಂದು ವಿವರಿಸುತ್ತ ಬಂದಿವೆ. ಬಾದಾಮಿಯಲ್ಲಿ ದೊರೆತ ಚಾಲುಕ್ಯರ ಶಾಸನದಲ್ಲಿ ಈ ಸಮಯ ಅಥವಾ ಉದ್ಯೋಗ ಸಂಸ್ಥೆಗಳ ಹಲವಾರು ಹೆಸರುಗಳು ಸಿಕ್ಕುತ್ತವೆ. ಚರ್ಮಕಾರರು, ಕಲ್ಕುಟಿಕರು, ಉಪ್ಪಾರರು, ಹಾಡುಗಾರರು, ನಟರು., ಮಾಲೆಗಾರರು. ಹಾವಾಡಿಗರು, ಚಾತುರ್ವರ್ಣದ ಜೊತೆಯಲ್ಲಿಯೇ ಉಕ್ತವಾಗಿದೆ.

ಕರ್ನಾಟಕದ ಅನೇಕ ರಾಜಧಾನಿಗಳು ಬಹು ವೈಭವದಿಂದಿದ್ದವೆಂದು ಸಾಹಿತ್ಯದಲ್ಲಿಯೂ ಶಾಸನಗಳಲ್ಲಿಯೂ ಕಂಡುಬರುತ್ತದೆ. ಬಾದಾಮಿಯು ಅದಕ್ಕೆ ಒಳ್ಳೆಯ ನಿದರ್ಶನ. ಇದು ನೈಸರ್ಗಿಕವಾಗಿ ಸುರಕ್ಷಿತವಾದ ನಿವೇಶನದಲ್ಲಿ ನಿರ್ಮಿತವಾದ ಸ್ಥಳ. ಸುತ್ತಲೂ ಬೆಟ್ಟಗುಡ್ಡಗಳು ವಾತಾಪಿಯ ಗುಡ್ಡದ ಬುಡದಿಂದ ತುದಿಯವರೆಗೆ ಒಂದು ಇಕ್ಕಟ್ಟಾದ ಕಣಿವೆ. ಮಾರ್ಗವನ್ನು ನಿರ್ಮಿಸಿಕೊಂಡು

ಒಂದನೆಯ ಪುಲಕೇಶಿಯು ಭದ್ರವಾದ ಕೋಟೆಯನ್ನು ಕಟ್ಟಿಸಿ ಅದನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಅದರ ಪ್ರಚೀನ ಹೆಸರು ವಾತಾಪಿ. ಅದು ಒಂದು ಅಧಿಷ್ಠಾನ. ಅಲ್ಲಿ ೨೦೦೦೦ ಬ್ರಾಹ್ಮಣರು ವಾಸವಾಗಿದ್ದರು. ಅದು ಒಂದು ಪ್ರಮುಖವಾದ ವಿದ್ಯಾಕೇಂದ್ರ. ವಿನಯಾದಿತ್ಯನ ರಾಣಿ ವಿನಯವತಿ ಈ ಪಟ್ಟಣದಲ್ಲಿ ಬ್ರಾಹ್ಮವಿಷ್ಣು ಶಿವಾಲಯಗಳನ್ನು ಕಟ್ಟಿಸಿದಳು. ಮಹಾಕೂಟ, ಪಟ್ಟದಕಲ್ಲು ಮತ್ತು ಐಹೊಳೆ ಇತರ ರಾಜಧಾನಿಗಳು ಮಹಾಕೂಟವು ಪ್ರಾಚೀನ ರಾಜಧಾನಿಯೂ ವಿದ್ಯಾಕೇಂದ್ರವೂ ಆಗಿತ್ತು. ಮಹಾಕೂಟೇಶ್ವರ ದರ್ಶನಕ್ಕೆ ರಾಜರಾಣಿಯರು ಬರುತ್ತಿದ್ದರು. ಪಟ್ಟದ ಕಲ್ಲೆಂಬುದು ಪಟ್ಟಾಭಿಷೇಕದ ಸ್ಥಳ. ಇಲ್ಲಿ ಪ್ರಾಚೀನವಾದ ದೇವಾಲಯಗಳಿವೆ. ಐಹೊಳೆಯೂ ಒಂದು ಬೃಹತ್ ವಿದ್ಯಾಕೇಂದ್ರ. ೫೦೦ ಮಂದಿ ಚತುರ್ವಿದ್ಯಾಸಮೂಹಕ್ಕೆ ಇದು ವಾಸಸ್ಥಾನವಾಗಿತ್ತು. ಇದೂ ಒಂದು ರಾಜಾಧಾನಿಯಾಗಿತ್ತು. ಪಾಂಡುರಂಗಪಳ್ಳಿಯೇ ಈಗಿನ ಪಾಂಡರಪುರ. ೬ನೆಯ ಶತಮಾನದಿಂದಲೇ ಇದು ಸುಪ್ರಸಿದ್ಧ ಪಟ್ಟಣವಾಗಿತ್ತು. ಈ ನಗರದ ಜಯಭಟ್ಟರು ೪೦೦ ಜನ ಬ್ರಾಹ್ಮಣರಿಗೆ ಆಚಾರ್ಯರಾಗಿದ್ದರು. ಮಧ್ಯಕಾಲದ ವಿಜಯನಗರವಂತೂ ವಿದೇಶೀಯರಾದ ಪೇಯಸ್, ನ್ಯೂನಿಸ್, ಕೊಂಟಿ, ಅಬ್ದುಲ್‌ರಜಾಕ್ ಮೊದಲಾದವರಿಂದ ವಿಶೇಷವಾಗಿ ಸ್ತುತಿಸಲ್ಪಟ್ಟಿದೆ. ಅದರ ಸುತ್ತಳತೆ ೬೦ ಮೈಲಿ ರೋಮ್ ನಗರಕ್ಕಿಂತ ದೊಡ್ಡದು. ಇಂತಹ ನಗರವನ್ನು ನೋಡಿಯೇ ಇರಲಿಲ್ಲವೆಂದು ಅವರು ಉದ್ಗಾರ ತೆಗೆದಿದ್ದಾರೆ. ನೂರು ಸಾವಿರ ಮನೆ ಐದು ಲಕ್ಷ ಪ್ರಜೆಗಳಿದ್ದರೆಂದು ವರ್ಣಿಸುತ್ತಾರೆ. ಗಂಗಾದೇವಿಯ ಪ್ರಕಾರ ಅದು ಅಮರಾವತಿಯನ್ನೂ ಮೀರಿಸಿತ್ತು. ಸರೋವರ ಮತ್ತು ಉದ್ಯಾನಗಳಿಂದ ಕೂಡಿ ಸಮಸ್ತವಸ್ತುಗಳ ಶಾಲೆಯೂ ಸಂಪೂರ್ಣ ಸಂಪತ್ತಿಗೆ ನೆಲೆಯೂ ಆಗಿದ್ದಿತು. 'ಪಂಪಾಕ್ಷೇತ್ರ', ಅಚ್ಯುತಪುರ, ಅಚ್ಯುತರಾಯಪೇಟೆ, ಸೂಳೇಬಜಾರ್, ತಿರುಮಲಪುರ, ಕೃಷ್ಣರಾಪುರ, ನಾಗಲಾಪುರ, ಕಮಲಾಪುರ, ವಿಜಯವಿರೂಪಪುರ ಮೊದಲಾದ ಅನೇಕ ಉಪನಗರಗಳನ್ನೂ ಒಳಗೊಂಡಿತ್ತು ಹೊರಗಡೆ ಅನೇಕ ಸಣ್ಣ ಸಣ್ಣ ಪಟ್ಟಣಗಳು ಸುಪ್ರಸಿದ್ಧವಾಗಿದ್ದುವು.

ಕರ್ನಾಟಕದಲ್ಲಿ ಪುರುಷರಂತೆ ಸ್ತ್ರೀಯರೂ ಸುಸಂಸ್ಕೃತರು. ಸಮಾಜಲ್ಲಿ ಅವರಿಗೆ ಬಹು ಮಾನ್ಯವಾದ ಸ್ಥಾನಗಳಿದ್ದುದು ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಸ್ಪಷ್ಟವಾಗಿವೆ. ಆದಿಕಾಲದಿಂದಲೂ ಅವರಿಗೆ ಸೂಕ್ತ ಸಂಸ್ಕಾರಗಳು ದೊರೆಯುತ್ತಿದ್ದವು. ಸ್ತ್ರೀಶಿಕ್ಷಣ ಬಳಕೆಯಲ್ಲಿದ್ದರೂ ಅದು ಬಳಕೆಯಲ್ಲಿದ್ದುದು ಮೇಲ್ತರಗತಿಗಳಲ್ಲಿ. ಋಷಭದೇವನು ಬ್ರಾಹ್ಮಿ ಮತ್ತು ಸುಂದರಿಯರೆಂಬ ತನ್ನ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಿದುದನ್ನು ಪಂಪನು ಹೇಳುತ್ತಾನೆ. ಮೊದಲನೆಯವಳಿಗೆ ಅಕ್ಷರ ವಿದ್ಯೆಯನ್ನು ಎರಡನೆಯವಳಿಗೆ ಗಣಿತವನ್ನು ಹೇಳಿಕೊಟ್ಟನಂತೆ ಗಂಗರಕಾಲದಿಂದ ವಿಜಯನಗರ ಕಾಲದವರೆಗೆ ಸಮಾಜದಲ್ಲಿ ಅವರು ಗೌರವಸ್ಥಾನವನ್ನು ಪಡೆದಿದ್ದಾರೆ. ಹಲವಾರು ಸ್ತ್ರೀಯರನ್ನು ಉನ್ನತಸ್ಥಾನದಲ್ಲಿದ್ದು ಹೊಣೆಗಾರಿಕೆಯಿಂದ ಆಡಳಿತ ನಿರ್ವಹಿಸುತ್ತಿದ್ದು ಬಾದಾಮಿಯ ಚಾಲುಕ್ಯರ ಕಾಲದಲ್ಲಿ ಇದರ ಪರಾಕಾಷ್ಠೆಯನ್ನು ನೋಡಬಹುದು. ವಿಜಯಾದಿತ್ಯನ ಮಹಾಮಾತೆ ವಿನಯಾವತಿ ರಾಣಿಯು (೬೭೯-೩೩೪) ವಾತಪಿಪುರದಲ್ಲಿ ಪ್ರತಿಷ್ಠಿಸಿದ್ದ ದೇವತಾ ವಿಗ್ರಹಗಳಿಗೆ ಅನೇಕ ಕರತೆರಿಗೆಗಳ ಮೂಲಕ ಉತ್ಪನ್ನ ದೊರೆಯುವಂತೆ ಮಾಡಿದಳು. ಅಮೋಘವರ್ಷನ ಮಗಳೂ ಎರೆಯಂಗನ ಹೆಂಡತಿಯೂ ಆದ ರೇವನಿಮ್ಮಡಿ ಎಡದೊರೆ ನಾಡನ್ನು ಕ್ರಿ. ಶ ೮೩೭ರಲ್ಲಿ ಆಳುತ್ತಿದ್ದಳು ಚಂದ್ರಾದಿತ್ಯನ ರಾಣಿ ವಿಜಯಭಟ್ಟಾರಿಕೆ ತನ್ನ ಪತಿ ರಾಜಧಾನಿಯಲ್ಲಿಲ್ಲದಾಗ ರಾಜ್ಯಾವಾಳುತ್ತಾ ತಾನೇ ಸ್ವಂತ ಶಾಸನಗಳನ್ನು ಹಾಕಿಸಿರುವುದೂ ಕಂಡುಬರುತ್ತದೆ. ರಾಷ್ಟ್ರಕೂಟರಲ್ಲಿ ಮಹಿಳೆಯರು ಅಧಿಕಾರದಲ್ಲಿ ನಿದರ್ಶನಗಳಿವೆ. ನಾಗರಖಂಡದ ನಾಳ್ಗಾವುಂಡನು ತನ್ನ ಪ್ರಭುಗಾಗಿ ಹೋರಾಡಿ ಮರಣ ಹೊಂದಿದಾಗ ಅವನ ಹೆಂಡತಿಯಾದ ಚಿಕ್ಕಮಬ್ಬೆಯು ಉತ್ತರಾಧಿಕಾರಿಣಿಯಾಗಿ ಅಧಿಕಾರ ಮಾಡಿ ಅವನ ಕಾರ್ಯವನ್ನು ಸಾಹಸದಿಂದ ಸಾಧಿಸಿದಳು. ಅವಳು ನಿವೃತ್ತಿಹೊಂದಲು ಅಪೇಕ್ಷಿಸಿದಾಗ ಅವಳ ಮಗಳನ್ನು ಆ ಕಾರ್ಯಕ್ಕೆ ನೇಮಕ ಮಾಡಿದಳು ಕಲ್ಯಾಣಿ ಚಾಳುಕ್ಯರಲ್ಲಿ ಅನೇಕ ರಾಜಕುಮಾರಿಯರು, ಪ್ರಂತಾದಿಕಾರಿಗಳಾಗಿ ಆಡಳಿತ ನಡೆಸಿದ್ದಾರೆ. ಕಿಸುಕಾಡಿನ ಸತ್ಯಾಶ್ರಯನ ಮಗಳಾದ ಅಕ್ಕಾದೇವಿ ಇದಕ್ಕೆ ಉತ್ತಮ ನಿದರ್ಶನ. ವಿಷ್ಣುವರ್ಧನನ ಇತರ ಮಹರ್ಷಿಯರಾದ ರಾಜಲಿ, ಬಮ್ಮಲಿ, ಲಕ್ಷ್ಮಿ, ದೇವಕಿ

ಎಂಬುವರು ಶಾಂತಲೆಯಂತೆಯೇ ಸಂಗೀತ, ಸಾಹಿತ್ಯ, ನಾಟ್ಯ ಮೊದಲಾದ ಕಲೆಗಳಲ್ಲಿಅಲ್ಲದೆ ರಾಜ್ಯಭಾರ ಕ್ರಮದಲ್ಲಿಯೂ ಕುಶಲೆಯರಾಗಿದ್ದರು. ವಿಷ್ಣುವರ್ಧನನ ರಾಣಿ ಶಾಂತಲದೇವಿಯು ರಾಜ್ಯಾಡಳಿತದಲ್ಲಿ ಭಾಗವಹಿಸಿ ಪತಿಗೆ ಮಾರ್ಗದರ್ಶಕಳಾಗಿದ್ದಳಂತೆ. ಸಾಮಂತರಾಜ ಬರುಮಯ್ಯನ ಹಿರಿಯ ಹೆಂಡತಿ ಬಾಗಿನಬ್ಬೆ ಕ್ರಿ. ಶ. ೧೦೮೪ರಲ್ಲಿ ಆಳಿದಳೆಂದು ತಿಳಿದು ಬರುತ್ತದೆ ಧಾರ್ಮಿಕ ಸಂಸ್ಥೆಗಳ ಆಡಳಿತದಲ್ಲಿಯೂ ಅವಳಿಗೆ ಭಾಗವಿರುತ್ತಿತ್ತು. ಕ್ರಿ. ಶ. ೧೨೫೫ರ ಒಂದು ಶಾಸನದಂತೆ ಕುಂಜನ ಶೆಟ್ಟಿಯೆಂಬುವನು ಕುಂಜೇಶ್ವರ ದೇವಾಲಯಕ್ಕೆ ಹೆಚ್ಚಿನ ಭೂಮಿಯ ಕೊಡಿಗೆಯನ್ನು ಕೊಟ್ಟಂತೆಯೂ ಆ ದೇವಾಲಯದ ಮೇಲ್ವಿಚಾರಣೆಯನ್ನು ಅವನ ಮಗಳಾದ ಘನಕುಮಾರಿ ಚೆಂಗವ್ವೆಯೇ ನೋಡಿಕೊಳ್ಳುತ್ತಿದಂತೆಯೂ ಹೇಳಿದೆ ವಾಸ್ತುಶಿಲ್ಪಕ್ಕೆ ಅವರಿಂದ ವಿಶೇಷ ಪ್ರೋತ್ಸಾಹ ದೊರೆತಿದೆ.

ಇಮ್ಮಡಿ ವಿಕ್ರಮಾದಿತ್ಯನ ರಾಣಿಯಾದ ಲೋಕಮಹಾದೇವಿ ಮತ್ತು ತ್ರೈಲೋಕ್ಯಮಹಾದೇವಿಯರು ಪಟ್ಟದಕಲ್ಲಿನ ಭವ್ಯದೇವಾಲಯಗಳ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಶಾತವಾಹನರ ಕಾಲದಲ್ಲಿ ಅನೇಕ ಸ್ತ್ರೀಯರು ಬೌದ್ಧ ಭಿಕ್ಷುಗಳ ಉಪಯೋಗಕ್ಕಾಗಿ ಸ್ತೂಪ, ವಿಹಾರ ಮತ್ತು ಗುಹೆಗಳನ್ನು ನಿರ್ಮಿಸಿದ್ದಾರೆ. ಸಾಹಿತ್ಯದಲ್ಲಿಯೂ ಪ್ರಸಿದ್ಧರಾದವರು ಇಲ್ಲದಿಲ್ಲ. ಕಂತಿ, ಅತ್ತಿಮಬ್ಬೆ, ಅಕ್ಕಮಹಾದೇವಿ, ನಾಗಲಾಂಬಿಕೆ ಮೊದಲಾದವರನ್ನು ಇಲ್ಲಿ ಸೂಚಿಸಬಹುದು,. ಸಂಗೀತ, ನಾಟ್ಯ ಮೊದಲಾದ ಕ್ಷೇತ್ರಗಳಲ್ಲಿ ಪ್ರಸಿದ್ಧರಾದವರನೇಕರಿದ್ದಾರೆ. ವಿಷ್ಣುವರ್ಧನನ ರಾಣಿ ಶಾಂತಲಾದೇವಿ ಭರತಾಗಮದಲ್ಲಿ ಒಂದು ರತ್ನಜೋತಿ. ಎಲ್ಲ ವಿಧದ ನೃತ್ಯಗಳಲ್ಲಿಯೂ ಹಸ್ತಮುದ್ರಿಕೆಗಳಲ್ಲಿಯೂ ಅವಳು ಸುಪ್ರಸಿದ್ದಳು. ಇವಳಿಗೆ 'ಸಂಗೀತ ಸರಸ್ವತಿ' ಎಂಬ ಬಿರುದ್ದಿತು. ಒಂದನೆಯ ಬಲ್ಲಾಳನ ದಂಡನಾಯಕನಾಗಿದ್ದ ಮರಿಯಾನೆಯು ಸಕಲ ಕಲೆಗಳಲ್ಲಿಯೂ ಪರಿಣಿತರಾದ ತನ್ನ ಮೂವರು ಮಕ್ಕಳನ್ನು ಬಲ್ಲಾಳನಿಗೆ ಮದುವೆಮಾಡಿಕೊಟ್ಟನು. ಗಂಗರಾಜ ಪೆರ್ಮಾಡಿ ನರ್ತನದಲ್ಲಿ ಪ್ರವೀಣಳಾದ ಬಲಚಿ ದೇವಿಯನ್ನು ಮದುವೆಯಾದನು 'ಪಾತ್ರಜಗದಲೆ'ಎಂಬ ಬಿರುದನ್ನು ಅವಳು ಪಡೆದಿದ್ದಳಂತೆ. ಕಾವ್ಯಚೂರ್ಯ ಸೋಮೇಶ್ವರನ ರಾಣಿ ಸೋಮಲದೇವಿ ಮಹಾಸಭಿಕರೆದುರಿಗೆ ನರ್ತನ ಮಾಡುತ್ತಿದ್ದಳೆಂದು ಶಾಸನಗಳಲ್ಲಿ ಉಕ್ತವಾಗಿದೆ. ತ್ರಿಭುವನ ಮಲ್ಲ ಚೋಳನ ಮಹಾರಾಣಿ ಲಕ್ಷ್ಮೀದೇವಿಯು ತನ್ನ ಪತಿಯೊಡನೆ ಪಾಲುದಾರಳಾಗಿ ರಾಜ್ಯವಾಳಿದಳು. ಅವಳು ಕಲೆ, ಸಾಹಿತ್ಯ, ಗಾನ, ವಾದ್ಯ, ಸಂಗೀತ ನೃತ್ಯ-ಶಾಸ್ತ್ರದಲ್ಲಿ ಪ್ರವೀಣಳಾಗಿದ್ದಳು. ದೇವಾಲಯಗಳಲ್ಲಿ ನಡೆಯುವ ಸೇವೆಗಳಲ್ಲಿ ಸಂಗೀತ ಮತ್ತು ನಾಟಕಾಭಿನಯಗಳು ತಪ್ಪದೇ ಗೋಚರಿಸುತ್ತವೆ. ಈ ಕಲೆಗಾರರಲ್ಲಿ ಬಹುಮಂದಿ ಮಹಿಳೆಯರು. ಜಲಸಂಗವಿ ಶಾಸನವು ಒಬ್ಬಮಹಿಳೆಯಿದ ಕಂಡರಿಸಲ್ಪಟ್ಟಿತು. ಆ ಶಾಸನವು ಅವಳು ವಾಸ್ತವವಾಗಿ ಬರೆಯುತ್ತಿರುವಂತೆ ತೋರಿಸಲಾಗಿದೆ. ಸುಂದರವಾದ ಲಿಪಿಯನ್ನು ಕಂಡರಿಸುವ ಕಲೆಯಲ್ಲಿ ಮಹಿಳೆಯರು ಪರಿಣತರಾಗಿದ್ದರೆಂದು ಇದರಿಂದ ಊಹಿಸಬಹುದಾಗಿದೆ. ವಿಜನಗರದ ಕಾಲದಲ್ಲಿ ಮಹಿಳೆಯರ ಸ್ಥಾನಮಾನವನ್ನು ವಿದೇಶೀಯನಾದ ಬಾರ್ಬೋಸಾ ಹೀಗೆಂದು ವರ್ಣಿಸುವನು. 'ಕುಟುಂಬ ನಿರ್ವಹಣೆಯೇ ಸ್ತ್ರೀಯರ ಪ್ರಧಾನ ಕ್ಷೇತ್ರವಾಗಿದ್ದರೂ ಅವರು ಇತರ ಕ್ಷೇತ್ರಗಳಲ್ಲಿಯೂ ಭಾಗವಹಿಸುತ್ತಿದ್ದರು. ಬಾಲ್ಯದಿಂದಲೂ ಸ್ತ್ರೀಯರು ಗೀತ , ವಾಚನ ಮತ್ತು ನೃತ್ಯಗಳನ್ನು ಅಭ್ಯಾಸ ಮಾಡುತ್ತಾರೆ. ರಾಜಪತ್ನಿಯರು ಸಂಗೀತದಲ್ಲಿ ಪ್ರವೀಣರು. ಅರಮನೆಯಲ್ಲಿ ಸ್ತ್ರೀಯರು ಪುರುಷರು ಎಲ್ಲ ಕಾರ್ಯವನ್ನು ನಿರ್ವಹಿಸುತ್ತಾರೆ. ಕತ್ತಿ ಗುರಾಣೆಗಳನ್ನು ಹಿಡಿದು ಕಾದಬಲ್ಲರು. ಮಲ್ಲಯುದ್ಧವನ್ನು ಮಾಡಬಲ್ಲರು. ಲೆಕ್ಕಪತ್ರವನ್ನು ಇಡಬಲ್ಲರು. ವೇಯಿಸ್ ಮತ್ತು ನ್ಯೂನಿಸ್ ಎಂಬುವರ ಪ್ರಕಾರ ಅವರು ಹೊರಗಿನ ವ್ಯವಹಾರಗಳನ್ನು ಮಾಡಬಲ್ಲರು. ಪ್ರೌಢದೇವರಾಯನ ಆಸ್ಥಾನದಲ್ಲಿ ಹೊನ್ನಳೆಯೆಂಬುವಳು ವರದಿಗಾರಳು ಅಚ್ಯುತರಾಯನ ಕಾಲದಲ್ಲಿ ಕವಿಯತ್ರಿಯಾದ ತಿರುಮಲಾಂಬೆ ರಾಜಕಾರ್ಯ ನಿರ್ವಹಣೆ ಮಾಡಿದಳು. ತನಗೆ ಮೆಚ್ಚುಗೆಕೊಟ್ಟಾಗ ಸ್ವಯಂ ರಚಿಸಿದ ಪದ್ಯಗಳನ್ನು ವಾಚಿಸಿದಳು. ಕನಕದಾಸರು ಆಗಿನ ಕಾಲದ ಸ್ತ್ರೀಯರು ಅಂಗಡಿಗಳಿಗೆ ಭೂಷಣವಾಗಿ ವಾಣಿಜ್ಯ ಕ್ಷೇತ್ರಗಳಲ್ಲಿಯೂ ಭಾಗವಹಿಸುತ್ತಿದ್ದರೆಂದು ತಿಳಿಸಿದ್ದಾರೆ. ಅವರ ಬಿಚ್ಚಿದ ಜಡೆಮುಡಿಯನ್ನು ಬೆವರಿದ ಮುಖವನ್ನು ಏರಿಳಿಯುತ್ತಿದ್ದ ವಕ್ಷಸ್ಥಳವನ್ನು ವರ್ಣಿಸುತ್ತಾರೆ. ಪುರಂದರದಾಸರು ಬೂಟಾಟಿಕೆಯವರನ್ನು ನಾಟಕದ ಸ್ತ್ರೀಯರಿಗೆ ಹೋಲಿಸುತ್ತಾರೆ. ಸ್ತ್ರೀಯರು

ನಾಟಕದಲ್ಲಿ ಪುರುಷವೇಷವನ್ನು ಧರಿಸುತ್ತಿದ್ದರು. ತಿಮ್ಮಯ್ಯನೆಂಬ ನಟನ ಮಗಳಾದ ಪಾತ್ರಿಯೆಂಬವಳು 'ತಾಯಿಕೊಂಡ' ನಾಟಕದಲ್ಲಿ ಪಾತ್ರವಹಿಸಿದ್ದಳು.

ವೇಶ್ಯಾಸ್ತ್ರೀಯರಿಗೆ ಸಮಾಜದಲ್ಲಿ ವಿಶೇಷ ಗೌರವಸ್ಥಾನವಿದ್ದಿತು. ವೇಶ್ಯಾವೃತ್ತಿಯು ಎಲ್ಲೆಡೆಯಲ್ಲಿಯೂ ವಿಶೇಷ ಬಳಕೆಯಲ್ಲಿದ್ದಿತು. ಅವರು ರೂಪು ಲಾವಣ್ಯ ಬುದ್ಧಿಕೌಶಲ ಕಲಾಸಕ್ತಿಗಳಿಗೆ ಪ್ರಖ್ಯಾತರಾಗಿದ್ದರು. ಶ್ರೀಮಂತಿಕೆ, ವಿಲಾಸವೈಭವಗಳಿಂದ ಕೂಡಿದ್ದರು. ವಿನಾಪೋಟಿ ಎಂಬ ಹೆಸರಿನ ಹೆಣ್ಣೊಬ್ಬಳು ವಿನಾಯಾದಿತ್ಯನ ಪ್ರಾಣವಲ್ಲಭೆಯಾಗಿದ್ದಳು. ಇವಳು ಮಹಾಕೂಟ ದೇವಾಲಯಕ್ಕೆ ಒಂದು ಸುವರ್ಣಪೀಠ ರಜತಚ್ಛತ್ರ ಮತ್ತು ೮೦೦ ಚದರ ಭೂಮಿಯನ್ನು ದಾನ ಮಾಡುವಷ್ಟು ಶ್ರೀಮಂತಳಾಗಿದ್ದಳು. ಗೋವಿಂದಪೊಡ್ಡಿಯ ಮಗಳಾದ ಬದಿಪೊಡ್ಡಿಯೆಂಬುವಳು ಒಂದು ದೇವಾಲಯದ ಪ್ರಧಾನ ವೇಶ್ಯೆಯಾಗಿದ್ದಳು. ದೇವಾಲಯಕ್ಕೆ ಗಜಾಶ್ವರಥ ಭೂದಾನ ಗೋದಾನ ಮಾಡಿದಳು. ಜಾಲಬ್ಬೆಯೆಂಬ ಮತ್ತೊಬ್ಬಳು ವಿಜಯೇಶ್ವರ ದೇವರಿಗೆ ಹರಕೆ ಒಪ್ಪಿಸಲೆಂದು ಸ್ತಂಭಗಳನ್ನು ಮಾಡಿಸಿದಳು. ವಿನಾಪೋಟಿಯ ತಾಯಿ ಮತ್ತು ಅಜ್ಜಿಯರ ಹೆಸರುಗಳು ಬಹು ಗೌರವಯುಕ್ತವಾಗಿ ಉಕ್ತವಾಗಿವೆ. ಶಾಸನಗಳಲ್ಲಿ ಇವರು ಮೂವರಿಗೂ ಗೌರವಸೂಚಕ ವಿಶೇಷಣಗಳು ಬಹುವಚನದಲ್ಲಿ ಸೂಚಿತವಾಗಿದೆ. ಸೇಂದ್ರಕ ರಾಜನೆಂಬುವನು ರೂಪದಲ್ಲಿ ಮನ್ಮಥನಾಗಿದ್ದು ಸೂಳೆಯರ ಕಣ್ಮಣಿಯಾಗಿದ್ದನಂತೆ ಒಟ್ಟಿನಲ್ಲಿ ಇವರು ವಿವಿಧ ಕಳೆಗಳ ಪೋಷಕರಾಗಿ ಸಮಾಜದಲ್ಲಿ ಬಹು ಆದರಣೀಯರಾಗಿದ್ದರು. ಸಾಮಾನ್ಯವಾಗಿ ಎಲ್ಲ ಕನ್ನಡ ಮಹಾಕಾವ್ಯಗಳಲ್ಲಿಯೂ ವೇಶ್ಯಾವಾಟಿಯ ವರ್ಣನೆಯು ಒಂದು ಪ್ರಧಾನ ಅಂಗವಾಗಿ ಅಂಗೀಕೃತವಾಗಿರುವುದು ಸಮಾಜದಲ್ಲಿ. ಅವರ ಪ್ರಾಮುಖ್ಯವನ್ನು ಸ್ಪಷ್ಟಪಡಿಸುವುದು 'ಸಮಸ್ತಭಾರತ'ವನ್ನು ಬರೆಯಲು ಹೊರಟ ಕವಿತಾಗುಣಾರ್ಣವನಾದ ಪಂಪನು ಆ ಕಾಲದ ವೇಶ್ಯಾವಾಟಿಯ ಒಂದು ಪ್ರತ್ಯಕ್ಷ ಚಿತ್ರವನ್ನು ಕೊಟ್ಟಿದ್ದಾನೆ. ಆ ಪೆಂಡವಾಸಗೇರಿಯ ಭೋಗಸೌಭಾಗ್ಯ ಮಾಲೆಗೌರ್ತಿಯರ ಜೋಡುಗೆಯ್ತು, ಪಾದರಿಯರ ಸಂಭಾಷಣೆಯ ವೈಭವ, ಕುಹಕ ಕೇಳಿಗಳು ಸರಸಸಲ್ಲಾಪಗಳು, ನೋವುನುಲಿತಗಳು, ಅರಬೊಜಂಗ, ಕಿರುಕುಳ ಬೊಜಂಗ, ಪೊರ್ಕುಳಿ ಬೊಜಂಗ, ಪೊಜಿಲ ಬೊಜಂಗ, ಕತ್ತರಿ ಬೊಜಂಗರೇ, ಮೊದಲಾದ ವಿವಿಧ ರೀತಿಯ ಬೊಜಂಗರ ಚಿತ್ರಗಳು ಆ ಕಾಲ ವೇಶ್ಯಾವರ್ಗದವರಿಗಿದ್ದ ಸ್ಥಾನವನ್ನು ವಿಶದಪಡಿಸುತ್ತವೆ. ದೇವಾಲಯಾದಿ ಧಾರ್ಮಿಕ ಕ್ಷೇತ್ರಗಳಲ್ಲಿಯೂ ರಾಜಾಸ್ಥಾನಾದಿ ವೈಭವ ಪರಿಸರಗಳಲ್ಲಿಯೂ ಅವರ ಸ್ಥಾನ ಅನಿವಾರ್ಯವಾಗಿತ್ತೆಂದು ಹೇಳಬಹುದು.

ಕುಡಿತವೂ ಸಮಾಜದಲ್ಲಿ ವಿಶೇಷವಾಗಿ ಬಳಕೆಯಲ್ಲಿತ್ತು. ಪುಲಿಕೇಶಿಯ ರಾಜ್ಯದಲ್ಲಿ ಕ್ಷತ್ರಿಯ ಯೋಧರು ಕುಡಿದು ಮತ್ತರಾಗುತ್ತಿದ್ದರು. ಯುದ್ಧಕ್ಕೆ ಹೋಗುವುದಕ್ಕೆ ಮೊದಲು ಯುದ್ಧದಾನೆಗಳಿಗೂ ಕುಡಿಸಿ ಉನ್ಮತ್ತಗೊಳಿಸುತ್ತಿದ್ದರು. ತತ್ಕಾಲೀನ ಗ್ರಂಥವಾದ 'ಪುಲಸ್ತ್ಯಸ್ಮೃತಿ'ಯಲ್ಲಿ ಅಮಲೇರಿಸುವ ೧೧ ವಿಧವಾದ ಪಾನೀಯಗಳನ್ನು ೧೨ ನೆಯದಾದ ಸುರೆಯೊಂದಿಗೆ ಸೇರಿಸಿ ಹೇಳಿದೆ ಬೇರೆ ಬೇರೆವರ್ಗದವರಿಗೆ ಮೆಚ್ಚಿಗೆಯಾದ ಪಾನೀಯಗಳನ್ನು ಹುಯೆಂತ್ಸಾಂಗನು ಈ ರೀತಿ ವಿವರಿಸಿದ್ದಾನೆ. ದ್ರಾಕ್ಷಿ ಮತ್ತು ಕಬ್ಬುಗಳಿಂದ ತಯಾರಾದ ಮದ್ಯ ಪ್ರಕಾರಗಳು ಕ್ಷತ್ರಿಯರ ಪಾನೀಯಗಳು ವೈಶ್ಯರು ಅತ್ಯುಗ್ರವಾದ ಬಟ್ಟಿಯ ಸೆರೆಯನ್ನು ಕುಡಿಯುತ್ತಾರೆ. ಬೌದ್ಧಭಿಕ್ಷುಗಳು ಮತ್ತು ಬ್ರಾಹ್ಮಣರು ದ್ರಾಕ್ಷಾರಸವನ್ನೂ ಹಾಲನ್ನೂ ಸೇವಿಸುತ್ತಾರೆ. ಕೆಳಜಾತಿಯವರು ಮಿತ್ರ ಜಾತಿಯವರೂ ಕುಡಿಯುವ ಪಾನೀಯಗಳು ಇಂತಹದೇ ಆಗಿರಬೇಕಾದುದಿಲ್ಲ. ಪಂಪನು ವರ್ಣಿಸಿರುವ ಪಾನಶಾಲೆಯ ವೈಭವವು ಸಮಾಜದಲ್ಲಿ ಅದರ ಸ್ಥಾನವನ್ನೂ ನಿರ್ದೇಶಿಸುತ್ತದೆ. ಪಾನಶಾಲೆಯಲ್ಲಿ 'ಕಳ್ಳಿನೊಳಮರ್ದಿನೊಳಂ ಪುಟ್ಟಿದ ಪೆಂಡಿರಂತೆ ಸೊಗಯಿಸುವ ಪಲರುಮೊಳ್ವೆಂಡಿರೊಂದೆಡೆಯೊಳಿರ್ದು ಕಾಮದೇವನೆಂಬ ಬಳಮರ್ದುಕಾಜಿನ ಮಾಡಿದ ಮರ್ದಿನಂತೆ ಬೆಳೆದು ದಳಂಬಡೆದು ಮೂನುಜಿಜುವತ್ತು ಜಾತಿಯ ಕಳ್ಗಳಂ ಮುಂದಿಟ್ಟು ಮಧುಮಂತ್ರದಿಂ ಮಧುದೇವತೆಗಳನರ್ಚಿಸಿ ಪೊನ ಬೆಳ್ಳಿಯ ಪದ್ಮರಾಗದ ಪಡ್ಡೆಚ್ಚೆಯ ಗಿಳಿಯ ಕೋಗಿಲೆಯ ಕೊಂಚೆಯಂಚೆಯ ಕುಂತಳಿಕೆಯ ಮಾಳ್ಕೆಯ ಸಿಪ್ಪುಗಳೊಳ್ ತೀವಿ ಮಧುಮಂತ್ರಂಗಳಂ ಮಂತ್ರಿಸಿ ನೆಲೆದೊಜೆದು ತಲೆಯೊಳ್ ತಳಿದು ಕಳ್ಳಿಳನೊಳ್ ಬೊಟ್ಟನಿಟ್ಟುಕೊಂಡು ಕೆಲದರ್ಗೆಲ್ಲಂ ಬೊಟ್ಟಿಟ್ಟು ಕಿಜೆಯರ್ಪಿರಿಯರಜೆದು

ಪೊಡೆವಟ್ಟು ಕುಡಿ ಬಿದಿರ ಕುಡಿಯ ಮಾವಿನ ಮಿಡಿಯ ಮಾರುದಿನ ಮೆಣಸುಗಡಲೆಯ ಪುಡಿಯೊಳಡಸಿಲ್ಲಣಿಗೆಯ ಚಿಕ್ಕಣಂಗಳು ಸವಿಸವಿದು ಅವುಗಳ ರುಚಿಯಂ ನಾನಾ ರೀತಿಯಿಂ ವಿಮರ್ಶೆ ಮಾಡಿ., ಕಾಂತೆಯರು ಕಾಮಾಂಗವನ್ನು ಕುಡಿಯುತ್ತಾರೆ. ಈ ವರ್ಣನೆಯು ಕಾಲದಲ್ಲಿ ಕುಡಿತಕ್ಕಿದ್ದ ಪ್ರಾಶಸ್ತ್ಯವನ್ನು ವಿಶದಪಡಿಸುತ್ತದೆ.

ಬೇಟೆಯಾಡುವುದು ಅರಸರಿಗೆ ಬಹು ಪ್ರಿಯವಾದ ಕ್ರೀಡೆ ಬ್ರಿಟಿಷ್ ವಸ್ತುಸಂಗ್ರಹಾಯದಲ್ಲಿರುವ ಶಾಸನಗಳಲ್ಲಿ ಒಂದಾದ ಮೂರನೆಯ ಗೋವಿಂದನ ಶಾಸನವೊಂದರಲ್ಲಿ ಬೇಟೆಯ ವಿವರ ಪ್ರಸ್ತಾಪಿತವಾಗಿದೆ. ಬೇಟೆಗಾಗಿ ಪ್ರತ್ಯೇಕ ಕಾಡುಗಳು ಮೀಸಲಾಗಿರುತ್ತಿದ್ದವು. ಅಲ್ಲಿ ವಿವಿಧ ಪ್ರಾಣಿಗಳನ್ನು ಸಂರಕ್ಷಿಸಲು ತಕ್ಕ ಏರ್ಪಾಟುಗಳಿರುದ್ದವು. ಅಲ್ಲಿ ವಿವಿಧ ರೀತಿಯ ಪ್ರಾಣಿಗಳನ್ನು ಸಂರಕ್ಷಿಸಲು ತಕ್ಕ ಏರ್ಪಾಟುಗಳಿರುತ್ತಿದ್ದವು ರಾಜರಿಗೆ ಬೇಟೆಯಲ್ಲಿ ಸಹಾಯ ಮಾಡುವ ಬೇಟೆಗಾರರು ಅದರ ವಿವರಗಳಲ್ಲೆಲ್ಲ ಪ್ರವೀಣರಾಗಿರುತ್ತಿದ್ದರು. ಪಂಪನು ಬೇಟೆಗಾರರು ಪೆರ್ನಂಟೆ, ಕಿಱುಕೆಂಟೆ ದೀವದ ಬೇಂಟೆ ಪಂದಿವೇಂಟೆ ಮೊದಲಾದವುಗಳ ವೈವಿಧ್ಯವನ್ನೂ ಬೇಂಟೆನಾಯ್, ಬೇಂಟೆವಸದಸಂ ಬೇಂಟೆಯ ಲಕ್ಷಣಗಳನ್ನು ಬೇಂಟೆಯ ಬಿನದ, ಬೇಂಟೆಯ ತಂತ್ರ ಮತ್ತು ಪ್ರಯೋಜನಗಳನ್ನು ಚೆನ್ನಾಗಿ ಅರಿತವರಾಗಿದ್ದರು. ರಾಘವಾಂಕನು ವಿವಿಧ ಬೇಟೆಯ ಸ್ವರೂಪವನ್ನು ತಿಳಿಸಿದ್ದಾನೆ ಮಹಾಕಾವ್ಯದ ಹದಿನೆಂಟಂಗಗಳಲ್ಲಿ ಮೃಗಯಾವಿನೋದವು ಒಂದು ಅವಿಭಾಜ್ಯವಾದ ಅಂಗವಾಗಿ ಪರಿಗಣಿತವಾಗಿರುವುದು ಸಮಾಜದಲ್ಲಿ ಅದಕ್ಕಿರುವ ಸ್ಥಾನವನ್ನೂ ವಿಶದಪಡಿಸುತ್ತದೆ. ಇತರ ಕ್ರೀಡೆಗಳಲ್ಲಿ ಚೆಂಡಾಟ (ಕುದುರೆಯ ಸಹಾಯದಿಂದಾಡುವುದೂ ಸಹ)ರಾಸಕ್ರೀಡೆ, ಜಲಕ್ರೀಡೆ. ಮಲ್ಲಯುದ್ಧಗಳನ್ನು ಹೆಸರಿಸಬಹುದು.

ಮೃತರಾದವೀರರು, ಮಹಾಪುರುಷರು ಗುರುಗಳು ಸತಿಯರು ಇವರುಗಳ ನೆನಪಿನ ಸ್ಮಾರಕಗಳನ್ನು ಸ್ಥಾಪಿಸುವುದು ಕರ್ಣಾಟಕದ ಒಂದು ಪ್ರಧಾನ ಪದ್ಧತಿ. ವೀರಗಲ್ಲು ಮಾಸ್ತಿಕಲ್ಲು ಇವುಗಳಲ್ಲಿ ಪ್ರಧಾನವಾದುವು ಇವುಗಳಲ್ಲಿ ಕಪ್ಪೇ ಅರಭಟನ ವೀರಗಲ್ಲು ಪ್ರಥಮವಾದುದು ಆತ್ಮಾರ್ಪಣೆಯು ಕೂಡ ರೂಢಿಯಲ್ಲಿದ್ದಿತು. ಸುಮಾರು ಕ್ರಿ. ಶ. ೯೦೦ ಕೊಟ್ಟೂರು ಶಾಲಸನವು ಶೈವ ಗುರು ಶಂಭುವಿನ ಮರಣವನ್ನು ವರ್ಣಿಸಿದೆ ಸೋಮೇಶ್ವರ ಚಕ್ರವರ್ತಿಯ ಧಾರವಾಡ ಜಿಲ್ಲೆಯ ಕುರುವತ್ತಿಗ್ರಾಮದ ಶಾಸನದಲ್ಲಿ ತುಂಗಭದ್ರ ನದಿಯಲ್ಲಿ ಶಾಸ್ತ್ರೋಕ್ತವಾಗಿ ಮುಳುಗಿ ಪ್ರಣಾಪರಿ ಸಮಾಸ್ತಿ ಮಾಡಿದ ಮಹಾಯೋಗಿಯ ವಿಷಯ ಉಕ್ತವಾಗಿದೆ ಆಮರಣಾಂತ ಉಪವಾಸಮಾಡಿ ಸಲ್ಲೇಖನ ವ್ರತವನ್ನು ಆಚರಿಸಿದವರನೇಕರು ಗಂಗರಾಜನಾದ ಮಾರಸಿಂಹಬಂಕಾಪುರದಲ್ಲಿ ತನ್ನ ಗುರು ಅಜಿತಸೇನ ಸನ್ನಿಧಿಯಲ್ಲಿ ಈ ವ್ರತವನ್ನು ಕೈಗೊಂಡನು. ಶೂಲ ಬ್ರಹ್ಮ ಮತ್ತು ವೇಳವಕ್ಯ ವ್ರತಗಳನ್ನು ಜನರು ಸರ್ವೇ ಸಾಧರಣವಾಗಿ ಆಚರಿಸುತ್ತಿದ್ದರು. ಶಿವಮೊಗ್ಗ ಜಿಲ್ಲೆಯ ಕ್ರಿ. ಶ. ೧೦೬೦ ರ ಶಾಸನದಲ್ಲಿ ಎತ್ತರವಾದ ಸ್ಥಳ ಸಶೂಲದ ಮೊನೆಯ ಮೇಲೆ ಬಿದ್ದು ಮರಣ ಹೊಂದಿದ ವಿಷಯ ಉಲ್ಲೇಖವಾಗಿದೆ. ಕ್ರಿ, ಶ ೧೧೩೦ ಮತ್ತೊಂದು ಶಾಸನದಲ್ಲಿ ವೇಳ ಕಾರ್ಯವ್ರತದ ಪ್ರಸ್ತಾಪವಿದೆ. ಕದಂಬ ರಾಜನಾದ ತೈಲನೊಡನೆ ಬೊಪ್ಪಣನು ಈ ವ್ರತವನ್ನೂ ಸ್ವೀಕರಿಸಿದನು ನಾಲ್ವಡಿ ವೀರ ಸೋಮೇಶ್ವರನ ರಾಣಿ ಲಚ್ಚಲದೇವಿಯ ವೇಳೆಕಾರನಾದ ಬೋಕನು ಆಕೆಯೊಡನೆ ಮರಣ ಹೊಂದುವ ಪ್ರತಿಜ್ಞೆಕೊಟ್ಟು ಕ್ರಿ. ಶ. ೧೧೮೫ರಲ್ಲಿ ರಾಜನ ಆಳ್ವಿಕೆಯ ಐದನೆಯ ವರ್ಷದಲ್ಲಿ ಮೃತನಾದ. ಪತಿಯೊಡನೆ ಸತಿಯು ಸಹಗಮನ ಮಾಡುವುದು ಕರ್ಣಾಟಕದಲ್ಲಿ ಆದಿಕಾಲದಿಂದ ರೂಢಿಯಲ್ಲಿದೆ.

ಒಂದನೆಯ ರಾಚಮಲ್ಲನ ಮಂತ್ರಿ ಬೇಚರಾಜನು ಇಬ್ಬರು ಪತ್ನಿಯರಾದ ಬೈಲಿಯಕ್ಕ ಮತ್ತು ಮಲಪನಿಯಕ್ಕ ಎಂಬುವರು ಪತಿಯ ಶವದೊಡನೆ ಚಿತೆಯೇರಿದರು ಬೆಳತೂರಿನ ಕನ್ನಡಶಾಸನದಲ್ಲಿ ದೇಕಬ್ಬೆಯ ಸಹಗಮನ ಉಲ್ಲೇಖವಾಗಿದೆ. ರವಿವರ್ಮನ ಹೆಂಡತಿ ಪತಿಯ ಮರಣಾನಂತರ ಜತೆಯಲ್ಲಿ ಸಹಗಮನ ಮಹಾಸತಿಯೆನಿಸಿಕೊಂಡಳು ಈ ಪದ್ಧತಿಯು ವಿಜಯನಗರದ ಕಾಲದವರೆಗೂ ರೂಢಿಯಲ್ಲಿದ್ದು ದೇಶಿಯಾತ್ರಿಕರನ್ನು ಸ್ಪಷ್ಟವಾಗಿ ನಿರ್ದೇಶಿಸಿ ತಮ್ಮ ಅಸಮಾಧಾನವನ್ನು ಸೂಚಿಸಿದ್ದಾರೆ.

---

೧. ಭಾಷೆ ರಚನೆ ಬಳಕೆ (ಸೋಮಶೇಖರ ಗೌಡ) ಪು. ಸಂ. ೬೦

ಪ್ರಜೆಗಳು ದೊರೆಗಳಿಗಾಗಿ ಹಲವಾರು ಬಗೆಯಲ್ಲಿ ಸ್ವಾಮಿನಿಷ್ಠೆಯನ್ನು ವ್ಯಕ್ತಪಡಿಸುತ್ತಿದ್ದರು. ವಾಗ್ದಾನವನ್ನು ಪೂರ್ತಿಗೊಳಿಸುವುದು ದೊರೆಗಾಗಿ ಪ್ರಾಣಾರ್ಪಣೆ ಮಾಡುವುದು ತನ್ನ ಆಸ್ತಿಯನ್ನೆಲ್ಲ ಮುಡಿಪಾಗಿಡುವುದು -ಇದು ಆ ನಿಷ್ಠೆಯ ಬಾಹ್ಯಸ್ವರೂಪ ವೀರ ಬಲ್ಲಾಳನ ದಾನ ವಿಭಯಾಭ್ಯುದಯಕ್ಕಾಗಿಯೇ ಕುವರಲಕ್ಷ್ಮ ನು ತನ್ನ ಐಶ್ವರ್ಯವನ್ನೂ ಮುಡಿಪಾಗಿಟ್ಟನು. ಬೇಲೂರಿನ ೧೨೨೮ ರ ಶಾಸನದಲ್ಲಿ ಬಲ್ಲಾಳ ದೊರೆ ಇವನನ್ನು ಮಗನಂತೆ ಸಾಕಿದನೆಂದೂ ಇವನೂ ಅವನ ನೆಚ್ಚಿನ ಬಂಟನಂತೆ ನಡೆದುಕೊಂಡನೆಂದೂ ಉಕ್ತವಾಗಿದೆ. ಮಹಾವಿಷ್ಣುವಿಗೆ ಭೃತ್ಯನಾದ ಗರುಡನಂತೆ ವಿಷ್ಣುವರ್ಧನನಿಗೂ ಗರುಡರೆಂಬ ಅಂಗರಕ್ಷಕರಿದ್ದರು. ಚೊಕ್ಕ ಜಾತಿಮಯ್ಯ ಮುಂತಾದ ಬಿಟ್ಟಿಗನ ಗರುಡರಾಗಿ ಅವನೊಡನೆಯೇ ಅಸುನೀಗಿದರು.

ಸಾಮಾನ್ಯ ಜನರು ವಿಷಯ ಶಾಸನಗಳಿಂದ ವಿಶೇಷ ತಿಳಿಯದಿದ್ದರೂ ಅವರು ಸತ್ಯಸಂಧರು, ಸತ್ವಶೀಲರು, ಧರ್ಮನಿಷ್ಠರು, ಪರಾಕ್ರಮಶಾಲಿಗಳು ಮತ್ತು ದೃಢ ಸಂಕಲ್ಪ ಎಂದು ಭಾವಿಸಲು ಸಾಕಷ್ಟು ಆಧಾರಗಳು ಸಿಕ್ಕುತ್ತವೆ. ಹಾಗೆಯೇ ಅವರು ಉತ್ಸಾಹಶಾಲಿಗಳು ಉಪಕಾರಿಗಳಿಗೆ ಪ್ರತ್ಯುಪಕಾರಮಾಡುವವರು. ಅನ್ಯಾಯಕ್ಕೆ ಪ್ರತಿಯಾಗಿ ಸೇಡು ತೀರಿ.ಸಿಕೊಳ್ಳುವ ಮನೋಭಾವವುಳ್ಳನರು. ಅವರು 'ಸಾದುಗೆ ಸಾಧು, ಮಾಧುರ್ಯಂಗೆ ಮಾಧುರ್ಯಂ ಬಾಧಿಪ ಕಲಿಗೆ ಕಲಿಯುಗ 'ವಿಪರೀತನ್' ಆಗಿದ್ದರು. ಅವರು ಉಡುಗೆ ತೊಡುಗೆಗಳು ಬಹಳ ಸರಳವಾಗಿರುತ್ತಿದ್ದವು. ವಿದೇಶಿ ಯಾತ್ರಿಕರ ಅಭಿಪ್ರಾಯದಂತೆ ಬ್ರಾಹ್ಮಣರು ಶುದ್ಧ ಸರಳ ಮತ್ತು ಮಿತವ್ಯಯದ ಜೀವನ ಮತ್ತು ಉಡುಪುಳ್ಳವರು. ರಾಜರ ಮತ್ತು ಶ್ರೀಮಂತರ ವೇಷಭೂಷಣಗಳು ಅಸಾಮಾನ್ಯ ಬೆಲೆಯುಳ್ಳ ಮತ್ತು ಹರಳುಗಳಿಂದ ಕೂಡಿದ ಕುಚ್ಚುಗಳಿಂದ ಅಲಂಕೃತವಾದ ರತ್ನಕಚಿತವಾದ ಮಕುಟಗಳು ಅವರ ಶಿರೋಭೂಷಣವಾಗಿರುತ್ತಿತ್ತು. ಮೈಕೈಗಳನ್ನು ಕಡಗ, ಕಂಕಣತೋಳ್ಬಂದಿ ಉಂಗುರ, ರತ್ನಹಾರ ಮುಂತಾದವು ಅಲಂಕರಿಸಿದ್ದುವು. ಜನಸಮಾನ್ಯರ ಒಳ ಮತ್ತು ಹೊರ ಉಡುಪುಗಳು ಹೊಲಿಗೆಯನ್ನು ಕಾಣದ ವಸ್ತ್ರಗಳು ವರ್ಣದವುಗಳಿಗೆ ಮೆಚ್ಚಿಗೆ ಹೆಚ್ಚು . ಗಂಡಸರು ಒಂದು ತುಂಡು ವಸ್ತ್ರವನ್ನು ಸೊಂಟಕ್ಕೆ ಮತ್ತು ಕುಂಕುಳವಕೆಗೆ ಸುತ್ತಿಕೊಂಡು ಬಲತೋಳನ್ನು ಬಿಟ್ಟುಕೊಂಡಿರುವರು ಹೆಂಗಸರು ಬಲು ಉದ್ದವಾದುದನ್ನು ಎರಡು ತೋಳುಗಳ ಮೇಲೂ ತುಂಬ ಹೊದೆದುಕೊಂಡು ಅದು ಸಡಿಲವಾಗಿ ಕೆಳಗೆ ಜೋಲಾಡುವಂತೆ ಮೈತುಂಬಿ ಮುಚ್ಚಿಕೊಳ್ಳುವರು ನಡುತಲೆಯ ಬಿಟ್ಟುಕೊಳ್ಳುವರು. ಇತ್ತಿಂಗನ ಪ್ರಕಾರ ಉಚ್ಚ ವರ್ಗದವರು ಒಂದು ಜೊತೆ ಮೆತ್ತನೆಯ ವಸ್ತ್ರವನ್ನೂ ಧರಿಸುವರು. ಆ ಕಾಲದಲ್ಲಿ ಸ್ತ್ರೀ ಪುರುಷರು ಧರಿಸುತ್ತಿದ್ದ ನಾನಾ ತೆರನಾದ ಕರ್ಣಕುಂಡಲ. ಕೊರಳಿನ ಹಾರ, ತೋಳ ಬಂದಿ, ಕಡಗ, ಕಂಕಣ, ಒಡ್ಯಾಣ, ಉಂಗುರ ವಿಧವಿಧವಾದ ಕೆಳಲು, ತುರುಬು, ನಡುಪಟ್ಟಿಗಳು ಆಕಾಲದ ವಾಸ್ತುಶಿಲ್ಪಗಳಲ್ಲಿ ಪ್ರತಿಬಿಂಬಿತವಾಗಿದೆ. ಅರಮನೆಗಳು, ದೇವಾಲಯಗಳು ಮತ್ತು ಸಾರ್ವಜನಿಕ ಮಂದಿರಗಳನ್ನು ಬಿಟ್ಟು ಉಳಿದ ಮನೆಗಳು ಸಾಮಾನ್ಯವಾಗಿ ಮಣ್ಣಿನ ತಡಿಕೆಗೋಡೆಗಳಾಗಿದ್ದವು.

ಧಾರ್ಮಿಕ ಕ್ಷೇತ್ರಗಳಲ್ಲಿ ಆದಿಕಾಲದಿಂದ ಸಂಪೂರ್ಣ ಸಹಾನುಭೂತಿಯಿತ್ತು. ಆದಿಯಲ್ಲಿ ಶೈವ, ಬೌದ್ಧ ವೈದಿಕಮತಗಳು ಉತ್ತರಕಾಲದಲ್ಲಿ ಪರದೇಶದಿಂದ ಬಂದ ಕ್ರೈಸ್ತ, ಮಹಮ್ಮದೀಯ ಮತಗಳು ಕರ್ನಾಟಕದಲ್ಲಿ ಸೂಕ್ತ ಆಶ್ರಯವನ್ನು ಪಡೆದು ಸಮನ್ವಯ ದೃಷ್ಟಿಯಿಂದ ಬಾಳಿದುವು. ರಾಜರುಗಳು ತಾವು ಯಾವ ಪಂಥಾನುಯಾಯಿಗಳಾಗಿದ್ದರೂ ಎಲ್ಲ ಧರ್ಮಗಳಿಗೂ ಸಮನಾಗಿ ಆಶ್ರಯವಿತ್ತು ತಮ್ಮ 'ಚತುಸ್ಸಮಯ ಸಮುದ್ಧರಣ' ಎಂಬ ಬಿರುದನ್ನು ಸಾರ್ಥಕಪಡಿಸಿಕೊಂಡರು ಹೊಸದಾಗಿ ಬಂದು ಸೇರಿಸಿ ಧರ್ಮಗಳೂ ಇಲ್ಲಿಯ ಸನ್ನಿವೇಶಕ್ಕೆ ಹೊಂದಿಕೊಂಡು ಸಹಬಾಳ್ವೆಗೆ ಸಹಾಯಮಾಡಿದರು.



ವಿದ್ಯಾಭ್ಯಾಸವು ಅವಶ್ಯಕವಾಗಿದ್ದರೂ ಸಾರ್ವಜನಿಕರ ಆಸ್ತಿಯಾಗಿರಲಿಲ್ಲ. ಉಚ್ಚವರ್ಗದವರಿಗೆ ಮಾತ್ರ ಮೀಸಲಾಗಿತ್ತು. ಮಠ, ದೇವಸ್ಥಾನ,ಅಗ್ರಹಾರ ಬ್ರಹ್ಮಪುರಿಗಳು ವಿದ್ಯಾಭ್ಯಾಸದ ಹೊಣೆಯನ್ನು ಹೊತ್ತಿದ್ದವು. ಅಲ್ಲಿಯೂ ಉಚ್ಚಶಿಕ್ಷಣಕ್ಕೆ ಪ್ರಾಧಾನ್ಯವಿದ್ದಿತು. ಪ್ರಾಥಮಿಕ ವಿದ್ಯಾಭ್ಯಾಸದ ಸೌಲಭ್ಯ ಕೆಲವೆಡೆಗಳಲ್ಲಿ ಇವೆಯಾದರು ಅವುಗಳಿಗೆ ಗೌಣಸ್ಥಾನ. ವಿದ್ಯಾಸಂಸ್ಥೆಗಳು,

ರಾಜರಾಣಿಯರ, ಶ್ರೀಮಂತ ವರ್ಗದವರ ಕೊಡುಗೈ ದಾನಗಳಿಂದ ನಡೆಯುತ್ತಿದ್ದವು. ಅಲ್ಲಿಯೂ ವೇದಶಾಸ್ತ್ರ ಮೊದಲಾದ ವಿಶಿಷ್ಟ ವಿದ್ಯೆಗಳೇ ಪಠ್ಯ ವಿಷಯಗಳಾಗಿರುತ್ತಿದ್ದವು. ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರತ್ಯೇಕ ಏರ್ಪಾಟಿರಲಿಲ್ಲ. ಅದರಲ್ಲಿಯೂ ಸಾಮಾನ್ಯ ಸ್ತ್ರೀಯರಿಗೆ ವಿದ್ಯಾಭ್ಯಾಸಕ್ಕೆ ಸೌಕರ್ಯವಿದ್ದಂತೆ ಕಾಣುವುದಿಲ್ಲ. ವೃತ್ತಿ ಮತ್ತು ತಾಂತ್ರಿಕ ಶಿಕ್ಷಣಗಳು ವಂಶಪಾರಂಪರ್ಯ ಪ್ರತ್ಯೇಕ ಮನೆತನಗಳಲ್ಲಿ ಬೆಳೆದು ಬರುತ್ತಿದ್ದವು. ವಿದ್ಯಾಕೇಂದ್ರಗಳಲ್ಲಿ ಗುರುಗಳಿರುವ ಕಡೆ ಶಿಷ್ಯರು ವ್ಯಾಸಂಗಕ್ಕಾಗಿ ಹೋಗಬೇಕಾಗಿತ್ತೇ ವಿನಾ ಸಾರ್ವತ್ರಿಕ ವಿದ್ಯಾಶಾಲೆಗಳಿರಲಿಲ್ಲ.

ಕರ್ನಾಟಕದಲ್ಲಿ ಉಚ್ಚ ವರ್ಗದವರೆಲ್ಲ ಶಾಖಾಹಾರಿಗಳು. ಅಕ್ಕಿ, ಗೋಧಿ, ರಾಗಿ, ಜೋಳ-ಇವು ಅವರ ಸಾಮಾನ್ಯ ಆಹಾರಪದಾರ್ಥಗಳು. ಇತರರು ಮಾಂಸಾಹಾರಿಗಳಾಗಿರುವುದೂ ಉಂಟು. ಕುರಿ, ಕೋಳಿ, ಆಡು, ಹಂದಿ, ಜಿಂಕೆ ಮೊದಲಾದುವು ಮಾಂಸಾಹಾರಿಗಳ ಆಹಾರ ಸಾಧನಗಳು. ಹಣ್ಣುಹಂಪಲು, ಹಾಲು ಮೊಸರು. ತರಕಾರಿಗಳನ್ನು ಸಾಮಾನ್ಯವಾಗಿ ಎಲ್ಲರೂ ಉಪಯೋಗಿಸುತ್ತಿದ್ದರು. ಕಡಲತೀರದಲ್ಲಿ ಮತ್ಸ್ಯಹಾರಿಗಳು ವಿಶೇಷ ಈರುಳ್ಳಿಯನ್ನು ಎಲ್ಲರೂ ತ್ಯಾಜ್ಯಮಾಡಿದ್ದರು. ಎಲ್ಲ ವಿಧದ ಅಡುಗೆಯಲ್ಲಿಯೂ ಕನ್ನಡಿಗರು ಬಹು ಚತುರರು ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಉತ್ತಮ ಭೋಜನದ ವಿವರಗಳು ಸಿಕ್ಕುತ್ತವೆ.

ಜನರಲ್ಲಿ ವ್ಯವಸಾಯವೇ ಪ್ರಧಾನವಾದ ಉದ್ಯೋಗ ಅದಕ್ಕೆ ಸಂಬಂಧಪಟ್ಟ ಸಹಾಯಕೋದ್ಯಮಗಳು ಹಳ್ಳಿಗಳಲ್ಲಿ ಪರಂಪರೆಯಾಗಿ ಆಯಾಯ ಕುಟುಂಬಗಳಲ್ಲಿ ಬೆಳೆದು ಒಂದು ಪರಸ್ಪರ ಸಹಾನುಭೂತಿಯಿಂದ ಹಳ್ಳಿಯು ಸ್ವಯಂಪೂರ್ಣವಾಗಿ ವ್ಯವಹರಿಸಲು ಸಹಾಯವಾಗಿತ್ತು.

ಒಟ್ಟಿನಲ್ಲಿ ಕರ್ನಾಟಕದ ಜನಜೀವನವು ಧರ್ಮದ ಅಡಿಗಲ್ಲಿಗೆ ಸಿದ್ಧವಾಗಿ ನನ್ನಿ, ಚಾಗ, ಅಣು, ದಾನ ದಯೆ, ಸಹಾನುಭೂತಿಗಳು ಹಾಸುಹೊಕ್ಕಾಗಿ ಕೂಡಿಕೊಂಡು ಶಾಂತಜೀವನಕ್ಕೆ ಬಹುಮಟ್ಟಿಗೆ ಸಹಾಯಕವಾಗಿತ್ತು.

## ೬) ಸಂಶೋಧನೆ

ಕನ್ನಡ ಸಂಶೋಧನೆಯು ಕ್ರಮವಾಗಿ ಆಕರಶೋಧ, ಆಕರಗಳ ರೂಪನಿಷ್ಠ ಶೋಧ ಮತ್ತು ಆಕರಗಳ ಗುಣನಿಷ್ಠಶೋಧ, ಮಾರ್ಗಗಳನ್ನು ಕ್ರಮಿಸುತ್ತ ಸಾಗಿಬಂದಿದೆ. ಇವುಗಳಲ್ಲಿ ಸಂಶೋಧನೆಗೆ ಆಕರಶೋಧ ಮುಖ್ಯ ಮತ್ತು ಮೂಲಧನವೆನಿಸಿದೆ. ಹೀಗಾಗಿ ಅಪೂರ್ಣಸ್ಥಿತಿಯಲ್ಲಿ ಉಳಿದು ಬಿಟ್ಟಿರುವ ಆಕರಗಳ ಶೋಧ, ಪ್ರಕಟನೆ ಇನ್ನೂ ವೇಗವಾಗಿ ಕರ್ನಾಟಕದಲ್ಲಿ ಜರುಗಬೇಕಾಗಿದೆ. ಕೇಂದ್ರ ಮತ್ತು ರಾಜ್ಯ ಪುರಾತತ್ವ ಇಲಾಖೆಗಳು, ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯ, ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಗಳಂಥ ಸರಕಾರಿ ಸಂಸ್ಥೆಗಳು, ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು, ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘಗಳಂತಹ ಸಾರ್ವಜನಿಕ ಸಂಸ್ಥೆಗಳು, ಮೈಸೂರು, ಕರ್ನಾಟಕ, ಬೆಂಗಳೂರು, ಮಂಗಳೂರು, ಗುಲ್ಬರ್ಗಾ, ಕುವೆಂಪು ವಿಶ್ವವಿದ್ಯಾಲಯಗಳು, ಇತ್ತೀಚೆಗೆ ಅಸ್ತಿತ್ವಕ್ಕೆ ಬಂದ ಕನ್ನಡ ವಿಶ್ವವಿದ್ಯಾಲಯ - ಇದೆಲ್ಲಾ ಕರ್ನಾಟಕಕ್ಕೆ ಸಂಬಂಧಪಟ್ಟ ಆಕರಗಳ ರಕ್ಷಣೆ, ಸಂಗ್ರಹ, ಪರಿಶೀಲನೆ, ಪ್ರಕಟಣೆಗಳಿಗೆ ಆದ್ಯಗಮನ ಕೊಡಬೇಕಾಗಿದೆ. ಆಡಳಿತ ನಿಯಂತ್ರಣ ಮತ್ತು ಕ್ರೈಸ್ತಮತ ಪ್ರಸಾರ- ಇವುಗಳ ಸಾರ್ಥಕತೆಗಾಗಿ ಕನ್ನಡ ಭಾಷೆಯ ತಿಳಿವಳಿಕೆ, ಶಿಕ್ಷಣ ಪ್ರಸಾರಗಳು ಅವಶ್ಯವೆನಿಸಿದಾಗ, ಆಂಗ್ಲರು ಮೊದಲು ಭಾಷೆಗೆ ಸಂಬಂಧಿಸಿದ, ಬಹುಶಃ ವ್ಯಾಕರಣ ಇತ್ಯಾದಿ ಪೂರಕ ಗ್ರಂಥಗಳ ರಚನಾ ಚಟುವಟಿಕೆಗಳನ್ನು ಪ್ರಾರಂಭಿಸಿದರು. ಮಣ್ಣಿನಲ್ಲಿ ಬಿದ್ದ ಮಾಣಿಕ್ಯದಂತೆ ಕರ್ನಾಟಕದ ಹಾದಿಬೀದಿಗಳಲ್ಲಿ ಬಿದ್ದಿದ್ದ ಪ್ರಾಚೀನ ಅವಶೇಷ, ಶಾಸನ, ಹಸ್ತಪ್ರತಿಗಳಿಂದ ಆಕರ್ಷಿತರಾಗಿ, ಅವುಗಳ ಸಂಗ್ರಹ- ಅಧ್ಯಯನದತ್ತ ಧಾವಿಸಿದರು.

ಕರ್ನಾಟಕಕ್ಕೆ ೨೦೦೦ ವರ್ಷಗಳ ವೈವಿಧ್ಯಪೂರ್ಣ ಸಾಂಸ್ಕೃತಿಕ ಪರಂಪರೆ ಇದ್ದರೂ ಅದರ ಕ್ರಮಬದ್ಧ ಚರಿತ್ರೆಯ ಸ್ವರೂಪ ಅಜ್ಞಾತವಾಗಿದ್ದಿತು. "ಆನ್ ಎಸ್ಸೆ ಆನ್ ಕೆನರೀಚ್ ಲಿಟರೇಚರ್" ಎಂಬ ಲೇಖನದಲ್ಲಿ (೧೮೭೫) ಕಿಟೆಲ್ ಅವರು ಕೊಂಡಗುಳಿ

ಕೇಶಿರಾಜ ಮತ್ತು ಶಬ್ದಮಣಿದರ್ಪಣದ ಕೇಶಿರಾಜ ಒಬ್ಬರೇ, ಸೂಕ್ತಿ ಸುಧಾರ್ಣವಾದ ಮಲ್ಲಿಕಾರ್ಜುನ ಮತ್ತು ಮಲ್ಲಿಕಾರ್ಜುನ ಪಂಡಿತಾರಾಧ್ಯ ಒಬ್ಬನೇ. ಕರ್ನಾಟಕ ಶಬ್ದಮಂಜರಿಯ ವಿರಕ್ತ ತೋಂಟದಾರ್ಯ ಮತ್ತು ತೋಂಟದ ಸಿದ್ಧಲಿಂಗಯತಿ ಅಭಿನ್ನರು. ರುದ್ರಭಟ್ಟನೆಂದರೆ ಕಾಕತೀಯ ಪ್ರತಾಪರುದ್ರ. ನೇಮಿಚಂದ್ರನ ಕಾಲ ಕ್ರಿ. ಶ. ೮೭೩, ಆದಿವಂಥನು ತಮಿಳು ರಾಮಾಯಣದ ಕಂಬನಾಗಿರುವ ಸಾಧ್ಯತೆ ಇದೆ ಎಂದು ಮುಂತಾಗಿ ಬರೆದುದನ್ನು ನೋಡಿದರೆ ನಮ್ಮ ಚಾರಿತ್ರಿಕ ಅವಜ್ಞೆಯ ಪ್ರಮಾಣ ಅರ್ಥವಾಗುತ್ತದೆ.

ಕರ್ನಾಟಕಕ್ಕೆ ಸಂಬಂಧಪಟ್ಟ ಆಕರಸಾಮಗ್ರಿ ಅನೇಕ ಪ್ರಕಾರವಾಗಿದೆ. ಅಪಾರ ಸಂಖ್ಯೆಯಲ್ಲಿದೆ. ವಸ್ತು, ಭಾಷೆ, ಕ್ರಿಯೆ, ಜ್ಞಾನ-ಹೀಗೆ ಆಕರ ಸಂಗ್ರಹಕ್ಕೆ ನಾಲ್ಕು ನೆಲೆಗಳಿವೆ ಎಂದು ಕಂಡುಕೊಂಡು, ಈ ಕ್ಷೇತ್ರದಲ್ಲಿ ದುಡಿಯಲು ಅಂದಿನ ವಿದ್ವಾಂಸರು ಪ್ರಾರಂಭಿಸಿದುದು ಒಂದು ಶುಭಾರಂಭವೆಂದೇ ಹೇಳಬೇಕು. ಹಸ್ತಪ್ರತಿ, ಶಾಸನ, ವಿಗ್ರಹ, ಕಟ್ಟಡ, ನಾಣ್ಯಗಳೆನ್ನಲ್ಲದೆ ಶಿಲೆ, ಲೋಹ, ಕಾಗದ ಇತ್ಯಾದಿ ಮಾಧ್ಯಮದ ಕಲಾಕೃತಿಗಳನ್ನು, ಅವುಗಳಲ್ಲಿಯೇ ಲಲಿತಕಲೆ, ಪ್ರಯೋಜಕ ಕಲೆಗಳಿಗೆ ಸಂಬಂಧಿಸಿದ ವಸ್ತುಗಳನ್ನು, ವೈಯುಕ್ತಿಕ-ಸಾಂಸ್ಥಿಕ ಮಟ್ಟದಲ್ಲಿ ಸಂಗ್ರಹಿಸುವುದು ನಿಧಾನವಾಗಿಯಾದರೂ ಅಂದು ನಡೆಯಿತು. ಈ ಕೆಲಸ ಮಾಡಿದ ಪಾಶ್ಚಿಮಾತ್ಯರಲ್ಲಿ ಕರ್ನಲ್ ಮೆಕೆಂಜೆ, ವಾಲ್ಟರ್ ಇಲಿಯಟ್, ಬಿ. ಎಲ್. ರೈಸ್, ಮತ್ತು ಕಿಟೆಲ್ ಮುಖ್ಯರು. ಇವರನ್ನು ಹೊರಗೆ ಇಟ್ಟರೆ ಈ ಅವಧಿ ಬಂಜರು ಕಾಣುವುದೆನ್ನುವಷ್ಟರ ಮಟ್ಟಿಗೆ ಇವರು ರಾಶಿ- ರಾಶಿಯಾಗಿ ಆಕರ ಸಾಮಾಗ್ರಿಯನ್ನು ಸಂಗ್ರಹಿಸಿದರು. ಕೆಲವೊಮ್ಮೆ ಲೇಖನ-ಗ್ರಂಥರೂಪಗಳಲ್ಲಿ ಆ ಸಂಗ್ರಹವನ್ನು ಪ್ರಕಟಿಸಿದರು. ಇವರಲ್ಲಿ ಕರ್ನಾಟಕಕ್ಕೆ ಸಂಬಂಧಪಟ್ಟ ಆಕರ ಸಾಮಗ್ರಿಗಳ ಸಂಗ್ರಹ ಕಾರ್ಯವನ್ನು ಕೈಗೊಂಡ ಪ್ರಥಮ ವ್ಯಕ್ತಿ, ೧೭೮೩ರಲ್ಲಿ ಭಾರತಕ್ಕೆ ಬಂದ ಕರ್ನಲ್ ಮೆಕೆಂಜೆ.

ಮದ್ರಾಸ್ ಸಿವಿಲ್ ಸರ್ವೀಸಿನಲ್ಲಿದ್ದ ಸರ್ ವಾಲ್ಟರ್ ಇಲಿಯಟ್ ಮುಂಬೈ ಕರ್ನಾಟಕ, ನಿಜಾಮ ಕರ್ನಾಟಕದ ಪಶ್ಚಿಮ ಭಾಗ, ಹಳೆಯ ಮೈಸೂರು ಪ್ರಾಂತ್ಯದ ಉತ್ತರ ಭಾಗಗಳಿಂದ ೧೩೦೦ ಶಾಸನಗಳನ್ನು ಸಂಗ್ರಹಿಸಿ, ಇವುಗಳಲ್ಲಿ ೫೯೫ನ್ನು ಆಯ್ದು "Karnatak Desh Inscrptions" ಹೆಸರಿನ ಕೈಬರಹದ ಪ್ರತಿಗಳನ್ನು ಸಿದ್ಧಪಡಿಸಿದನು.

ಬಿ. ಎಲ್. ರೈಸ್ ಮೈಸೂರಿನ ಪುರಾತತ್ವ ಇಲಾಖೆಯ (೧೮೮೪) ಡೈರೆಕ್ಟರ್ ಆಗಿ ಹಳೆಯ ಮೈಸೂರು ಪ್ರದೇಶದ ೯ ಜಿಲ್ಲೆಗಳ ೮೮೬೯ ಶಾಸನಗಳನ್ನು ಸಂಗ್ರಹಿಸಿ ಎಪಿಗ್ರಫಿಯ ಕರ್ನಾಟಕ ಹೆಸರಿನಲ್ಲಿ ೧೨ ಸಂಪುಟ ಪ್ರತ್ಯೇಕವಾಗಿ ಇಟ್ಟನು.

ರಾಜಕೀಯ ಚರಿತ್ರೆಯನ್ನು ಬರೆಯುವ ಕೆಲಸವನ್ನೂ ಮಾಡಿದನು. ಇವನ ಇನ್ನೊಂದು ಸಾಧನೆಯೆಂದರೆ "ಬಿಬ್ಲಿಯಾಥಿಕಾ ಕರ್ನಾಟಕ" ಮಾಲೆಯ ಅಡಿಯಲ್ಲಿ ಪ್ರಾಚೀನ ಗ್ರಂಥಗಳಾದ ಪಂಪಭಾರತ, ಆದಿಪುರಾಣ, ಪಂಪರಾಮಾಯಣ, ಕಾವ್ಯವಲೋಚನ, ಭಾಷಾಭೂಷಣ, ಕವಿರಾಜಮಾರ್ಗಗಳನ್ನು ಪ್ರಕಟಿಸಿದುದು. ಹೀಗೆ ಶಾಸನ, ಸಾಹಿತ್ಯ ಕೃತಿಗಳ ಪ್ರಕಟಣೆಯಿಂದಾಗಿ ಇವನಿಂದ ಸವ್ಯಸಾಚಿ ಕೊಡುಗೆ ಕನ್ನಡಕ್ಕೆ ಸಂದಿತು.

ಈ ಸಂದರ್ಭದಲ್ಲಿ ಜಿ. ಎಫ್. ಫ್ಲೀಟ್ ಅವರು ಕರ್ನಾಟಕಕ್ಕೆ ಸಂಬಂಧಪಟ್ಟ ಅನೇಕ ಶಾಸನಗಳನ್ನು 'ಇಂಡಿಯನ್ ಆಂಟಿಕ್ವೆರಿ' ಪತ್ರಿಕೆಯ ಮೂಲಕ ಪ್ರಕಟಿಸಿದುದಲ್ಲದೆ ಉತ್ತಮೋತ್ತಮ ಲೇಖನಗಳನ್ನು ಬರೆದು, ಚರಿತ್ರೆಯ ಅಸ್ಪಷ್ಟ ಅಂಶಗಳನ್ನು ಸ್ಪಷ್ಟಪಡಿಸಿದರು. ಇವರ 'ಡೈನಾಸ್ಟೀಸ್ ಆಫ್ ಕೆನರೀಚ್ ಡಿಸ್ಟ್ರಿಕ್ಟ್' ಗ್ರಂಥ ಒಂದು ಕಾಲಕ್ಕೆ ಬೆಲೆಯುಳ್ಳ ಆಕರಗ್ರಂಥವಾಗಿ ಪರಿಣಮಿಸಿದ್ದಿತು. ಮೋಂಗ್ಲಿಂಗ್ ಅವರ ಕಾಣಿಕೆ ಇನ್ನೊಂದು ಬಗೆಯದು. ಮಂಗಳೂರಿನ ಬಾನೆಲ್ ಮಿಶನ್ ಸಂಸ್ಥೆಯ ಮೂಲಕ ಕುಮಾರವ್ಯಾಸ ಭಾರತ, ಬಸವಪುರಾಣ, ಚೆನ್ನಬಸವ ಪುರಾಣಗಳಂಥ ಪ್ರಾಚೀನ ಮಹತ್ವದ ಕೃತಿಗಳನ್ನು ಕಲ್ಲಚ್ಚಿನಲ್ಲಿ ಪ್ರಕಟಿಸುವ ಮೂಲಕ ಆಕರ ಸಾಮಗ್ರಿಯ ಸಂಪತ್ತನ್ನು ಹೆಚ್ಚಿಸಿದರು.

---

೧. ಕನ್ನಡ ಸಂಶೋಧನಾ ಶಾಸ್ತ್ರ (ಡಾ. ಎಂ. ಎಂ. ಕಲ್ಬುರ್ಗಿ) ಪು. ಸಂ. ೮೨

ರೀವ್, ಗೆರೆಟ್, ಝಿಗ್ಲರ್ ಮೊದಲಾದವರು ಕೋಶ, ವ್ಯಾಕರಣಗಳನ್ನು ರಚಿಸಿ ವಿದ್ವತ್ತಿಗೆ ಇನ್ನೊಂದು ಆಯೋಮಾವನ್ನು ಜೋಡಿಸಿದರು. ಈ ದಿಸೆಯಲ್ಲಿ ನಡೆದ ಅವರ ಕೋಶರಚನೆ, ಶಬ್ದಮಣಿದರ್ಪಣ ಸಂಪಾದನೆ, ಎ-ಗ್ರಾಮರ್ ಆಫ್ ಕೆನರೀಚ್ ಲ್ಯಾಂಗ್ವೇಜ್ ಹೆಸರಿನ ವ್ಯಾಕರಣ - ಇವು ಉತ್ತಮ ಕೊಡುಗೆಗಳಾಗಿವೆ. ನಾಗವರ್ಮನ ಛಂದೋಂಬುಧಿಯ ಪರಿಷ್ಕರಣ-ಪ್ರಕಟಣೆ ಕಿಟೆಲ್ ಅವರ ಇನ್ನೊಂದು ಕೊಡುಗೆ. ಈ ಸಂದರ್ಭದಲ್ಲಿ ಸಂಶೋಧನೆಯ ವಿಧಾನದಲ್ಲಿಯೂ ಹೊಸ ದೃಷ್ಟಿಕೋನ ಮೂಡಬೇಕಾಗಿದೆ. ಘಟನೆ ಮತ್ತು ಸಂಸ್ಕೃತಿಗಳ ರೂಪನಿಷ್ಠ ಸಂಶೋಧನೆ ಇಂದು ಗುಣನಿಷ್ಠ ಸಂಶೋಧನೆಗೆ ಹೊರಳಿದೆ.

ಇದು ವ್ಯಾಖ್ಯಾನ-ಮುಖಿ ವಿಧಾನದಿಂದ ಮಾತ್ರ ಸಾಧ್ಯ. ಇಲ್ಲಿ ನಡೆಯುವುದು ವಿಷಯದ ರೂಪಶೋಧವಲ್ಲ, ಅರ್ಥಶೋಧ. ಇದು ಘಟನೆ, ಸಂಸ್ಕೃತಿ (ಸಂಪ್ರದಾಯ)ಗಳ ಹಿಂದಿರುವ ಕಾರಣಗಳನ್ನು, ಅವುಗಳ ಪ್ರಭಾವಗಳನ್ನು ಕಂಡು ಹಿಡಿಯುವುದಾಗಿದೆ. ಒಂದು ಅರ್ಥದಲ್ಲಿ ಗತಕಾಲದ ಸ್ಥೂಲವನ್ನು ಸೂಕ್ಷ್ಮತನುಗಳಿಗಿಂತ ಕಾರಣ ತನದ ಶೋಧವಾಗಿದೆ. ಈ ಬಗೆಯ ಶೋಧಕ್ಕೆ ಜನಪರ ಧೋರಣೆ ಅನುಸರಿಸಿದ್ದಾರೆಯೇ ಹೊರತು, ಅನೇಕ ಬಿಡಿ ಘಟನೆಗಳನ್ನಲ್ಲ. ಇಡೀ ಸಂಸ್ಕೃತಿಯ ಮನಸ್ಸನ್ನೇ ಚಿತ್ರಿಸಬಹುದಾಗಿದೆ. ವ್ಯಾಖ್ಯಾನಮುಖಿ ಸಂಶೋಧನೆ ಆಧಾರಗಳನ್ನು ಆಶ್ರಯಿಸಿದರೂ ವ್ಯಾಖ್ಯಾನ ಮಾಡುವವನ ಅಭಿಪ್ರಾಯವೂ ಇಲ್ಲಿ ಸೇರಿಕೊಳ್ಳುವುದರಿಂದ ಸತ್ಯ ವಿಪರ್ಯಾಸಗೊಳ್ಳುವ ಸಂಭವವೂ ಉಂಟು, ವಿವಾದಾತ್ಮಕವಾಗುವುದೂ ಉಂಟು.

ಈ ಬಹುಮುಖ ಅಧ್ಯಯನದಂತೆ ಈಗಾಗಲೇ ಆರಂಭವಾಗಿರುವ ಬಹುಶಿಸ್ತೀಯ ಅಧ್ಯಯನದ ಕಡೆಗೆ ವಿದ್ವಾಂಸರು ಹೆಚ್ಚು ಗಮನ ಕೊಡುವುದು ಅವಶ್ಯವಿದೆ. ಸಂಶೋಧನೆಯ ವಿಷಯಗಳು ಬಾಹ್ಯದಲ್ಲಿ ಬೇರೆ -ಬೇರೆ ಕಂಡರೂ ಆಂತರ್ಯದಲ್ಲಿ ಪರಸ್ಪರ ಸಂಬಂಧ ಹೊಂದಿರುತ್ತದೆ. ಸಂಶೋಧನೆಗೆ ಮುನ್ನ ಆ ವಿಷಯಕ್ಕೆ ಸಂಬಂಧಪಟ್ಟವು ಯಾವ-ಯಾವ ಅಂಶಗಳೆಂಬುದನ್ನು ಪಟ್ಟಿಮಾಡಿ, ಅವೆಲ್ಲ ಅಂಶಗಳನ್ನು ಬಿಚ್ಚಿ ನೋಡುವ, ಅವುಗಳ ಅಂತರ ಸಂಬಂಧವನ್ನು ಕಂಡು ಹಿಡಿಯುವ ಕೆಲಸ ಇಲ್ಲಿ ನಡೆಯಬೇಕಾಗುತ್ತದೆ.

ಹೊಸ ಶೋಧ ಮೂಡುವಷ್ಟೆ ಮುಖ್ಯವಾದುದು, ಆಕರಗಳು ಸಿಗುತ್ತಹೋದಂತೆ ಹಳೆಯ ಶೋಧಗಳನ್ನು ತಿದ್ದುತ್ತ ಹೋಗುವುದು. ಹೆಬ್ಬೂರು ಶಾಸನದಿಂದಾಗಿ ದುರ್ವಿನೀತನು ಪೂಜ್ಯಪಾದನ ಶಿಷ್ಯನೆಂದು ಸ್ಥಾಪಿತವಾಗಿದ್ದ ಶೋಧ, ಗುಮ್ಮರಡ್ಡಿಪುರ ಶಾಸನಶೋಧದಿಂದ ಬಿದ್ದುಹೋದರೂ ಹಳೆಯ ಅಭಿಪ್ರಾಯವನ್ನೇ ನಾವು ಪುನರುಚ್ಚರಿಸುತ್ತಲಿದ್ದೇವೆ.

ಕರ್ನಾಟಕ ಕವಿಚರಿತೆ ಈ ದೃಷ್ಟಿಯಿಂದ ಬಹಳಷ್ಟು ತಿದ್ದುಪಡಿಗೆ ಗುರಿಯಾಗಬೇಕಿದೆ. ಈ ಹಿಂದೆ ಸಂಶೋಧನೆಯ ಹೊಸದರಲ್ಲಿ ಪ್ರತಿಷ್ಠಿತರ ಪುರಾಣಗಳನ್ನೂ, ಸಾಮಾನ್ಯರ ಐತಿಹ್ಯಗಳನ್ನೂ, ಆಕರ ಸಾಮಗ್ರಿಯಾಗಿ ಕಣ್ಮುಮುಚ್ಚಿ ಬಳಸಿಕೊಳ್ಳುವ ಎರಡು ತಪ್ಪುಗಳು ಘಟಿಸಿದವು.

ಮೈಲಾರನನ್ನು ಕುರಿತ ಮೈಲಾರಿ ಮಾರ್ತಾಂಡನ ಕಥೆ, ಶ್ರವಣಬೆಳ್ಗೊಳದ ಗುಳ್ಳೇಕಾಯಿ ಅಜ್ಜಿ ಕಥೆಗಳು ಇದಕ್ಕೆ ಉದಾಹರಣೆಯೆನಿಸಿವೆ.

ಈಗ ಸಂಶೋಧನ ಕ್ಷೇತ್ರ ಕೇವಲ ವಿದ್ವಾಂಸರಿಗೆ ಸಂಬಂಧಪಟ್ಟ ಚಟುವಟಿಕೆ ಎಂಬ ಹಣೆಪಟ್ಟಿ ಹಚ್ಚಿಕೊಂಡಿದೆ. ವಿದ್ವಾಂಸರಿಂದ ವಿದ್ವಾಸಂರಿಗೆ ಅಥವಾ ಪುಸ್ತಕದಿಂದ ಪುಸ್ತಕಕ್ಕೆ ಜಾರುತ್ತ ನಡೆದಿರುವ ಅದರ ಸ್ಥಿತಿ ಆಸ್ಥಾನವಿದ್ವಾಂಸರ ಮಧ್ಯದ ಚಂಪೂವಿನಂತಾಗಿದೆ. ಮುಕ್ತ ಸಂವಹನಕ್ಕೆ ಮುಖ ಕೊಡದ ಕಾರಣ ಅದು ಹೊಸ ಹೊಸ ಸಾಧ್ಯತೆಗಳನ್ನು ಇಂದಿಗೂ ತೋರಿಸುತ್ತಿಲ್ಲ. ಇದಕ್ಕೆ ಬದಲು "ಸಾಮಾಜಿಕ ಬದಲಾವಣೆಯಲ್ಲಿ ಸಂಶೋಧನೆಯ ಪಾತ್ರ"ವೇನೆಂಬುದನ್ನು ಅರ್ಥಮಾಡಿಕೊಂಡು ಬಹುಜನ ಸಹೃದಯರನ್ನು ಒಳಗೊಳ್ಳುವ ಪರಿಸರವನ್ನು ಅದು ನಿರ್ಮಿಸಿಕೊಳ್ಳಬೇಕಾಗಿದೆ.

ಆಗ ಸಂಶೋಧನೆ-ಸಹೃದಯರು ಮುಖಾಮುಖಿಯಾಗುತ್ತಾರೆ. ಸಂಶೋಧನಾ ಕ್ಷೇತ್ರ ಜನರೊಂದಿಗೆ ಪ್ರತಿಕ್ರಿಯಿಸುತ್ತ

ಜೀವಂತವಾಗಿ ಬೆಳೆಯುತ್ತದೆ ಮತ್ತು ಸಂಶೋಧನೆಯನ್ನು ಗ್ರಹಿಸುವ ಸರಿಯಾದ ದೃಷ್ಟಿಕೋನವೂ ಜನರಲ್ಲಿ ಮೂಡುತ್ತದೆ.

ಇಂದಿನದು ಯಂತ್ರಯುಗ. ಯಂತ್ರದ ವ್ಯವಸ್ಥೆ-ವೇಗಗಳಿಗೆ ಹೊಂದಿಕೊಳ್ಳದಿದ್ದರೆ ನಿತ್ಯಜೀವನ ಸಾಧ್ಯವೇ ಇಲ್ಲವೆಂಬ ಪರಿಸ್ಥಿತಿ ಈಗ ನಿರ್ಮಾಣವಾಗಿವೆ. ಅಷ್ಟರಮಟ್ಟಿಗೆ ಯಂತ್ರ ಜಗತ್ತು ನಮ್ಮ ಚಟುವಟಿಕೆಗಳನ್ನು ನಿಯಂತ್ರಿಸುತ್ತಿದೆ. ಬೌದ್ಧಿಕ ಜೀವನದ ಭಾಗವಾಗಿರುವ ಸಂಶೋಧನೆಯೂ ಈ ಮಾತಿಗೆ ಅಪವಾದವಾಗಲಾರದು, ಅಪವಾದವಾಗಬಾರದು. ಅಂದರೆ ಸಂಶೋಧನೆ ಇಂದು ಯಂತ್ರಗಳನ್ನು ಅವಲಂಬಿಸಿ ಹೆಜ್ಜೆ ಹಾಕುವುದು ಅನಿವಾರ್ಯವಾಗಿದೆ. ಹೀಗೆ ಮಾಡದಿದ್ದರೆ ಇಂಥ ಅವಕಾಶಗಳನ್ನು ಬಳಸಿಕೊಳ್ಳುತ್ತಲಿರುವ ಸಂಶೋಧಕರಿಗಿಂತ ನಾವು ಖಂಡಿತ ಹಿಂದೆ ಬೀಳುತ್ತೇವೆ. ಇಲ್ಲಿ ಯಂತ್ರ ಬಳಕೆಯ ಪ್ರಯೋಜನ ಎರಡು ತೆರನಾಗಿದೆ.

ಶ್ರಮ-ಸಮಯಗಳ ಉಳಿತಾಯದ ದೃಷ್ಟಿಯಿಂದ ಗ್ರಂಥಾಲಯ ಸಂದರ್ಶನ, ಕ್ಷೇತ್ರಕಾರ್ಯ ನಿರ್ವಹಣೆಗಳಿಗಾಗಿ ವಾಹನದ ಅನುಕೂಲತೆ, ಕ್ಯಾಮರಾ ಬಳಕೆ, ಬೆರಳಚ್ಚು-ಝುರಾಕ್ಸ್ ಯಂತ್ರಗಳ ಸಹಾಯ ಮೊದಲಾದವು ಅವಶ್ಯಬೇಕು. ಕಂಪ್ಯೂಟರ್ ಬಳಕೆ ಕನ್ನಡದಲ್ಲಿ ಸಾಧ್ಯವಾದರೆ ನಾಳೆ ಮುಗಿಯುವ ಸಂಶೋಧನೆ ಇಂದು, ಇಂದು ಮುಗಿಯುವ ಸಂಶೋಧನ ಈ ಕ್ಷಣ ಮುಗಿಯುತ್ತದೆ.

ಇಂದು ಸಂಶೋಧಕ ಎಷ್ಟೇ ಶ್ರದ್ಧಾವಂತನಾಗಿದ್ದರೂ ಅವನ ಜೀವನ ತುಂಬ ಸಂಕೀರ್ಣವಾಗಿದೆ. ಇದರಿಂದ ಬಿಡಿಸಿಕೊಂಡು ಸಂಶೋಧನೆಗಾಗಿ ಓಡಾಡುವುದೇ ದೊಡ್ಡ ತೊಂದರೆ. ಬಿಡಿಸಿಕೊಂಡರೂ ಸೌಕರ್ಯಗಳಿಲ್ಲದಿದ್ದರೆ ಕೈಕಾಲು ಮುರಿದುಕೊಂಡ ಪರಿಸ್ಥಿತಿ ನಿರ್ಮಾಣವಾಗುತ್ತದೆ.

ಸಂಶೋಧನೆಯ ಪ್ರಸಾರ ಮತ್ತು ಪ್ರಗತಿಗಾಗಿ ಪತ್ರಿಕೆ ಇತ್ಯಾದಿ ಪ್ರಸಾರ ಮಾಧ್ಯಮಗಳು ಹೆಚ್ಚು ಸಂಖ್ಯೆಯಲ್ಲಿ ದುಡಿಯಬೇಕಾಗಿದೆ. ಈ ದೃಷ್ಟಿಯಿಂದ ಕನ್ನಡ ಸಂಶೋಧನೆ ಒಂದು ದುರ್ದೈವಿಜ್ಞಾನ ಶಾಲೆಯೆಂದೇ ಹೇಳಬೇಕು. ಸಾರ್ವಜನಿಕ ವ್ಯಕ್ತಿ-ಸಂಸ್ಥೆಗಳು ಪ್ರಕಟಿಸಲು ಮುಂದೆ ಬರುವುದು ಜನಪ್ರಿಯ ಪತ್ರಿಕೆಗಳನ್ನೇ ಹೊರತು ಸಂಶೋಧನೆ ಪತ್ರಿಕೆಗಳನ್ನಲ್ಲ. ತಮ್ಮ ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸುವುದು ಜನಪ್ರಿಯ ಲೇಖನಗಳನ್ನೇ ಹೊರತು, ಸಂಶೋಧನ ಲೇಖನಗಳನ್ನಲ್ಲ. ಆದುದರಿಂದ ಸರಕಾರಿ ಸಂಸ್ಥೆಗಳೇ ಇಂಥ ಪತ್ರಿಕೆಗಳನ್ನು ನಡೆಸುವುದು ಅನಿವಾರ್ಯವಾಗಿದೆ. ಈ ದೃಷ್ಟಿಯಿಂದ ಮೈಸೂರು, ಕರ್ನಾಟಕ, ಬೆಂಗಳೂರು ವಿಶ್ವವಿದ್ಯಾಲಯಗಳು ಪ್ರಬುದ್ಧ ಕರ್ನಾಟಕ, ಕರ್ನಾಟಕ ಭಾರತಿ, ಸಾಧನೆ ಹೆಸರಿನ ಪತ್ರಿಕೆಗಳನ್ನು ಪ್ರಕಟಿಸುತ್ತಿದ್ದರೂ ಇತ್ತೀಚಿನ ದಿನದಲ್ಲಿ ಇವು ತುಂಬ ಅನಿಯತವಾಗಿ ಹೊರಬರುತ್ತಲಿವೆ.

ಗ್ರಂಥ ಪ್ರಕಟನೆಗೆ ಬಂದರೆ ಇಲ್ಲಿಯೂ ಸಾರ್ವಜನಿಕ ಪ್ರಕಾಶಕರಿಗಿಂತ ವಿಶ್ವವಿದ್ಯಾಲಯ ಮತ್ತು ಪರಿಷತ್ತುಗಳಂಥ ಸಂಸ್ಥೆಗಳೇ ಈ ಕಾರ್ಯ ಮಾಡಬೇಕಾಗುತ್ತದೆ.

ಕರ್ನಾಟಕದಲ್ಲಿ ಸಾಹಿತ್ಯ ಪರಿಷತ್ತು, ವಿಶ್ವವಿದ್ಯಾಲಯಗಳನ್ನು ಬಿಟ್ಟರೆ ಸಾಹಿತ್ಯಕ ಚಟುವಟಿಕೆಗಳಿಗಾಗಿ ಅಸ್ತಿತ್ವಕ್ಕೆ ಬಂದ ಸಂಸ್ಥೆಗಳೆಂದರೆ ಸಾಹಿತ್ಯ ಅಕಾಡೆಮಿ ಮತ್ತು ಕನ್ನಡ-ಸಂಸ್ಕೃತಿ ಇಲಾಖೆ, ಸಾಹಿತ್ಯ ಅಕಾಡೆಮಿ ಹೀಗೆ ಸೃಜನ- ಸೃಜನೇತರ ಎಂದು ಎರಡು ಭಾಗಮಾಡಿ ಸೃಜನವನ್ನು ಮಗನಂತೆ, ಸೃಜನೇತರವನ್ನು ಮಲಮಗನಂತೆ ನೋಡುತ್ತ ಬಂದಿದೆ.

ಕನ್ನಡ ನಾಲ್ಕುಕೋಟಿ ಜನರ ಜೀವನಾಡಿ. ಸಾಹಿತ್ಯ, ಸಂಸ್ಕೃತಿ, ಕಲೆ, ವಿಜ್ಞಾನ, ಆಡಳಿತ ಈ ಮುಂತಾಗಿ ಇಂದು ಕನ್ನಡ, ದ್ರಾವಿಡ ಭಾಷೆಗಳಲ್ಲಿ ಗಣ್ಯಸ್ಥಾನಗ್ರಾಹಿಯಾಗಿದೆ.

ಇದಕ್ಕೆ ತನ್ನ ಸೋದರ ಭಾಷೆಯಾದ ತಮಿಳಿನಷ್ಟು ಜನರ ನಿಷ್ಠೆ, ಅಭಿಮಾನ, ರಾಜಕೀಯ ಬೆಂಬಲ ಇಲ್ಲದಿದ್ದರೂ ಇದರ ಪ್ರಗತಿ ನಿರಾಶದಾಯಕವಾಗಿಲ್ಲ ಎಂಬುದು ಸಮಾಧಾನಕರ ಸಂಗತಿ. ಇತಿಹಾಸದ ಪುಟಗಳನ್ನು ತಿರುವಿದರೆ ಕನ್ನಡ ಭಾಷೆ ಎಂದೂ ನಿಂತ ನೀರಾಗಿಲ್ಲದಿದ್ದುದು ಗೋಚರಿಸುತ್ತದೆ. ಅದರ ಅವಸ್ಥಾಂತರಗಳು ಇದಕ್ಕೆ ನಿದರ್ಶನವಾಗಿ ನಿಲ್ಲುತ್ತವೆ. ಹಳಗನ್ನಡ-ಹೊಸಗನ್ನಡ ಎಂಬೀ ವಿಭಾಗ ಕ್ರಮ ಇದಕ್ಕೆ ಪುಷ್ಟಿ ನೀಡುತ್ತದೆ.

ಕನ್ನಡ ಸಾಹಿತ್ಯ ಸಂಶೋಧನೆಯೇ ಭಾಷಣ ಸಂಶೋಧನೆ ಎಂಬ ಗ್ರಹಿಕೆ ಉಳಿದುಕೊಂಡಿದೆ. ಸಂಶೋಧನೆ ಈ ಶತಮಾನದ ಪ್ರಾರಂಭದಲ್ಲಿ ಸಾಹಿತ್ಯ ವಲಯದ ಕೆಲವು ಹಿರಿಯರ ಹವ್ಯಾಸ ಮಾತ್ರವಾಗಿತ್ತು. ಈಗ ಸಂಶೋಧನೆಯ ದಿಕ್ಕುದಿಗಂತಗಳು ವಿಸ್ತರಿಸಿವೆ. ಸಂಶೋಧನೆ ಒಂದು ಶಿಸ್ತಾಗಿ ರೂಪು ತಳದಿದೆ. ಎಲ್ಲ ವಿಷಯಗಳನ್ನು ತನ್ನ ತೆಕ್ಕೆಗೆ ತೆಗೆದುಕೊಂಡಿದೆ. ಭಾಷಾವಿಜ್ಞಾನ ಇಪ್ಪತ್ತನೆಯ ಶತಮಾನದ ಅಂತ್ಯದಲ್ಲಿ ಬಂದ ಗಣ್ಯ ಅಂತರಾಷ್ಟ್ರೀಯ ವ್ಯಾಪ್ತಿಯ ಶಿಸ್ತಾಗಿ ಕುಡಿಯೊಡೆದಿದೆ. ಯಾವುದೇ ಭಾಷೆಯನ್ನು ವೈಜ್ಞಾನಿಕ ನೆಲೆಗಟ್ಟಿನಲ್ಲಿ ಇಂದು ಅಧ್ಯಯನಕ್ಕೆ ಸಂಶೋಧನೆಗೆ ಒಳಗು ಮಾಡಬಹುದಾಗಿದೆ.

ಭಾಷೆಯ ಅಧ್ಯಯನ ಅಥವಾ ವಿಶ್ಲೇಷಣೆ, ವ್ಯಾಕರಣ ಮತ್ತು ಗ್ರಂಥಸ್ತ ಭಾಷೆಯ ಕಪಿಮುಷ್ಠಿಯಿಂದ ಕಳಚಿಕೊಂಡಿದೆ. ಈವರೆಗಿನ ಕನ್ನಡ ಭಾಷಾಸಂಬಂಧಿ ಸಂಶೋಧನೆಗಳನ್ನು ಮೂರು ಮುಖ್ಯ ನೆಲೆಗಳಲ್ಲಿ ವಿಂಗಡಿಸಿಕೊಳ್ಳಬಹುದೆಂದು ಕೋರುತ್ತದೆ.

೧) ಐತಿಹಾಸಿಕ ಸಂಶೋಧನೆ

೨) ತೌಲನಿಕ ಸಂಶೋಧನೆ

೩) ವಿವರಣಾತ್ಮಕ ಸಂಶೋಧನೆ

ಕನ್ನಡ ಭಾಷೆಯ ಐತಿಹಾಸಿಕ ಅಂಶಗಳನ್ನು ಹೆಕ್ಕಿ ತೆಗೆಯುವುದರಲ್ಲಿ ಕನ್ನಡ ವಿದ್ವಾಂಸರು ಅದ್ಭುತ ಕೆಲಸ ಮಾಡಿದ್ದಾರೆ. ವ್ಯುತ್ಪನ್ನಮೂಲ ವಿಷಯಗಳಿಗೆ ಹೆಚ್ಚು ಒತ್ತುಕೊಟ್ಟು ಭಾಷಾ ಇತಿಹಾಸ ಸಂಶೋಧಕರು ಕೆಲಸ ಮಾಡಿದ್ದಾರೆ. ವಾಸ್ತವವಾಗಿ ಕನ್ನಡ ಭಾಷಾ ಇತಿಹಾಸ ಸಂಶೋಧಕರಲ್ಲಿ ಹೆಚ್ಚಿನವರು ಬಹುಮುಖ ಪ್ರತಿಭೆಯ ವ್ಯಕ್ತಿಗಳು. ಭಾಷೆಯ ಐತಿಹಾಸಿಕ ಸಂಶೋಧನೆಗೆ ಸಂಬಂಧಿಸಿದಂತೆ ನಾವು ನೆನೆಪಿನಲ್ಲಿಡಬೇಕಾದ ಎರಡು ಹೆಸರುಗಳೆಂದರೆ ಒಂದು ಪ್ರಾಚಾರ್ಯ ಡಿ. ಎಲ್. ನರಸಿಂಹಾಚಾರ್ಯರಂದು, ಮತ್ತೊಬ್ಬ ಭಾಷಾತಜ್ಞ ತೀ. ನಂ. ಶ್ರೀ.

ಈ ನಿಟ್ಟಿನಲ್ಲಿ ಹೆಸರಿಸಲೇಬೇಕಾದ ಎರಡು ಸಂಶೋಧನಾ ಪ್ರಮಾಣಗ್ರಂಥಗಳೆಂದರೆ ಡಾ. ಎ. ಎನ್. ನರಸಿಂಹಯ್ಯನವರ "The Grammar of oldest karnarese Inscrlptions ಮತ್ತು ಡಾ. ಜಿ. ಎನ್. ಗಾಯಿ ಅವರ Historical Grammar of old kannada. ನರಸಿಂಹಯ್ಯನವರು ದ್ರಾವಿಡ ಭಾಷೆಯೊಂದರ ಶಾಸನಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿದ ಮೊದಲಿಗರು. ಸ್ವಾತಂತ್ರ್ಯೋತ್ತರದಲ್ಲಿ ಕನ್ನಡ ಭಾಷೆಯ ಐತಿಹಾಸಿಕ ಸಂಶೋಧನೆಗೆ ಗರಿ ಮೂಡಿಸಿದವರಲ್ಲಿ ಮುಖ್ಯರು. ಡಾ. ಕೆ. ಕುಶಾಲಪ್ಪಗೌಡ ಮತ್ತು ಡಾ. ಸಿ. ರಾಮಸ್ವಾಮಿ ಅವರು, ಕನ್ನಡ ನಾಡಿನಿಂದ ದೂರ ಇದ್ದುಕೊಂಡು ಕನ್ನಡಕ್ಕೆ, ವಿಶೇಷವಾಗಿ ಭಾಷಾವಿಜ್ಞಾನಕ್ಕೆ ಇವರು ಸಲ್ಲಿಸಿರುವ ಸೇವೆ ಅಪಾರ.

ಕನ್ನಡ ಭಾಷೆಯ ಐತಿಹಾಸಿಕ ಸಂಶೋಧನೆಗೆ ಶಾಸನ, ಸಾಹಿತ್ಯ, ಪುರಾತತ್ವ, ಜಾನಪದ ಇತ್ಯಾದಿ ಸಾಕಷ್ಟು ಮಾಹಿತಿ ಒದಗಿಸಿವೆ. ಇವುಗಳ ಆಧಾರದಿಂದ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಸಂಪುಟಗಳು ವಿಶ್ವವಿದ್ಯಾನಿಲಯಗಳಲ್ಲಿ ಪ್ರಕಟಗೊಂಡಿದೆ.

ಐತಿಹಾಸಿಕ ಸಂಶೋಧಕರು ಭಾಷೆಯ ಬೆಳವಣಿಗೆಯನ್ನು, ಪ್ರಗತಿಯನ್ನು, ವಿವಿಧ ಆಧಾರಗಳಿಂದ ಸಂಶಯಾತೀತವಾಗಿ ಖಚಿತಪಡಿಸುವುದೇನೋ ಸರಿ. ತೌಲನಿಕ ಭಾಷಾ ಸಂಶೋಧನೆ ಹೆಚ್ಚಿನ ಪರಿಶ್ರಮ, ಅಧ್ಯಯನದ ಒಲವನ್ನು ಅಪೇಕ್ಷಿಸುವಂಥದು. ಏಕೆಂದರೆ, ಇಲ್ಲಿ ವಿಶ್ಲೇಷಣೆ ಮತ್ತು ತುಲನೆ ಎರಡೂ ಸಮಾನ ಪಾತ್ರಧಾರಿಗಳು.

ಕನ್ನಡ ಭಾಷೆಯ ಮಟ್ಟಿಗೆ ಹೇಳುವುದಾದರೆ ತೌಲನಿಕ ಸಂಶೋಧನೆ ಕನ್ನಡ ಅಧ್ಯಯನಕ್ಕೆ ಹೆಚ್ಚು ಒತ್ತು ಕೊಟ್ಟಿದೆ. ಡಾ. ಯು. ಪಿ. ಉಪಾಧ್ಯಾಯ ಅವರ "Acm-parative study of kannada Dialects" ಒಂದು ಮಾದರಿ ತೌಲನಿಕ ಸಂಶೋಧಕ ಗ್ರಂಥ. ಇದನ್ನು ಬಿಟ್ಟರೆ ಡಾ. ಶಾಲಿನಿ ರಘುನಾಥ ಅವರ "A comparative study of Two Social Dialects of North Canara Havyaka and Halakki ಮತ್ತು ಡಾ. ಎಲ್. ಮಂಜುಳಾಕ್ಷಿ ಅವರ "A Comparative Study of Kannada Dealects

of Mysore District" ಗಮನಿಸುವಂತದ್ದು. ಇವುಗಳ ಜೊತೆಗೆ ಕೆಲವು ಸಂಶೋಧಕರು ಕನ್ನಡ ವ್ಯಾಕರಣ ಗ್ರಂಥಗಳನ್ನು ಇತರ ಭಾಷೆಯ ವ್ಯಾಕರಣ ಗ್ರಂಥಗಳೊಡನೆ ತೌಲನಿಕವಾಗಿ ಅಧ್ಯಯನ ಮಾಡಿರುವುದೂ ಗೋಚರಿಸುತ್ತದೆ.

ಉದಾಹರಣೆಗೆ, ಮದಿವಾಣನ್ ಅವರು ತೊಲ್ಕಾಪಿಯಂ ಮತ್ತು ಶಬ್ದಮಣಿದರ್ಪಣಗಳನ್ನು ತೌಲನಿಕವಾಗಿ ವಿವೇಚಿಸಿದ್ದಾರೆ. ಹಾಗೆಯೇ ಕೆ. ಡಿ. ನೀಲಕಂಠ ಅವರು ನನ್ನೂಲ್ ಮತ್ತು ಶಮದಗಳನ್ನು ತೌಲಿನಿಕವಾಗಿ ಅಧ್ಯಯನ ಮಾಡಿದ್ದಾರೆ.

ಈ ವಿಭಾಗದಲ್ಲಿ ಹೆಸರಿಸಬೇಕಾದ ಇನ್ನೊಂದು ಅಧ್ಯಯನ ಎಂದರೆ ಆರ್. ವೇಲುಮುರುಗನ್, ಅವರು ಅಣ್ಣಾಮಲೈ ವಿಶ್ವವಿದ್ಯಾನಿಲಯಕ್ಕೆ ೧೯೮೭ರಲ್ಲಿ ಅರ್ಪಿಸಿದ "A Study of Kannada Dialects Spoken in Madurai District" ಎಂಬ ನಿಬಂಧ. ತೌಲನಿಕ ಭಾಷಾಸಂಶೋಧನೆಗೆ ಪ್ರೇರಕವಾಗಿರುವ ಆಂತರಿಕ, ಬಾಹ್ಯ ಪುನಾರಚನೆಗಳ ತಾತ್ವಿಕ ನೆಲೆಯ, ಜ್ಞಾತಿ ಭಾಷಾ ಸಂಬಂಧಿ, ತೌಲನಿಕ ಅಧ್ಯಯನಗಳು ಕನ್ನಡದಲ್ಲಿ ಕಾಣಿಸಿಕೊಂಡಿರುವುದು ಕಡಿಮೆ. ಆದರೆ ತೌಲನಿಕ ದ್ರಾವಿಡ ಭಾಷಾ ವ್ಯಾಸಂಗಕ್ಕೆ ಪೂರಕವಾದ ಸಾಕಷ್ಟು ಕೃತಿಗಳು ಕನ್ನಡದಲ್ಲಿವೆ.

ಕನ್ನಡವನ್ನು ಪ್ರಧಾನವಾಗಿ ಇಟ್ಟುಕೊಂಡು ರಚನಾತ್ಮಕವಾಗಿ ಜ್ಞಾತಿಭಾಷೆಗಳಾದ ತಮಿಳು, ತೆಲುಗು, ಮಲೆಯಾಳಂ, ತುಳು ಇತ್ಯಾದಿಗಳೊಡನೆ ತೌಲನಿಕವಾಗಿ ಸಂಶೋಧನೆ ಮಾಡಿ, ಧ್ವನಿಮಾ, ಆಕೃತಿಮಾ, ಪದ, ವಾಕ್ಯ, ಅರ್ಥ ಇವುಗಳಿಗೆ ಸಂಬಂಧಿಸಿದಂತೆ ಉಂಟಾಗಿರುವ ಬದಲಾವಣೆಗಳನ್ನು, ಅವುಗಳನ್ನು ನಿರೂಪಿಸುವ ನಿಯಮಗಳನ್ನು, ತತ್ತ್ವಗಳನ್ನು ಈ ಕ್ಷೇತ್ರದಲ್ಲಿ ದುಡಿಯುತ್ತಿರುವ ವಿದ್ವಾಂಸರು ವಿಸ್ತೃತವಾಗಿ ಪರಿಚಯಿಸಬೇಕಿದೆ. ಕನ್ನಡ ಭಾಷಾ ಸಂಶೋಧನೆಯ ಬೇರು ಆಳವಾಗಿ ತಳ ಊರಿರುವುದು ವಿವರಣಾತ್ಮಕ ಅಥವಾ ವಿಶ್ಲೇಷಣಾತ್ಮಕ ಸಂಶೋಧನೆಯಲ್ಲಿ. ನಮ್ಮ ವಿಶ್ವವಿದ್ಯಾನಿಲಯದ ಮುಕ್ಕಾಲು ಭಾಷಾ ವಿಜ್ಞಾನ ವಿದ್ವಾಂಸರು ಡಾಕ್ಟರುಗಳಾಗಿರುವುದು ವರ್ಣನಾತ್ಮಕ ಭಾಷಾ ನಿಬಂಧಗಳನ್ನು ಪ್ರಚಾರ ಪಡಿಸಿರುವುದರಿಂದ.

ವಿವರಣಾತ್ಮಕ ಸಂಶೋಧನೆ ಯಾವುದೇ ಭಾಷೆ, ಉಪಭಾಷೆ, ವ್ಯಕ್ತಿ ಭಾಷೆಯ ರಚನೆಯನ್ನು ಯತಾವತ್ತಾಗಿ ಈ ಸಂಶೋಧನೆಯ ಫಲಿತಾಂಶವು ಕನ್ನಡಿಯಲ್ಲಿ ಮುಖ ನೋಡಿಕೊಂಡಂತೆ. ಇಲ್ಲದುದರ ಬಗೆಗೆ, ಮುಂದಾಗಬಹುದಾದುದರ ಬಗೆಗೆ ವಿಶ್ಲೇಷಣಾತ್ಮಕ ಸಂಶೋಧನೆ ತಲೆಕೆಡಿಸಿಕೊಳ್ಳುವುದಿಲ್ಲ.

ಭಾಷಿಕ ಸತ್ಯವನ್ನು ಕಲೆಹಾಕಿ ಸಾದರ ಪೂರ್ವಕವಾಗಿ ವಿಶ್ಲೇಷಣೆ ಮಾಡುವುದೇ ವಿಶ್ಲೇಷಣಾತ್ಮಕ ಸಂಶೋಧನೆ. "ಇಲ್ಲಿ ಬರೀ ಶಾಸ್ತ್ರೀಯ ಚೌಕಟ್ಟಿನ ಯಾಂತ್ರಿಕತೆಯಿಲ್ಲ. ಇದು ಈಗಾಗಲೇ ಇರುವುದನ್ನೆಲ್ಲ ಅನಾವರಣಗೊಳಿಸುವ ಶೋಧನೆಯೂ ಅಲ್ಲ.

ಭಾಷಾ ವಿಶ್ಲೇಷಣಾ ವಿಧಾನಗಳು ಮೊದಲು ಕುಡಿಯೊಡೆದದ್ದೇ ವ್ಯಾಕರಣ ಗ್ರಂಥಗಳಿಂದ. ನಡುಗನ್ನಡದ ಅಂತ್ಯದ ವೇಳೆಗೆ ಮೂರು ಹಳಗನ್ನಡ ವ್ಯಾಕರಣಗಳು ನಮಗೆ ಲಭಿಸುತ್ತವೆ. ನಾಗವರ್ಮನ ಕರ್ನಾಟಕ ಭಾಷಾ ಭೂಷಣ ಇವುಗಳಲ್ಲಿ ಮೊದಲನೆಯದು.

ಕನ್ನಡದ ವಿವರಣಾತ್ಮಕ ವಿಶ್ಲೇಷಣೆಗೆ ಕ್ರಿಶ್ಚಿಯನ್ ಮಿಷನರಿಗಳು ಹಾಕಿಕೊಟ್ಟ ತಳಪಾಯ ಪ್ರಶಂಸನೀಯವಾದುದು. ಗ್ರಂಥಸ್ಥ ಕನ್ನಡ ಭಾಷೆಗೆ ವ್ಯಾಕರಣ ರಚಿಸಿಕೊಡುವಂಥ ವಿದ್ವಾಂಸರ ತಂಡ ಆಮೇಲೆ ಬಂತು. ಈ ವ್ಯಾಕರಣಗಳ ಗುಣಮಟ್ಟ ಅಷ್ಟೇನೂ ಆಶಾದಾಯಕವಿರಲಿಲ್ಲ. ಆಧುನಿಕ ಭಾಷಾವಿಜ್ಞಾನದ ವಿಧಾನವನ್ನನುಸರಿಸಿ, ಕನ್ನಡದ ಮೊದಲ ಆಡುನುಡಿ ವಿಶ್ಲೇಷಣ ಕೃತಿ ಎಂಬ ಕೀರ್ತಿಗೆ ಪಾತ್ರವಾದದ್ದು ವಿಲಿಯಂ ಬ್ರೈಟ್ ಅವರ "An out line of the Kannada" ಬೆಂಗಳೂರು ಬ್ರಾಹ್ಮಣರ ಆಡುಭಾಷೆಯನ್ನು ವಿಶೇಷವಾಗಿ ಆಧರಿಸಿದೆ ವಿಶ್ಲೇಷಣೆ ಇಲ್ಲಿ ದೊರೆಯುತ್ತದೆ. ಪ್ರಾಯಶಃ ಇದೇ ಮೊದಲ ಪ್ರಕಟಿತ ವಿವರಣಾತ್ಮಕ ವ್ಯಾಕರಣ.

ಕನ್ನಡದಲ್ಲಿ ವಿವರಣಾತ್ಮಕ ಭಾಷಾ ವಿಜ್ಞಾನದ ಪೂರ್ಣ ವಿಶ್ಲೇಷಣ ಮಾದರಿಯನ್ನು ಒದಗಿಸಿಕೊಟ್ಟ ಹಿರಿಮೆ ನಾಡಿನ ಖ್ಯಾತ ಭಾಷಣ ತಜ್ಞರಲ್ಲೊಬ್ಬರಾಗಿದ್ದ ಆರ್. ಸಿ. ಹಿರೇಮಠ ಅವರದು. ಈ ಕಾಲದಲ್ಲಿ ಕೆಲವೊಂದು ಪ್ರಖ್ಯಾತ ಸಾಹಿತ್ಯ ಗ್ರಂಥಗಳು

೧. ಬಾಳ್ ಏಳ್ ಆಳ್ ಕನ್ನಡ ತಾಯಿ (ಗೊರೂರು ಅನಂತರಾಜ್) ಪು. ಸಂ. ೧

ವಿವರಣಾತ್ಮಕ ವಿಶ್ಲೇಷಣೆಗೆ ಒಳಗಾದದ್ದು ಕಂಡುಬರುತ್ತದೆ. ಈ ಪರಂಪರೆಯ ಸಂಶೋಧನೆಯನ್ನು ಮುಂದುವರಿಸಿ ಸಂಗಮೇಶ ಸವದತ್ತಿಮಠ ಅವರು ಹರಿಹರನ ರಗಳೆಗಳನ್ನು, ಆರ್. ರಾಮಕೃಷ್ಣ ಅವರು ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯವನ್ನು, ಸಿ. ಎಸ್. ರಾಮಚಂದ್ರ ಅವರು ಹರಿದಾಸರ ಕೀರ್ತನೆಗಳನ್ನು ಭಾಷಾವಿಜ್ಞಾನ ವಿಶ್ಲೇಷಣೆಗೆ ಒಳಗು ಮಾಡಿದ್ದಾರೆ.

ಕನ್ನಡದಲ್ಲಿ ನಡೆದಿರುವ ವಿವರಣಾತ್ಮಕ ಸಂಶೋಧನೆಯ ವಿಷಯಗಳು ವೈವಿಧ್ಯತೆಯಿಂದ ಕೂಡಿರುವುದು ಗಮನಾರ್ಹ ಸಂಗತಿ. ಉಪಭಾಷೆಗಳು, ನುಡಿಗಟ್ಟುಗಳು, ಭಾಷಾಶೈಲಿ, ಸ್ವೀಕೃತ ಪದಗಳು, ವಿದೇಶೀ ಶಬ್ದಗಳು, ಇತರ ಭಾಷಾ ಪ್ರಭಾವ, ನಗರ ಭಾಷಾ ಪರಿವೀಕ್ಷಣೆ, ನಿಯತ ಕಾಲಿಕೆಗಳ ತಲೆಬರಹ ಮುಂತಾದ ವಿಭಿನ್ನ ನೆಲೆಯ ಸಂಶೋಧನೆಗಳು ನಮ್ಮ ಗಮನ ಸೆಳೆಯುತ್ತವೆ. ಹರಿಜನರು, ಆದಿಕರ್ನಾಟಕ ಪರಿಶಿಷ್ಟ ಜಾತಿಯವರು ಆಡುವ ಕನ್ನಡದ ವಿವರಣಾತ್ಮಕ ವಿಶ್ಲೇಷಣೆಯನ್ನು ಡಾ. ಬಿ. ನಂ. ಚಂದ್ರಯ್ಯ ಮತ್ತು ಎನ್. ಮಲ್ಲಿಕಾರ್ಜುನ್ ಅವರು ಕೊಟ್ಟಿದ್ದಾರೆ.

ಹಾಗೆಯೇ 'ನಾಡಾರ್ ಕನ್ನಡ'ವನ್ನು ರಾಜೇಂದ್ರ ನಾಯಕ್ ಅವರು, 'ಆದಿಜಾಂಬವರ ಕನ್ನಡ'ವನ್ನು ಡಿ. ಪಾಂಡುರಂಗ ಬಾಬು ಅವರು, 'ದೀವರ ಕನ್ನಡ'ವನ್ನು ಎಚ್. ಎಂ. ಮಹೇಶ್ವರಯ್ಯನವರು, ಇರುಳ, ಸೋಲಿಗೆ, ಕೊರಗ, ಜೇನುಕುರುಬ, ಯೆರವ ಮುಂತಾದ ಪರಿಶಿಷ್ಟ ವರ್ಗಗಳ ಭಾಷೆಯನ್ನು ಕ್ರಮವಾಗಿ ಕೆಂಪೇಗೌಡರು, ಗುರುಬಸವೇಗೌಡರು ಮತ್ತು ರಾಮಕೃಷ್ಣ ಟಿ. ಶೆಟ್ಟಿ ಹಾಗೂ ನಟನ ಸಭಾಪತಿ ಮತ್ತು ಬಿ. ಮಲ್ಲಿಕಾರ್ಜುನ್ ಅವರು ವಿಶ್ಲೇಷಿಸಿ ಅಧ್ಯಯನಕ್ಕೆ ಒದಗಿಸಿಕೊಟ್ಟಿದ್ದಾರೆ.

'ಹವ್ಯಕ ಕನ್ನಡ'ವನ್ನು ಕೆ. ಜಿ. ಶಾಸ್ತ್ರಿ ಹಾಗೂ ಚಂದ್ರಶೇಖರ ಭಟ್ಟರು ಸಂಶೋಧನೆಯಿಂದ ವಿವೇಚಿಸಿದ್ದಾರೆ. ಕನ್ನಡ ಭಾಷೆಯಲ್ಲಿರುವ 'ಸ್ವೀಕರಣ ವಿದೇಶಿ ಪದಗಳು' ಶಂಕರ ಕೆದಿಲಾಯ ಮತ್ತು ಕನಕೇಶಮೂರ್ತಿ ಅವರ ಸಂಶೋಧನೆ ಅಭಿರುಚಿಯನ್ನು ಹೆಣೆದಿದ್ದಾರೆ. ಕೆ. ವಿಶ್ವನಾಥ ಅವರು 'ಕನ್ನಡ ನುಡಿಗಟ್ಟುಗಳನ್ನು ಕುರಿತಾಗಿ ಸಂಶೋಧನೆ ನಡೆಸಿದ್ದಾರೆ.

ಡಾ. ಹಾ. ಮಾ. ನಾಯಕರ Kannada, Literary and Colloqilial ಭಾಷಾದ್ವಿರೂಪವನ್ನು ವಿಶ್ಲೇಷಿಸಿ ತೋರಿಸಿರುವ ಅಪೂರ್ವ ಸಂಶೋಧನ ಗ್ರಂಥ. ಡಾ. ಸೋಮಶೇಖರಗೌಡರ Kannada in Mysore City-A Survey ಸಾಮಾಜಿಕ ಭಾಷಾವಿಶ್ಲೇಷಣೆಗೆ ಪ್ರಯತ್ನಿಸಿರುವ ಮೊದಲ ಸಂಶೋಧನ ನಿಬಂಧ, ಸ್ಥಳನಾಮಗಳನ್ನು ಕುರಿತಂತೆ ಅನೇಕ ಉತ್ಸಾಹಿ ವಿದ್ವಾಸಂರು ಕನ್ನಡದಲ್ಲಿ ಸಂಶೋಧನೆ ನಡೆಸಿದ್ದಾರೆ.

ಡಾ. ಹಾ. ಮಾ. ನಾಯಕರು ಭಾಷಾದ್ವಿರೂಪಗಳನ್ನು ಕುರಿತು ಸಂಶೋಧನೆ ಮಾಡಿದಂತೆ, ಡಾ. ಕೃಷ್ಣ ಪರಮೇಶ್ವರ ಭಟ್ ಅವರು ದ್ವಿಭಾಷಾ ಪರಿಸರ ಕುರಿತು ಭಾಷಾ ವಿಜ್ಞಾನ ಸಂಶೋಧನೆಯನ್ನು ಮಾಡಿದ್ದಾರೆ. 'ಕನ್ನಡದಲ್ಲಿ ನಿಘಂಟು ರಚನಾಕಲೆ' ಎಂಬ ವಿಷಯವನ್ನಾಧರಿಸಿ ಸಂಶೋಧನೆ ನಡೆಸಿರುವ ರಮೇಶಚಂದ್ರದತ್ ಹಾಗೂ A Controstive Analysis of Tamil and Kannada ಎಂಬ ವೈದೃಶ್ಯಾತ್ಮಕ ವಿಶ್ಲೇಷಣೆಯನ್ನು ದೊರಕಿಸಿಕೊಟ್ಟ ಡಾ. ಎನ್. ರಾಜಾರಾಂ ಅಭಿನಂದನೀಯರು.

ಪದವಿ ತರಗತಿಗಳಲ್ಲಿ ಕನ್ನಡ ಭಾಷಾಸಾಹಿತ್ಯ ಕಲಿಕೆ ಒಂದು ವಿವೇಚನೆ ಡಾ. ಎಚ್. ಎಸ್. ಶಿವಸ್ವಾಮಿ ಅವರ ಸಂಶೋಧನ ಕೊಡುಗೆ. ಅನ್ವಯಿಕ ನೆಲೆಗಟ್ಟಿನ ಇಂಥ ಸಂಶೋಧನೆಗಳು ಹೆಚ್ಚು ಅಪೇಕ್ಷಣೀಯ. ಇನ್ನು ಪಿ. ಎಸ್. ಶ್ರೀನಿವಾಸರ A Comparative Study of Sarana and Dasa Literature in Kannada ವಿವರಣಾತ್ಮಕ ವಿಶ್ಲೇಷಣೆಗೆ ಗುರಿಯಾದ ಕನ್ನಡ ಮತ್ತು ಕನ್ನಡ ಸಾಹಿತ್ಯ ಕೃತಿಗಳು, ಭಾಷಾ ಸಂಶೋಧನೆಗೆ ಬೇಕಾದ ಅಭಿರುಚಿಯನ್ನು ಮೂಡಿಸಿದ. ಭಾಷಾವಿಜ್ಞಾನದ ಪ್ರಾಥಮಿಕ ಜ್ಞಾನವನ್ನು

ಒದಗಿಸಿದ ಸಂಶೋಧನಾನುಭವದ ಹಿನ್ನೆಲೆಯ ಅನೇಕ ಕೃತಿಗಳು ಕನ್ನಡದಲ್ಲಿವೆ. ಅವುಗಳಲ್ಲಿ ಜಹಾಗೀರ್‌ದಾರ್ ಅವರ ಶಾರದೆಯ ಸಂಸಾರ, ರಾ. ಯ. ಧಾರವಾಡಕರ ಅವರ ಕನ್ನಡ ಭಾಷಣಶಾಸ್ತ್ರ ದಾಖಲಿಸುವಂಥವು.

ತಮ್ಮ ಬೋಧನೆ ಮತ್ತು ಸಂಶೋಧನೆಯ ಹಿನ್ನೆಲೆಯನ್ನು ಬಂಡವಾಳವಾಗಿಸಿಕೊಂಡು ವಿವಿಧ ವಿಶ್ವವಿದ್ಯಾನಿಲಯ ಭಾಷಾವಿಜ್ಞಾನ ವಿಭಾಗಗಳಲ್ಲಿ ಸೇವೆ ಸಲ್ಲಿಸಿರುವ, ಸಲ್ಲಿಸುತ್ತಿರುವ ಅನೇಕ ಪ್ರಾಧ್ಯಾಪಕರು, ಪ್ರವಾಚಕರು, ವಿದ್ವಾಂಸರು ಕನ್ನಡ ಭಾಷೆಯ ಬಗೆಗೆ ಕೃತಿಗಳನ್ನು ಹೊರತಂದಿದ್ದಾರೆ. ಸಂಶೋಧನೆಗೆ ಮಾರ್ಗದರ್ಶನ ಮಾಡಿದ್ದಾರೆ. ಸಂಶೋಧನ ಲೇಖನಗಳನ್ನು ಬರೆದಿದ್ದಾರೆ. ಕನ್ನಡ ಭಾಷಾ ಬೆಳವಣಿಗೆ ಕಂಕಣ ಕಟ್ಟಿಕೊಂಡು ದುಡಿಯುತ್ತಿರುವ ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗಗಳಿವೆ, ಸಂಘ ಸಂಸ್ಥೆಗಳಿವೆ, ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಕರ್ನಾಟಕ ಸರ್ಕಾರದ ವಿವಿಧ ಅಕಾಡೆಮಿಗಳಿವೆ.

ಕನ್ನಡ ಭಾಷೆಯ ಸಂಶೋಧನೆಯನ್ನು ಅವಲೋಕಿಸುವ ಯಾರಿಗಾದರೂ ಆಗಿರುವುದಕ್ಕಿಂತ ಆಗಬೇಕಾಗಿರುವುದು ಬಹಳ ಇದೆ ಎನಿಸಿದರೆ ಅಸಾಧುವಲ್ಲ. ತಮಿಳು ಭಾಷೆಯ ಎಲ್ಲ ಉಪಭಾಷೆಗಳ ಸಂಗ್ರಹ, ವಿಶ್ಲೇಷಣೆ ಕನ್ನಡಕ್ಕಿಂತ ಮೂರು-ನಾಲ್ಕು ಪಟ್ಟು ಹೆಚ್ಚಾಗಿ ಆಗಿದೆ. ಭಾಷೆಯನ್ನು ಆಧುನಿಕ ಭಾಷಾವಿಜ್ಞಾನದ ಅನ್ವಯಿಕ ಸಂಶೋಧನೆಗಳ ನೆಲೆಯಲ್ಲಿ ವಿಶ್ಲೇಷಿಸುವ ಕೆಲಸ ಅಲ್ಲಿ ಯತೇಚ್ಛವಾಗಿ ನಡೆದಿದೆ. Billingualism, Bimultilingualism, Multilingualism ಗೆ ಸಂಬಂಧಿಸಿದಂತೆ ಸಂಶೋಧನೆಗಳು ನಡೆಯುತ್ತಿವೆ.

ಈವರೆಗೂ ಪ್ರಸ್ತಾಪಿಸಿದ ಹಳೆಯ ಸಂಶೋಧನ ವಿಧಿ-ವಿಧಾನಗಳನ್ನೇ ಇಂದಿಗೂ ನಾವು ಅನುಸರಿಸುತ್ತಿದ್ದೇವೆ. ವಿವರಣಾತ್ಮತ - ತೌಲನಿಕ - ಐತಿಹಾಸಿಕ ವಿಧಿ ವಿಧಾನಗಳು ಈಗ ಮೂಲೆಗುಂಪಾಗಿವೆ. ಹಾಗೆಯೇ ಇತರ ಅನ್ವಯಿಕ ಶಾಖೆಗಳಿಂದ ಒಡಮೂಡಿರುವ ಭಾಷಾಬೋಧನೆ, ಕಲಿಕೆಗೆ ಅನಿವಾರ್ಯವಾದ ದೋಷವಿಶ್ಲೇಷಣೆ, ವೈದೃಶ್ಯಾತ್ಮಕ ವಿಶ್ಲೇಷಣೆ, ಮನೋಭಾಷಾವಿಜ್ಞಾನ ಹಿನ್ನೆಲೆಯ ವಿಶ್ಲೇಷಣೆ,ಇತ್ಯಾದಿ ವಿಧಾನಗಳನ್ನು ಭಾಷಿಕ ವಿವರಣೆಗೆ ನಾವು ಬಳಸುತ್ತಿಲ್ಲ.

ಬೋಧನ ಮಾಧ್ಯಮವಾಗಿ ಎಲ್ಲರಿಗೂ ಒಪ್ಪಿತವಾಗುವಂಥ ಕನ್ನಡ ಭಾಷೆಯನ್ನು ರೂಪಿಸುವಲ್ಲಿ ನಾವು ಹಿಂದೆ ಬಿದ್ದಿದ್ದೇವೆ. ಸಮೂಹ ಮಾಧ್ಯಮಮಗಳೊಡನೆ ಭಾಷೆಗೆ ಹೊಕ್ಕಳು ಬಳ್ಳಿಯ ಸಂಬಂಧವಿದೆ ಎಂಬುದು ಪ್ರಸ್ತುತ ಸಂಶೋಧಕರಿಗೆ ತಿಳಿಯಬೇಕಾಗಿದೆ. ನಾವು ನಡೆಯುತ್ತಿರುವ ದಾರಿಯನ್ನು ಹಿರಿಯರು ಹಸನುಗೊಳಿಸಿ ಸುಗಮವಾಗಿಸಿದ್ದಾರೆ. ಅವರ ಕೊಡುಗೆಯ ಮೈಲಿಗಲ್ಲುಗಳನ್ನು ದರ್ಶಿಸುತ್ತ ಮುಂದಿನ ಹೊಸದಾರಿಯನ್ನು ಶ್ರಮಿಸಲು ನಾವು ಸಿದ್ಧಪಡಿಸಿಕೊಳ್ಳಬೇಕಾಗಿದೆ.

ಇತ್ತೀಚೆಗೆ ಕರ್ನಾಟಕ ಸಾಂಸ್ಕೃತಿಕ ರಾಜಧಾನಿ ಮೈಸೂರು ನಗರದಲ್ಲಿ ನಿಧನರಾದ ವಿಜ್ಞಾನ ಸಂಶೋಧಕ ಜಿ. ಟಿ. ನಾರಾಯಣರಾಯರು ಕನ್ನಡ ಭಾಷೆಗೆ ವಿಜ್ಞಾನ ಹಾಗೂ ಸಂಶೋಧನೆಯ ಮೆರಗನ್ನು ನೀಡಿದ್ದರು.

ಸುವರ್ಣ ಕರ್ನಾಟಕ ಸಂಭ್ರದಲ್ಲಿರುವ ಕನ್ನಡಿಗರಿಗೆ ಕನ್ನಡ ಸಂಶೋಧಕರಿಗೆ ದಾರಿ ದೀವಿಗೆಯಾಗಿದ್ದ ಜಿ. ಟಿ. ನಾರಾಯಣರಾಯರಂತಹ ವಿಜ್ಞಾನ ಸಂಶೋಧಕರು ಕಾಲನ ವಶವಾಗಿದ್ದು, ಕನ್ನಡಿಗರ ದುರ್ದೈವ. ಹಾಗೆಂದು ಕನ್ನಡ ತಾಯಿ ಭುವನೇಶ್ವರಿ ಬಂಜೆಯಲ್ಲ. ಈ ತಾಯಿಯ ಒಡಲಿನಲ್ಲಿ ಮಡಿಲಿನಲ್ಲಿ ಅಸಂಖ್ಯಾತ ಕನ್ನಡ ವಿಜ್ಞಾನಿಗಳು ಮತ್ತು ಸಂಶೋಧಕರು ಮೂಡಿ ಬರುತ್ತಾರೆ. ಬದುಕಿದ್ದಷ್ಟು ಕಾಲ ಕನ್ನಡದಲ್ಲಿ ಸಂಶೋಧನೆ ನಡೆಸಬಲ್ಲ. ಅಸಂಖ್ಯಾತ ಕನ್ನಡ ಸಂಶೋಧಕರು ಈ ನಾಡಿನಲ್ಲಿ ಉಳಿದು ಬೆಳೆದು ಬರಲಿ ಎನ್ನುವ ಗಂಭೀರ ಚಿಂತನೆಯೊಂದಿಗೆ ಸಂಶೋಧನೆ ಮತ್ತು ವಿಜ್ಞಾನ ಕ್ಷೇತ್ರದಲ್ಲಿ ಕನ್ನಡ ಭಾಷೆ ಚಿರನೂತನವಾಗಿರಲಿ ಎನ್ನುವುದೇ ಆಶಯ.

## ಔ) ಸಂಸ್ಕೃತಿ

ಸಂಸ್ಕೃತಿ ಎನ್ನುವುದು ಜೀವನ ಪದ್ಧತಿಯಾಗಿದೆ. ಕನ್ನಡಿಗರ ಇಂತಹ ಜೀವನ ಪದ್ಧತಿಗೆ ಸಾವಿರಾರು ವರ್ಷಗಳ ಇತಿಹಾಸವಿದೆ.

ತನ್ನ ಆಯುರ್ಮಾನದಲ್ಲಿ ಆರ್ಯ ಆಂಗ್ಲ ಸಂಸ್ಕೃತಿಗಳನ್ನು ಬೆಸೆದುಕೊಳ್ಳುತ್ತಾ ಬಂದ 'ಕನ್ನಡ ಕಾಲಮಾನ ಉದ್ದಕ್ಕೂ ದ್ವಿಭಾಷ ಸಂದರ್ಭದಲ್ಲಿ ಬದುಕು ಮಾಡಿದೆ.' ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ.

ಕರ್ನಾಟಕ ಎಂದರೆ ಕರುನಾಡು, ಎತ್ತರವಾದ, ವಿಶಾಲವಾದ ಕನ್ನಡ ನಾಡು. ರಾಮ, ಲಕ್ಷ್ಮಣ, ಸೀತೆ ದಂಡಕಾರಣ್ಯಕ್ಕೆ ಬಂದರು ಎಂದು ಹೇಳುವ ಪ್ರದೇಶವೇ ಕರ್ನಾಟಕವೆಂದು ಗುರುತಿಸಿದ್ದಾರೆ. ವಾಲಿ ಸುಗ್ರೀವರ ರಾಜಧಾನಿ ಕಿಷ್ಕಿಂದೆ ಎಂಬ ಪಟ್ಟಣವಿತ್ತು. ಪಂಪಾ ನದಿ ಇಂದಿನ ತುಂಗಭದ್ರಾ ನದಿ.

ನೃಪತುಂಗನ ಆಸ್ಥಾನ ಕವಿ ಶ್ರೀವಿಜಯನು ಕವಿರಾಜ ಮಾರ್ಗದಲ್ಲಿ "ಕಾವೇರಿಯಿಂದಮಾ ಗೋದಾವರಿಮಿರ್ದ ನಾಡದಾ ಕನ್ನಡದೊಳ್" ಎಂಬುದಾಗಿ ಕನ್ನಡ ನಾಡಿನ ವಿಸ್ತಾರ, ಚೆಲುವು ವರ್ಣಿಸಿದ್ದಾನೆ. ಗೋದಾವರಿಯು ಮಹಾರಾಷ್ಟ್ರದ ಉತ್ತರದ ಕೊನೆಯ ನಾಸಿಕ ಜಿಲ್ಲೆಯ ನದಿ, ಕದಂಬರು ಕನ್ನಡದ ಮೊದಲ ಅರಸರು, ಹಾಸನ ಜಿಲ್ಲೆಯ ಹಲ್ಮಿಡಿಯಲ್ಲಿ ದೊರೆತಿರುವ ಕ್ರಿ. ಶ. ೪೫೦ರ ಕಾಲದ ಹಲ್ಮಿಡಿ ಶಾಸನ ಮೊತ್ತ ಮೊದಲ ಕನ್ನಡ ಗದ್ಯ ಶಾಸನ. ಈ ಶಾಸನ ಹಲ್ಮಿಡಿಯ ವೀರಭದ್ರ ದೇವಾಲಯದಲ್ಲಿತ್ತು.

ಕ್ರಿ. ಶ. ೬೨೦ರ ಸುಮಾರಿಗೆ ರಚಿತವಾದ ವಡ್ಡಾರಾಧನೆ ಕೃತಿಯ ಕನ್ನಡದ ಲಭ್ಯ ಮೊತ್ತ ಮೊದಲ ಗದ್ಯ ಕಾವ್ಯ, ಜೈನರ ಸಲ್ಲೇಖನ ವ್ರತದ ೧೯ ಕತೆಗಳಿರುವ ಈ ಕೃತಿಯನ್ನು ಶಿವಕೋಟ್ಯಾಚಾರ್ಯರು ರಚಿಸಿದ್ದಾರೆ. ೧೦ನೆಯ ಶತಮಾನ ಕನ್ನಡ ಸಾಹಿತ್ಯದ ಸುವರ್ಣ ಯುಗ. ೧೨ನೆಯ ಶತಮಾನದ ವಚನ ಚಳುವಳಿ ಕನ್ನಡ ಭಾಷೆಯ ಬಳಕೆಯಲ್ಲಿ ಕ್ರಾಂತಿಯ ಬಿರುಗಾಳಿ. ಈ ಕಾಲದಲ್ಲಿ ಶಿವ ಶರಣರ ಚಳುವಳಿ ಪ್ರಾರಂಭವಾಯಿತು. ಜಾತಿ ಪದ್ಧತಿಯನ್ನು ತೊಡೆದು ಹಾಕಿ ಶಿವಭಕ್ತರೆಲ್ಲಾ, ಸಮಾನ ಎಂದು ಸಾರಿ, ಶುದ್ಧವಾದ ಬದುಕಿಗೆ ಮಹತ್ವ ನೀಡುವ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿ ಇದು.

ಸಂಸ್ಕೃತಿ ಎಂದೊಡನೆ ನಮಗೆ ತಟ್ಟನೆ ಒಂದು ಅರ್ಥವು ಹೊಳೆಯುವುದು. 'ಕ್ಷ' ಎಂಬುವವನು ಶುದ್ಧ ಪಶು, ಅವನಿಗೇನೂ ಸಂಸ್ಕಾರವಿಲ್ಲ, ಎಂಬ ವಾಕ್ಯದ ಅರ್ಥವು ನಮಗೆ ಚೆನ್ನಾಗಿ ಆಗುವುದು. ಸಂಸ್ಕೃತಿ ಎಂಬುದಕ್ಕೆ ಬೇರೆ-ಬೇರೆ ವಿದ್ವಾಂಸರು ಬೇರೆ-ಬೇರೆ ಅರ್ಥಗಳನ್ನು ಕಲ್ಪಿಸುವರು. ಹಲವರು ಸಂಸ್ಕೃತಿ (ಕಲ್ಚರ್) ಬೇರೆ, ಸಭ್ಯತೆ (ಸಿವಿಲಿಚೇಶನ) ಬೇರೆ ಎನ್ನುವರು.

ದಿನೇ-ದಿನೇ ಸಂಸ್ಕೃತಿಯ ಅರ್ಥವು ಹೆಚ್ಚು ವ್ಯಾಪಕ ಹಾಗೂ ಸಿವಿಲೈಸೇಷನ್ ಸರ್ವ ಸಂಗ್ರಾಹಕವಾಗತೊಡಗಿದೆ. ಈ ವಿಷಯದ ಅಭ್ಯಾಸವು ಕೂಡ ಈಚೆಗೆ ಮಹಾನ್ ಪಂಡಿತರ ಲಕ್ಷ್ಯವನ್ನು ಹೆಚ್ಚೆಚ್ಚು ಆಕರ್ಷಿಸುತ್ತಲಿದೆ. ಸಂಸ್ಕೃತಿಯ ವಿಕಾಸದ ದೃಷ್ಟಿಯಿಂದ ಇತಿಹಾಸದತ್ತ ನೋಡುವ ಪ್ರವೃತ್ತಿ ಈಗ ಹೆಚ್ಚುತ್ತಲಿದೆ. ಆದರೆ ಲೋಕ ಚರಿತ್ರೆ ಎಂದರೇನು? ಸಾಮೂಹಿಕ ದೃಷ್ಟಿಯಿಂದ ಆಯಾ ಜನರ ಶಕ್ತಿ ವಿಶೇಷಗಳ ಆವಿರ್ಭಾವ, ವಿಕಾಸ. ಈ ರೀತಿ ಇತಿಹಾಸವೆಂದರೆ ಆಯಾ ಜನರ ಸಂಸ್ಕೃತಿ ವಿಕಾಸದ ಚರಿತ್ರೆ ಎಂಬ ನಿರ್ಧಾರಕ್ಕೆ ಈಗಿನ ವಿಚಾರವಂತರು ಬಂದಿದ್ದಾರೆ. ಈ ರೀತಿ ಅಭ್ಯಸಿಸುವಾಗ ಹಲವೊಂದು ಸಂಸ್ಕೃತಿಗಳು ಅಲ್ಪದುದು, ಹಲವು ಉಳಿದುದು, ಹಲವು ಹೊಸದಾಗಿ ಹುಟ್ಟಿದುದು ವಿದ್ವಾಂಸರಿಗೆ ಕಂಡುಬಂದಿತ್ತು.

ರಾಷ್ಟ್ರಗಳಿಗೆ, ಜನಾಂಗಗಳಿಗೆ, ವಿಶಿಷ್ಟ ಮಾನವ ಸಮಾಜಗಳಿಗೆ ಏರಿಳಿತಗಳು, ಉತ್ಪತ್ತಿ, ಸ್ಥಿತಿ, ಲಯ, ಅಳಿವು, ಉಳಿವು ಇದ್ದಂತೆ, ಸಂಸ್ಕೃತಿಗಳಿಗೂ ಆ ಸ್ಥಿತಿ - ಗತಿಗಳು ಇವೆ, ಎಂಬ ಸಿದ್ಧಾಂತವನ್ನು ಈಗ ಎಲ್ಲ ಇತಿಹಾಸ ಶಾಸ್ತ್ರಜ್ಞರೂ, ಸಮಾಜ ಶಾಸ್ತ್ರವನ್ನು ಬಲ್ಲವರೂ ಒಪ್ಪುವರು.

ಸತ್ಯವನ್ನರಿತುಕೊಳ್ಳುವ ಆತುರತೆ, ಅದನ್ನು ಅರಿತುಕೊಂಡ ಮೇಲೆ ಅದನ್ನು ತನ್ನ ಇಷ್ಟಾನಿಷ್ಟ ಉದ್ದೇಶಗಳ ಸಾಫಲ್ಯಕ್ಕಾಗಿ ಉಪಯೋಗಿಸಿಕೊಳ್ಳುವ ಪ್ರವೃತ್ತಿ, ಇವು ಮನುಷ್ಯನಲ್ಲಿ ಜನ್ಮಜಾತವಿರುವುದು. ಅದಕ್ಕನುಸರಿಸಿ ಈಗ ಮಾನವನು ಜಡವೆನಿಸುವ, ಜಡವೆಂದು ಪ್ರತೀತವಾಗುತ್ತಿರುವ ಜಗತ್ತಿನ ರಹಸ್ಯವನ್ನು ತಿಳಿದುಕೊಳ್ಳಲು ಜಗದ್ವ್ಯಾಪಾರಗಳಿಗೆ ಆಧಾರಭೂತ ಮೂಲಶಕ್ತಿಯನ್ನು ಅರಿಯಲು ಹೆಣಗುತ್ತಿರುವಾಗ ಅಣುಶಕ್ತಿಯನ್ನು ಕಂಡು ಹಿಡಿದಿರುವನು.

---

೧. ಸಂಸ್ಕೃತಿ ಮತ್ತು ನಾಗರೀಕತೆ (ಅರುಣ್ ಕುಮಾರ್) ಪು. ಸಂ. ೭

೨. ಸಂಸ್ಕೃತಿ, ಉಪಸಂಸ್ಕೃತಿ, ಪ್ರತಿಸಂಸ್ಕೃತಿ (ಮಾನಸ) ಪು. ಸಂ. ೯೩

೩. ನಮ್ಮ ಸಂಸ್ಕೃತಿ (ರಂಗನಾಥ್) ಪು. ಸಂ. ೧

ಆದಿವಾಸಿ ಸಂಸ್ಕೃತಿ, ಗ್ರಾಮೀಣ ಸಂಸ್ಕೃತಿ ಮತ್ತು ನಗರ ಸಂಸ್ಕೃತಿ - ಈ ರೀತಿಯಾಗಿ ಕಾಲದಿಂದ ಕಾಲಕ್ಕೆ ಬದಲಾಗುತ್ತಿರುವ ಸಂಸ್ಕೃತಿಯಲ್ಲಿ ಪ್ರಧಾನವಾಗಿ ಮೂರು ವಿಕಾಸದ ಹಂತಗಳನ್ನು ಗುರುತಿಸಲಾಗಿದೆ. ಸಂಸ್ಕೃತಿಯನ್ನು ಕುರಿತು ಅಭ್ಯಾಸ ಮಾಡುವ ವಿಜ್ಞಾನವೇ ಸಾಂಸ್ಕೃತಿಕ ಮಾನವ ವಿಜ್ಞಾನ. ಸಂಸ್ಕೃತಿಯ ಅಧ್ಯಯನದಲ್ಲಿ ನಂಬಿಕೆಗಳು ಮತ್ತು ಸಂಪ್ರದಾಯಗಳು ಬಹುಮುಖ್ಯವಾದುದ್ದರಿಂದ ಸಂಸ್ಕೃತಿಗೆ ಸಂಬಂಧಿಸಿದಂತೆ ಒಂದೆರೆಡು ಪ್ರಮುಖ ಅಂಶಗಳನ್ನು ಗುರುತಿಸಬಹುದು. ಪರಸ್ಪರ ವರ್ಗಾಯಿಸುವ, ಹಂಚಿಕೊಳ್ಳುವ, ಗೌರವಿಸುವ, ಹಿಂದಿನಿಂದಲೂ ರೂಢಿಸಿಕೊಂಡು ಬಂದಿರುವ ಸಮಾಜ ಜೀವಿಯಾದ ಮಾನವ ಎಲ್ಲಾ ಕ್ರಿಯೆಗಳ, ಆಲೋಚನೆಗಳ ಮತ್ತು ಮೌಲ್ಯಗಳ ಒಟ್ಟು ಮೊತ್ತವನ್ನು ಸಂಸ್ಕೃತಿ ಎಂದು ಕರೆಯಲಾಗುತ್ತಿದೆ. ಕೆಲವು ವಿದ್ವಾಂಸರ ಅಭಿಮತದ ಪ್ರಕಾರ ಹಾಗೂ ಭಾರತೀಯ ಸಾಹಿತ್ಯ ಸಂದರ್ಭದಲ್ಲಿ ಇಂಗ್ಲಿಷಿನ Culture ಹಾಗೂ ಕನ್ನಡದ 'ಸಂಸ್ಕೃತಿ' ಎಂಬ ಪದಗಳ ಬಳಕೆ ಇತ್ತೀಚಿನದಾದರೂ 'Culture' ಅಥವಾ 'ಸಂಸ್ಕೃತಿ' ಎಂಬುದು ಮಾತ್ರ ಅನಾದಿಕಾಲದ್ದು. ಮಾನವ ಎಂದು ಜನ್ಮ ಎತ್ತಿದ್ದನೋ ಅಂದೇ ಅವನ ನೆರಳಿನ ಹಾಗೂ ಈ ಸಂಸ್ಕೃತಿಯೂ ಕೂಡ ಹುಟ್ಟಿದೆ.

"ನಾವೇನಾಗಿರುವೆವೂ ಅದು ಸಂಸ್ಕೃತಿ ಮತ್ತು ನಾವು ಏನು ಪಡೆದಿರುವೆವೂ ಅದು ನಾಗರೀಕತೆ ಎಂಬುದು ಸಂಸ್ಕೃತಿ ಮತ್ತು ನಾಗರೀಕತೆ ಬಗೆಗಿನ ಒಂದು ಪ್ರಸಿದ್ಧ ಹೇಳಿಕೆ. ನಮ್ಮ ನೈತಿಕ ಮತ್ತು ಆಧ್ಯಾತ್ಮಿಕ ಬೆಳೆವಣಿಗೆ, ಆಂತರಿಕ ಶಾಂತಿ ಮತ್ತು ಆನಂದ, ನಮ್ಮ ನಡವಳಿಕೆ, ಇತರರೊಡನೆ ನಾವು ಹೊಂದಿರುವ ಉತ್ತಮ ಸಂಬಂಧ ಮತ್ತು ಸಾಮಾಜಿಕ ಸ್ಥಿರತೆ- ಇವು ಬಹುಮಟ್ಟಿಗೆ ನಮ್ಮ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ.

ಇವೆರಡೂ ಪರಸ್ಪರ ಪೂರಕಗಳು. ಆದರೆ ನಾವು ಪಡೆದಿರುವುದೇ ಪ್ರಧಾನವಾಗಿ ನಾವೇನಾಗಿರುವೆವೂ ಅದು ಗೌಣವಾದರೆ ಆಗ ಜೀವನ ಶೂನ್ಯವೂ ಅರ್ಥಹೀನವೂ ಆಗುತ್ತದೆ. ಶಿಕ್ಷಣದ ಹಂತದಲ್ಲಿ ಜ್ಞಾನಾರ್ಜನೆ ಮತ್ತು ಕಾರ್ಯ ಕುಶಲತೆ ನಾಗರಿಕತೆಯ ಬೆಳವಣಿಗೆಯನ್ನು ಸೂಚಿಸುತ್ತವೆ. ಆದರೆ ಇದರ ಜೊತೆಗೆ ಸಂಸ್ಕೃತಿಯನ್ನು ಪ್ರತಿನಿಧಿಸುವ ವ್ಯಕ್ತಿತ್ವದ ಬೆಳವಣಿಗೆಯೂ ಆಗಬೇಕು. ಅದಿಲ್ಲದಿದ್ದರೆ ಪಡೆದ ಜ್ಞಾನ ಮತ್ತು ಕೌಶಲಗಳನ್ನು ಸರಿಯಾದ ರೀತಿಯಲ್ಲಿ. ತನಗೂ-ಸಮಾಜಕ್ಕೂ ಉಪಯುಕ್ತವಾಗುವಂತೆ ಬಳಸಿಕೊಳ್ಳಲಾಗುವುದಿಲ್ಲ.

"ಸಂಸ್ಕೃತಿಯು ವಿವೇಚನೆ, ಜೀವನದ ಪರಿಜ್ಞಾನ"- ಎಂದು ಡಾ. ಎಸ್. ರಾಧಾಕೃಷ್ಣನ್ ಹೇಳಿದ್ದಾರೆ. ಸಂಸ್ಕೃತಿಯ ಬೆಳವಣಿಗೆ ಇಲ್ಲದೆ ಕೇವಲ ಜ್ಞಾನಾರ್ಜನೆಯಿಂದ ಉಂಟಾಗುವ ಅಪಾಯವನ್ನು ಕುರಿತು ' ಸ್ವಾಮಿ ವಿವೇಕಾನಂದರು' ಹೀಗೆ ಹೇಳುತ್ತಾರೆ. "ಸಂಸ್ಕೃತಿಯು ಮಾತ್ರ ಆಘಾತವನ್ನು ಎದುರಿಸಬಲ್ಲದು, ಕೇವಲ ಜ್ಞಾನದ ರಾಶಿಯಲ್ಲ".

ಸಂಸ್ಕೃತಿ ಪ್ರಸಾರ ಸಮಿತಿಯವರೆಲ್ಲರೂ ಕನ್ನಡ ತಿಳಿದ ಒಂದೊಂದು ಕಲಾಶಾಸ್ತ್ರದ ಪಂಡಿತರಾಗಿರಬೇಕು. ಸಾಧ್ಯವಾದಷ್ಟು ಈ ಸಮಿತಿಯಲ್ಲಿ ಎಲ್ಲಾ ವಿಧವಾದ ಕಲಾಶಾಸ್ತ್ರದ ಪ್ರಾತಿನಿಧ್ಯವಿರಬೇಕು. ಯಾವುದಾದರೂ ಜಿಲ್ಲೆಯಲ್ಲಿ ಸಾಕಾದಷ್ಟು ಜನ ಕನ್ನಡ ವಿದ್ವಾಂಸರು ಸಂಪಾದಕ ಮಂಡಳಿಗೆ ದೊರೆಯದಿದ್ದರೆ ಬೇರೆ ಜಿಲ್ಲೆಯವರಿಂದಲೋ ಕೇಂದ್ರ ಸಮಿತಿಯವರಿಂದಲೋ ಮಾಡಿಸಬೇಕು. ಜಿಲ್ಲಾಧಿಕಾರಿಯು ಇಂಗ್ಲಿಷ್-ಸಂಸ್ಕೃತ ಭಾಷೆಯ ಯಥೋಚಿತ ಪರಿಚಯದಿಂದ ಕೂಡಿದ ಕನ್ನಡ ಪದವೀಧರನೇ ಆಗಿರಬೇಕು. ಇದರಿಂದಾಗಿ ಕನ್ನಡ ಭಾಷಾಸಾಹಿತ್ಯ ಸರ್ವತೋಮುಖವಾಗಿ ಬೆಳೆಯುತ್ತದೆ.

ಸ್ವ-ಸಂಸ್ಕೃತಿಯ ಅರಿವೇ ಅಲ್ಲದೆ ವಿಶ್ವಸಂಸ್ಕೃತಿಯ ಜ್ಞಾನ ಕನ್ನಡಿಗರಿಗಾಗುತ್ತದೆ. ಕನ್ನಡಿಗರ ಸಂಸ್ಕೃತಿಯ ಅರಿವು ಹೊರಗಿನವರಿಗಾಗುತ್ತದೆ.

ಕನ್ನಡ ಭಾಷೆಗೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಖ್ಯಾತಿ ಬರಲು ವಿಜಯನಗರ ಸಾಮ್ರಾಜ್ಯ ಕಾಲದಿಂದ ರನ್ನ, ಪಂಪ, ಕಾಲದ್ದಿಂದ ಅಮರ ಶಿಲ್ಪಿ ಜಕಣಾಚಾರ್ಯ ಕಾಲದಿಂದ.

ಬೇಲೂರು, ಹಳೇಬೀಡು, ಸೋಮನಾಥಪುರ, ಶ್ರವಣಬೆಳಗೋಳ, ಮೂಡಬಿದರೆ ಮುಂತಾದ ಧರ್ಮ ಕ್ಷೇತ್ರಗಳ ಜೊತೆಗೆ ನಮ್ಮ ಸಂಸ್ಕೃತಿಯ ಉನ್ನತ ಪರಂಪರೆಯು ಉಳಿದು ಬೆಳೆದು ಬಂದಿದೆ.

ನಾಡಿನ ಸಂಸ್ಕೃತಿಯ ಪರಂಪರೆಯ ಉಳಿವು ಅಳಿವಿನಲ್ಲಿ ಕರ್ನಾಟಕ ಸಾಂಸ್ಕೃತಿಕ ರಾಜಧಾನಿ ಮೈಸೂರು ನಗರಕ್ಕೆ ತನ್ನದೆ ಆದ ವಿಶಿಷ್ಟ ಸ್ಥಾನಮಾನವಿದೆ. ಈ ಸಾಂಸ್ಕೃತಿಕ ನಗರಿಯನ್ನು ೨೫ ಜನ ದೊರೆಗಳು ನಾಡು ಮೆಚ್ಚುವಂತೆ ಆಳಿ ತೋರಿಸಿದ್ದಾರೆ. ನಾಡಿನ ಸಂಸ್ಕೃತಿಗೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಉದ್ಯಾನವನಗಳ ನಗರ ಮೈಸೂರು ಇತಿಹಾಸದ ಪುಟಗಳಲ್ಲಿ ಮಿಂಚುತ್ತಿರುವ ಶ್ರೀರಂಗಪಟ್ಟಣ, ಧರ್ಮದ ಸಂಕೇತವಾಗಿರುವ ಮಲೈಮಹದೇಶ್ವರ ಬೆಟ್ಟ, ಬಿಳಿಗಿರಿರಂಗನಬೆಟ್ಟ, ನಾಡಿಗೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಖ್ಯಾತಿ ತಂದುಕೊಟ್ಟ ಕೃಷ್ಣರಾಜ ಸಾಗರ ಹೊರನಾಡಿ ಜನರನ್ನು, ಪ್ರವಾಸಿಗರನ್ನು, ಯಾತ್ರಿಕರನ್ನು ಕೈಬೀಸಿ ಕರೆಯುತ್ತಿವೆ. ಬಂಡೀಪುರ, ನಾಗರಹೊಳೆ, ವನ್ಯಧಾಮಗಳು, ರಂಗನತಿಟ್ಟು ಪಕ್ಷಿಧಾಮ, ನಾಡಿನ ಸಾಂಸ್ಕೃತಿಕ ಪರಂಪರೆಗೆ ಮೆರಗು ನೀಡಿವೆ.

ಆದಿವಾಸಿ ಸಂಸ್ಕೃತಿ, ಗ್ರಾಮೀಣ ಸಂಸ್ಕೃತಿ ಮತ್ತು ನಗರ ಸಂಸ್ಕೃತಿ -ಈ ರೀತಿಯಾಗಿ ಕಾಲದಿಂದ ಕಾಲಕ್ಕೆ ಬದಲಾಗುತ್ತಿರುವ ಸಂಸ್ಕೃತಿಯಲ್ಲಿ ಪ್ರಧಾನವಾಗಿ ಮೂರು ವಿಕಾಸದ ಹಂತಗಳನ್ನು ಗುರುತಿಸಲಾಗಿದೆ. ಸಂಸ್ಕೃತಿಯನ್ನು ಕುರಿತು ಅಭ್ಯಾಸ ಮಾಡುವ ವಿಜ್ಞಾನವೇ ಸಾಂಸ್ಕೃತಿಕ ಮಾನವ-ವಿಜ್ಞಾನ. ಎಥ್ನೋಗ್ರಫಿ- ಎಂದರೆ ಮಾನವಕುಲ ವಿವರಣ ವಿಜ್ಞಾನ ಮತ್ತು ಎಥ್ನೋಲಜಿ- ಎಂದರೆ ಮಾನವ ಕುಲ ವಿಜ್ಞಾನ- ಈ ಎರಡೂ ಅಧ್ಯಯನದ ವಿಷಯಗಳು ಬುಡ ಕಟ್ಟುಗಳ ಸಂಸ್ಕೃತಿಯನ್ನು ಕುರಿತು ಅಭ್ಯಾಸ ಮಾಡುವ ವಿಷಯಗಳೇ ಆಗಿವೆ. ಆದ್ದರಿಂದ ಸಂಸ್ಕೃತಿಯ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಯತ್ನಿಸಿದಾಗ ಮಾನವ ವಿಜ್ಞಾನಿಗಳಿಗೆ ಬುಡಕಟ್ಟುಗಳ ಸಂಸ್ಕೃತಿಯನ್ನು ಅಧ್ಯಯನ ಮಾಡಲೇಬೇಕಾದ ಅನಿವಾರ್ಯತೆ ಎದ್ದು ಕಂಡಿತು.

ಸಂಸ್ಕೃತಿಯ ಅಧ್ಯಯನದಲ್ಲಿ ನಂಬಿಕೆಗಳು ಮತ್ತು ಸಂಪ್ರದಾಯಗಲು ಬಹುಮುಖ್ಯವಾದುದ್ದರಿಂದ ಸಂಸ್ಕೃತಿಗೆ ಸಂಬಂಧಿಸಿದಂತೆ ಒಂದೆರಡು ಪ್ರಮುಖ ಅಂಶಗಳನ್ನು ಗುರುತಿಸಬಹುದು. ಪರಸ್ಪರ ವರ್ಗಾಯಿಸುವ, ಹಂಚಿಕೊಳ್ಳುವ, ಗೌರವಿಸುವ, ಹಿಂದಿನಿಂದಲೂ ರೂಢಿಸಿ ಕೊಂಡು ಬಂದಿರುವ ಸಮಾಜ ಜೀವಿಯಾದ ಮಾನವನ ಎಲ್ಲಾ ಕ್ರಿಯೆಗಳ, ಆಲೋಚನೆಗಳ ಮತ್ತು ಮೌಲ್ಯಗಳ ಒಟ್ಟು ಮೊತ್ತವನ್ನು ಸಂಸ್ಕೃತಿ ಎಂದು ಕರೆಯಲಾಗುತ್ತಿದೆ. ಈ ಸಂಸ್ಕೃತಿಯು ಮಾನವನಿಗೆ ಮಾತ್ರವೆ ದಕ್ಕಿದ್ದು ಅತ್ಯಂತ ವಿಶಿಷ್ಟವಾದುದು. ಇದರಿಂದಾಗಿಯೇ ಮಾನವ ಪ್ರಾಣಿಗಿಂತ ಭಿನ್ನವಾಗಿರುವುದು. ಮಾನವನು ಸ್ವಪ್ರಯತ್ನ ಪೂರ್ವಕವಾಗಿ ರೂಪಿಸಿಕೊಳ್ಳುವ ಈ ಸಂಸ್ಕೃತಿಯು ಅವನ ದೇಹಕ್ಕೆ ಮತ್ತು ಆತ್ಮಕ್ಕೆಬೇಕಾಗುವ ಅಗತ್ಯಗಳನ್ನು ಪೂರೈಸುತ್ತದೆ. ಸಂಸ್ಕೃತಿಯ ಸಹಾಯದಿಂದ ಮಾನವನು ಪ್ರಕೃತಿಯ ಸಂಪನ್ಮೂಲಗಳನ್ನು ಮಾತ್ರವಲ್ಲದೆ ತನ್ನಲ್ಲಿಯೇ ಇರುವ ಪ್ರಚ್ಛನ್ನ ಶಕ್ತಿಗಳನ್ನು ಬಳಸಿ ಅರಗಿಸಿಕೊಂಡು ಮುಂದುವರಿಯಲು ಸಾಧ್ಯವಾಗಿದೆ.

ಕೆಲವು ವಿದ್ವಾಂಸರ ಅಭಿಮತದ ಪ್ರಕಾರ ಹಾಗು ಭಾರತೀಯ ಸಾಹಿತ್ಯ ಸಂದರ್ಭದಲ್ಲಿ ಇಂಗ್ಲಿಷಿನ culture ಹಾಗು ಕನ್ನಡದ 'ಸಂಸ್ಕೃತಿ' ಎಂಬ ಪದಗಳ ಬಳಕೆ ಇತ್ತೀಚಿನದಾದರೂ 'culture' ಅಥವಾ 'ಸಂಸ್ಕೃತಿ' ಎಂಬುದು ಮಾತ್ರ ಅನಾದಿಕಾಲದ್ದು. ಮಾನವ ಎಂದು ಜನ್ಮ ವೆತ್ತಿದನೋ ಅಂದೇ ಅವನ ನೆರಳಿನ ಹಾಗೆ ಈ ಸಂಸ್ಕೃತಿಯು ಕೂಡಾ ಹುಟ್ಟಿದೆ. ಇದು ಮಾನವನ ಬದುಕಿನಲ್ಲಿ ಮೂಲತಃ ಹಾಲಿನಲ್ಲಿನ ಬೆಣ್ಣೆಯಂತೆ, ಸಮುದ್ರದಲ್ಲಿನ ಉಪ್ಪಿನಂತೆ ಆವಿರ್ಭವಗೊಂಡಿದೆ. ಸಾಮಾಜಿಕ, ಭೌಗೋಳಿಕ, ಶೈಕ್ಷಣಿಕ, ಹಾಗೂ ಇನ್ನಿತರ ಹಲವಾರು ಕಾರಣಗಳಿಂದಾಗಿ ಮಾನವನ ಬದುಕು ಬದಲಾವಣೆ ಗೊಂಡಂತೆಯೇ, ಜೀವನ ಸ್ಥಿತ್ಯಂತರಗೊಂಡಂತೆಯೇ ಅವನನ್ನೇ ಅವಲಂಬಿಸಿರುವ, ಒಂದೇ ಮಾತಿನಲ್ಲಿ ಹೇಳುವುದಾದರೆ ಅವನ ನೆರಳೇ ಆಗಿರುವ ಈ ಸಂಸ್ಕೃತಿಯೂ ಕೂಡ ಕಾಲಕಾಲಕ್ಕೆ ಬದಲಾವಣೆಗೊಂಡಿದೆ. ಈಗಲೂ ಬದಲಾವಣೆ ಹೊಂದುತ್ತಲೇ ಇದೆ.

ಆದಿಮಾನವನ ಬದುಕಿನಲ್ಲಿ ಯಾವುದೇ ಹೆಸರಿನಿಂದ ಗುರುತಿಸಲ್ಪಡದೆ ಬೆರತು ಹೋಗಿದ್ದ ಈ ಸಂಸ್ಕೃತಿಯು ಎಷ್ಟೋ ಸಹಸ್ರ ತಲೆಮಾರುಗಳ ತರುವಾಯ ಮಾನಸಿಕ ಹಾಗೂ ಭೌತಿಕವಾಗಿ ಬದಲಾದ ಮಾನವನ ನಡತೆಗನುಗುಣವಾಗಿ 'ಸಂಸ್ಕಾರ' ಎಂಬ ರೂಪ ಪಡೆದು. ಆ ನಂತರ ಮತ್ತಿನ್ನೆಷ್ಟೋ ವರ್ಷಗಳ ತರುವಾಯ ಲ್ಯಾಟಿನ್ ಮೂಲದ ಇಂಗ್ಲಿಷಿನ culture ಎಂಬ ಶಬ್ದಕ್ಕೆ ಸಂವಾದಿಯಾಗಿ 'ಸಂಸ್ಕೃತಿ' ಎಂಬ ಶುದ್ಧರೂಪ ಪಡೆದು ಇಂದಿನ ಆಧುನಿಕ ಬದುಕಿನಲ್ಲಿ ಹಲವು ಅವತಾರಗಳನ್ನೆತ್ತುತ್ತ ಅಜರಾಮರವಾಗಿ ವಿಜೃಂಭಿಸುತ್ತಿದೆ.

ಈ ಪದದ ಸರಿಯಾದ ಅರ್ಥ ಹಾಗೂ ವ್ಯಾಪ್ತಿ ಗೊತ್ತಿರಲಿ, ಬಿಡಲಿ, ಅದರ ಬಗ್ಗೆ ಚಿಂತಿಸದೆ, ಸಾಕಷ್ಟು ಬಾರಿ ಸಂದರ್ಭಾನುಸಾರ ಪದೇ ಪದೇ ಬಳಸುತ್ತೇ ಇರುತ್ತೇವೆ. 'ಅವರು ಸಂಸ್ಕೃತಿವಂತರು', 'ಅವರದು ಸುಸಂಸ್ಕೃತದ ಮನೆತನ', 'ಅವರು ಸುಸಂಸ್ಕೃತ ಮನೆತನದಿಂದ ಬಂದವರು' ಎನ್ನುತ್ತೇವೆ. ಕೆಲವು ಸಲ ಸ್ನೇಹಿತರನ್ನು ಗದರಿಸುವಾಗ 'ನಿನಗೆ ಸಂಸ್ಕೃತಿ ಇದೆಯೇನೋ ಎನ್ನುತ್ತೇವೆ. ರಾಮ, ಕೃಷ್ಣ, ಹರಿಶ್ಚಂದ್ರ ಮೊದಲಾದವರನ್ನು ಸಾಂಸ್ಕೃತಿಕ ನಾಯಕರು ಎನ್ನುತ್ತೇವೆ.

ಹೀಗೆ ಸಮಾಜದಲ್ಲಿ ಹಾಗೂ ಮಾನವನ ನಿತ್ಯ ಬದುಕಿನಲ್ಲಿ ಇಷ್ಟೆಲ್ಲಾ ಪ್ರಾಮುಖ್ಯತೆ, ಪ್ರಾಧಾನ್ಯತೆ, ಗೌರವಾದರಗಳನ್ನು ಪಡೆದು ಕೊಂಡಿರುವ ಈ 'ಸಂಸ್ಕೃತಿ'ಯ ಅರ್ಥ ಹಾಗೂ ಮಹತ್ವವನ್ನು ಮಾನವ ಶಾಸ್ತ್ರಜ್ಞರ ದೃಷ್ಟಿಯಲ್ಲಿ ನೋಡುವುದು ಉಚಿತವೆನಿಸುತ್ತದೆ.

ಎಡ್ವರ್ಡ್ ಬರ್ಗೆಟ್ ಟೈಲರ್ ಅವರು ಸಂಸ್ಕೃತಿ ಅಥವಾ ನಾಗರಿಕತೆಯನ್ನು ಒಂದು ಜನತೆಯ ಬದುಕಿನ ಹಿನ್ನೆಲೆಯಲ್ಲಿ ಸಮಗ್ರವಾಗಿ ಪರಿಭಾವಿಸಿದಾಗ 'ಜ್ಞಾನ, ನಂಬಿಕೆ, ಕಲೆ, ನೀತಿ, ಕಾನೂನು, ಸಂಪ್ರದಾಯ, ಹಾಗೂ ಮನುಷ್ಯ ತನ್ನ ಸಮಾಜದ ಸದಸ್ಯನಾಗಿ ಗಳಿಸಬಹುದಾದ ಬೇರೆ ಯಾವುದೇ ಅರ್ಹತೆಗಳ ಮತ್ತು ಅಭ್ಯಾಸಗಳ ಸಂಕೀರ್ಣ ಮೊತ್ತ' ಎನ್ನುತ್ತಾರೆ. ಎ. ಎಲ್. ಕ್ರೊಬರ್ ಅವರು, ಮಾನವ ವ್ಯಕ್ತಿಗಳ ಸ್ವಯಂಸ್ಫೂರ್ತವಲ್ಲದ, ಸ್ವಭಾವ ಜನ್ಯವಲ್ಲದ ಶಾರೀರಿಕ ಮೂಲದಲ್ಲದೆ ಇರುವಂಥ ಸಮಸ್ತ ಚಟುವಟಿಕೆಗಳನ್ನು ಸಂಸ್ಕೃತಿ ಎಂದು ಕರೆಯಬಹುದು ಎನ್ನುತ್ತಾರೆ. ಸಿ. ರಾಜಗೋಪಾಲಚಾರಿ ಅವರ ಪ್ರಕಾರ ಜನತೆಯು ಸಮೂಹಗಳು ರೂಪಿಸಿದ ಹಾಗೂ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ವರ್ಗಾಯಿಸಿದ ಮೊತ್ತ ಜೀವನ ವಿಧಾನವೇ ಸಂಸ್ಕೃತಿ. ಪ್ರತಿಯೊಂದು ಜನತೆಯೂ ತನ್ನದೇ ಆದ ದೀರ್ಘ ಇತಿಹಾಸದ ಆಧಾರದ ಮೇಲೆ ಬೇರೆ ಬೇರೆ ರೂಪಗಳನ್ನುಳ್ಳ ಸಂಸ್ಕೃತಿಯನ್ನು ನಿರ್ಮಿಸಿಕೊಳ್ಳುತ್ತದೆ.

ರೂತ್ ಬೆನ್‌ಡಿಕ್ಸ್, ಎಂ. ಜೆ. ಹೆಸ್ಕೋವಿಟ್ಸ್ ಮತ್ತು ಮಲಾಸೌಸ್ಕಿ ಅವರುಗಳು ಕ್ರಮವಾಗಿ ಒಂದೊಂದೇ ವಾಕ್ಯಗಳಲ್ಲಿ ಸಂಸ್ಕೃತಿಯನ್ನು ಬಹಳ ಸೊಗಸಾಗಿ ವಿವರಿಸುತ್ತಾರೆ; ಮನುಷ್ಯನನ್ನ ಒಗ್ಗೂಡಿಸುವ ಸಾಧನವೇ ಸಂಸ್ಕೃತಿ (culture is what binds men together). ಸಂಸ್ಕೃತಿ ಮಾನವ ನಿರ್ಮಿತ ಪರಿಸರ (culture is the man made part of the environment). ಸಂಸ್ಕೃತಿ ಮಾನವ ನಿರ್ಮಿತ. ಅದು ಆತನ ಜೀವನ ಸಿದ್ಧಿಗೊದಗುವ ಸಾಧನ (as the hand work of man and as medium through which he achieves his ends).

ಕುವೆಂಪು ಅವರೂ ಕೂಡ ಸಂಸ್ಕೃತಿಯನ್ನು ಅರ್ಥೈಸುತ್ತಾ ಅದು ಅಂತರ್ಮುಖವಾದದ್ದು. ಅಂತರಂಗದ ವಿಕಾಸವನ್ನು ಹೇಳುವಂತದ್ದು; ಎಂದು ಹೇಳುವುದರ ಮೂಲಕ 'ಮನುಷ್ಯ ಚೇತನದ ಸರ್ವತೋಮುಖವೂ, ವಿಕಾಸ ಮಾರ್ಗವೂ ಆದ ಆತ್ಮಶ್ರೀಯನ್ನು ಸಂಸ್ಕೃತಿ' ಎಂದು ಸಂಕೇತಿಸಬಹುದು ಎಂದು ಅಭಿಪ್ರಾಯ ಪಡುತ್ತಾರೆ.

ಈ ಮೇಲಿನ ಎಲ್ಲಾ ವಿದ್ವಾಂಸರ ಹೇಳಿಕೆಗಳ ಸಾರಸಂಗ್ರಹವೆಂದರೆ, ವ್ಯಕ್ತಿಗಳ ಗುಣಾವಗುಣ ಸೂಚಿ ಅಥವಾ ವಿದ್ಯೆ ವಿನಯದ ಸದ್ಗುಣ ಸಂಚಯ ಸಂಕೇತ ಎಂಬ ಸಂಕುಚಿತಾರ್ಥದ ಬದಲಿಗೆ ಪ್ರತಿಯೊಬ್ಬ ಜೀವಿಯೂ ತನ್ನ ಸಮಾಜದ ಸದಸ್ಯನಾಗಿದ್ದುಕೊಂಡು

ಬದುಕಲು ತಕ್ಕಂತೆ ಕಲಿತ ಎಲ್ಲಾ ಒಳ್ಳೆಯ ಹಾಗೂ ಕೆಟ್ಟ ನಡೆ-ನುಡಿ, ಕಲೆ, ಕಾನೂನು, ಬೇಸಾಯ, ಬಹುಮಾನ-ಅವಮಾನ ಪ್ರಸಂಗಗಳು - ಇವೆಲ್ಲವನ್ನೂ ಒಡಮೂಡಿಸಿಕೊಂಡ ಒಟ್ಟು ಜೀವನ ಕ್ರಮವೇ ಸಂಸ್ಕೃತಿ. ಎಂಥದೊ ಒಂದು ಸಂಸ್ಕೃತಿ ಇರದ ಮಾನವ ಸಮಾಜವೊಂದು ಇರುವುದು ಅಸಾಧ್ಯ. ಮನುಷ್ಯ ಮತ್ತು ಸಂಸ್ಕೃತಿ ಇವು ಅವಿಭಾಜ್ಯ ಅಂಶಗಳು. ಒಂದಿರದೆ ಮತ್ತೊಂದಿರಲು ಸಾಧ್ಯವೇ ಇಲ್ಲ ಎಂದು ಸೂಚಿಸಬಹುದು. ಮಾನವ ಶಾಸ್ತ್ರದನ್ವಯ ಕುಸಂಸ್ಕೃತಿ ಒಂದು ಇರಬಹುದಾದರೂ ಮಾನವ ಲೋಕದಲ್ಲಿ ಎಲ್ಲಿಯೂ, ಎಂದೂ ಅಸಂಸ್ಕೃತಿ ಅಥವಾ ವಿಸಂಸ್ಕೃತಿ (ಸಂಸ್ಕೃತಿ ಇಲ್ಲದಿರುವಿಕೆ) ಇದ್ದಿರಲು ಅವಕಾಶವಿಲ್ಲ (ಸಂಸ್ಕೃತಿ ಅಧ್ಯಯನ: ನಂ. ತಪಸ್ವೀ ಕುಮಾರ್).

ಮೊದಲೇ ಹೇಳಿರುವ ಹಾಗೆ ಮಾನವ ಸಮಾಜದಲ್ಲಿ ಸಂಸ್ಕೃತಿಯು ಅಂತರ್ಗತವಾಗಿದ್ದರೂ, ಹಾಲನ್ನು ಮೊಸರಾಗಿಸಿ, ಮೊಸರನ್ನು ಮಥಿಸಿ ಬೆಣ್ಣೆ ಪಡೆಯುವಂತೆ, ಮನುಷ್ಯ ಸಂಸ್ಕೃತಿಯನ್ನೂ ಕಷ್ಟಪಟ್ಟು ಗಳಿಸಿಕೊಳ್ಳಬೇಕು. ಸನ್ಮಾರ್ಗದ ನಡತೆಯಿಂದ ಮೈಗೂಡಿಸಿ ಕೊಳ್ಳಬೇಕು. ಈ ರೀತಿ ಗಳಿಸಿಕೊಳ್ಳುವ ಶಕ್ತಿ ಮನುಷ್ಯನಿಗೆ ಇರುವುದರಿಂದಲೇ ಒಂದೇ ನೆಲದಲ್ಲಿ ವಾಸಿಸುತ್ತಿರುವ ಪ್ರಾಣಿ ಪಕ್ಷಿಗಳಿಗಿಂತಾ ಭಿನ್ನವಾಗಿರುವುದು. ಪ್ರಾಣಿ-ಪಕ್ಷಿಗಳಲ್ಲೂ ಸಮಾಜ ಕಂಡು ಬಂದರೂ ಅದಕ್ಕೆ ಸಂಸ್ಕೃತಿ ಎನ್ನುವುದು ಇಲ್ಲದಿರುವುದು.

ಮಾನವ ವಿಜ್ಞಾನದಲ್ಲಿ ಬಳಸಲಾಗುವ 'culture' ಪದಕ್ಕೆ ಅನ್ವಯಾನುಗತ ಅರ್ಥ ವಿವರಿಸುವುದಾದರೆ, ಜನಾಂಗ ತನ್ನ ಪರಂಪರೆಯಲ್ಲಿ ಬಂದ ಅನುಸಾರಣಾ ಮೌಲ್ಯಗಳಿಗೆ ತೀವ್ರವಾಗಿ ಸ್ಪಂದಿಸಿ, ಉಳಿಸಿಕೊಂಡು ಬಂದ ಪದ್ಧತಿಗಳು, ಆಚರಣೆಗಳು, ನಂಬಿಕೆಗಳು, ಆಯಾ ಜನಾಂಗದ ಕೊಳ್ಳುಕೊಡುವಿಕೆಯಲ್ಲಿ, ನಡೆ ನುಡಿಗಳಲ್ಲಿ, ಕಲೆ ಸಾಹಿತ್ಯಗಳಲ್ಲಿ ವ್ಯಕ್ತವಾಗುವಂಥದ್ದಾಗಿರುತ್ತದೆ.

ಯಾವುದೇ ನಿರ್ದಿಷ್ಟ ಜನಾಂಗದ ಪದ್ಧತಿ, ಆಚಾರ ವಿಚಾರ ಅನುಸರಣೆ, ನಂಬಿಕೆ ಆಯಾ ಜನಾಂಗದ ಸಂಸ್ಕೃತಿಗೇ ಸಂಬಂಧಪಟ್ಟ ವಿಷಯಗಳೆಂದು ಸಮಾಜ ಶಾಸ್ತ್ರಜ್ಞರ ಅಭಿಮತ. ಪುರಾತನ ಮಾನವ ಮನೋ ವ್ಯಾಪಾರಗಳನ್ನು ಮೂರ್ತಗೊಳಿಸಿ ವ್ಯಾಸಂಗಕ್ಕೆ ತೊಡಗಿಸಿಕೊಳ್ಳಬೇಕಾದಲ್ಲೆಲ್ಲಾ - ಈ ಸಂಸ್ಕೃತಿ ಶಬ್ದವೇ ಎದುರುಗೊಳ್ಳುತ್ತದೆ. ದಾನ, ತ್ಯಾಗ, ಭಕ್ತಿ, ಪರವಶತೆ, ಸ್ವಚ್ಛ, ನೈರ್ಮಲ್ಯ, ಸದ್ಗುಣ, ಸಭ್ಯತೆ, ಸೋಪಜ್ಞತೆ, ವಿಚಾರಪರತೆ, ನಯ ವಿನಯ, ರಸಿಕತೆ, ನಾಗರೀತಕತೆ - ಹೀಗೆ ಈ ಎಲ್ಲದರ ಸಾರ ಸಂಗ್ರಹಕ್ಕೆ 'ಸಂಸ್ಕೃತಿ' ಎಂಬ ಪದವೇ ಅತಿಸೂಕ್ತವಾಗಿ ತೋರುತ್ತದೆ.

ಇಲ್ಲಿಯ ತನಕ ಸಂಸ್ಕೃತಿಯನ್ನಷ್ಟೇ ನೋಡಿದ ತರುವಾಯ ಸಂಸ್ಕೃತಿಯ ಜೊತೆಗೆ ನಾಗರೀಕತೆಯನ್ನು ಸೇರಿಸಿ ಜೊತೆ ಜೊತೆಯಾಗಿ ನೋಡುವುದರಿಂದ ಮತ್ತಷ್ಟು ಸಂಸ್ಕೃತಿಯ ಸಮೀಪವನ್ನು ತಲುಪಬಹುದು. ಸಮಾಜದಲ್ಲಿ ಸಂಸ್ಕೃತಿ ಮತ್ತು ನಾಗರೀಕತೆಗಳನ್ನು ಸಮಾನಾರ್ಥ ಪದಗಳಾಗಿ ಬಳಸಲಾಗುತ್ತಿದೆ. ಇವೆರಡೂ ಒಂದು ನಾಣ್ಯದ ಎರಡು ಮುಖಗಳೇನೋ ಎಂಬಷ್ಟು ಪರಸ್ಪರ ಪೂರಕವಾಗಿ ಒಂದಕ್ಕೆ ಮತ್ತೊಂದು ಪರ್ಯಾಯವಾಗಿ ಬಳಕೆಯಾಗುತ್ತಿರುವುದನ್ನು ಗಮನಿಸಬಹುದು.

ಕನ್ನಡದಲ್ಲಿ 'ನಾಗರೀಕತೆ' ಎಂದು ಬಳಕೆಯಾಗುತ್ತಿರುವುದು 'civilization' ಎಂಬ ಪದಕ್ಕೆ ಬದಲಿಯಾಗಿ. ನಗರಗಳಲ್ಲಿ ವಾಸಿಸುವ ಮಾನವನಿಗೆ 'ನಾಗರೀಕ' ಎಂಬ ಅನ್ವಯಿಕ ನಾಮ ರೂಢಿಯಾಗಿದೆ. ಮೆಕೈವರ್ ಅವರು ತಮ್ಮ 'Society' ಕೃತಿಯಲ್ಲಿ 'culture is what we are and civilization is what we have' ಎಂದು ಸಂಸ್ಕೃತಿ ಮತ್ತು ನಾಗರೀಕತೆಗಳನ್ನು ವಿವರಿಸಿದ್ದಾರೆ. ಸಂಸ್ಕೃತಿ ಮನುಷ್ಯ ಆಂತರಿಕವಾಗಿ ಏನಾಗಿದ್ದಾನೆಂಬುದನ್ನು ಸೂಚಿಸಿದರೆ ಮನುಷ್ಯ ಬಾಹ್ಯವಾಗಿ ಏನನ್ನು ಪಡೆದುಕೊಂಡಿದ್ದಾನೆಂಬುದನ್ನು ನಾಗರಿಕತೆ ಹೇಳುತ್ತದೆ. ಈ ವ್ಯಾಖ್ಯಾನದಿಂದ ನಾಗರೀಕತೆ ಮತ್ತು ಸಂಸ್ಕೃತಿಗಿರುವ ಅಂತರವನ್ನು ಗ್ರಹಿಸಬಹುದು.

ಮಾನವನು ತನ್ನ ಸುತ್ತಮುತ್ತಲಿನ ಪ್ರಕೃತಿಯನ್ನು ತನ್ನ ಅಗತ್ಯ ಅನುಕೂಲತೆಗಳಿಗೆ ಅನುಗುಣವಾಗಿ ಸಾಧ್ಯವಾದಷ್ಟು ಪರಿವರ್ತಿಸಲು ಅನುಕರಿಸಿ ಅನುಭವಿಸಲು ಪ್ರಾರಂಭಿಸಿದನೋ ಅಂದೇ 'ಸಂಸ್ಕೃತಿ' ಎಂಬುದೂ ಪ್ರಾರಂಭವಾಯಿತು. ಇದು ಡೇವಿಡ್ ಬಿಡ್ನಿ ಎಂಬ ವಿದ್ವಾಂಸದ ಅಭಿಪ್ರಾಯ.

ನಮ್ಮಲ್ಲಿ ಮೂಲತಃ ಇದ್ದುದು ಒಂದೇ ಸಂಸ್ಕೃತಿ. ಅದೇ ಆದಿವಾಸಿ ಅಥವಾ ಬುಡಕಟ್ಟು ಸಂಸ್ಕೃತಿ. ಆದರೆ ಕಾಲಾನಂತರ ಮಾನಸಿಕವಾಗಿ ಹಾಗೂ ಭೌತಿಕವಾಗಿ ಮಾನವನ ವಿಕಾಸವಾದಂತೆಲ್ಲಾ ಅವನ ಸಂಸ್ಕೃತಿಯೂ ಬದಲಾಯಿಸತ್ತು. ಯಾವುದೋ ಒಂದು ಕೆರೆಯು ಕೋಡಿ ಬಿದ್ದಾಗ ಕೆರೆಯ ನೀರೆಲ್ಲವೂ ಕೊಚ್ಚಿ ಹೋದರೂ, ಕೆರೆಯ ಯಾವುದೋ ಮೂಲೆಯ ಹಳ್ಳ ಕೊಳ್ಳಗಳಲ್ಲಿ ಅಲ್ಪಸ್ವಲ್ಪ ನೀರು ಉಳಿದುಕೊಳ್ಳುವಂತೆ ಬದಲಾದ ಮಾನವ ಜೀವನ ವಿಕಾಸಕ್ಕೆ ತಕ್ಕುದಾದ ಕೆಲವು ಗುಂಪುಗಳು ಕಾಡುಮೇಡುಗಳಲ್ಲಿ ತಮ್ಮ ಮೂಲರೂಪದಲ್ಲಿಯೇ ಉಳಿದು ಕೊಂಡವು. ಅವುಗಳ ಪ್ರಸ್ತುತತೆಯನ್ನು ನಾವು ಈಗಲೂ ಕೂಡಾ ಕಾಣಬಹುದು. ಹೀಗೆ ಬದಲಾದ ಪರಿಸ್ಥಿತಿಗೆ ಹೊಂದಿಕೊಂಡು ಸುಧಾರಿತವಾಗಿರುವ ಸಮಾಜ 'ಸಂಸ್ಕೃತಿ'ಯಾದರೆ, ಇಂದಿಗೂ ಕೂಡಾ ಅನಾಗರಿಕ ಹಂತದಲ್ಲಿಯೇ ಇದ್ದುಕೊಂಡು ನಿಧಾನಗತಿಯಲ್ಲಿ ಸುಧಾರಿತವಾಗಬಯಸುತ್ತಿರುವ ಬುಡಕಟ್ಟು ಸಮಾಜಗಳು ಉಪ-ಸಂಸ್ಕೃತಿ ಎನಿಸಿಕೊಳ್ಳುತ್ತವೆ.

ಇಂದು ಮಾನವ ನವನಾಗರಿಕತೆಯ ತುಟ್ಟತುದಿಯಲ್ಲಿ ನಿಂತಿದ್ದಾನೆ. ಚಂದ್ರಲೋಕಕ್ಕೆ ಹೋಗಿ ಬಂದಿದ್ದಾನೆ. ಸಮುದ್ರದ ಒಳಹೊಕ್ಕು ಮುತ್ತನ್ನು ಹುಡುಕಿ ತಂದಿದ್ದಾನೆ. ದೂರದರ್ಶನ, ಸೈಬರ್, ಕಂಪ್ಯೂಟರ್, ಯಂತ್ರಮಾನವ, ಕ್ಷಿಪಣಿ, ರಾಕೆಟ್, ಅಣುಬಾಂಬ್, ಹೀಗೆ ಮತ್ತಿನ್ನೇನನ್ನೋ ಆವಿಷ್ಕರಿಸಿದ್ದಾನೆ. ಇದೆಲ್ಲವನ್ನೂ ಆಧುನಿಕ ಸಂಸ್ಕೃತಿಯ ವಿಕಸಿತ ಪರಾಕಾಷ್ಠತೆ ಅಂತಲೂ ಹೇಳಬಹುದು.

ಹೀಗೆ ಮಾನವ ಒಂದು ಕಡೆ ವೈಜ್ಞಾನಿಕವಾಗಿ ಇಷ್ಟೆಲ್ಲಾ, ಏನೆಲ್ಲಾ ಮುಂದುವರೆದಿದ್ದರೂ ಮುಂದುವರೆಯುತ್ತಿದ್ದರೂ, ಮತ್ತೊಂದೆಡೆ ಆಧುನಿಕ ಮಾನವ ಸಮಾಜದ ನಗರ ಸಂಸ್ಕೃತಿಯ ಸಂಪರ್ಕವೇ ಇಲ್ಲದೆ ಕಾಡುಮೇಡುಗಳಲ್ಲಿ, ಬೆಟ್ಟಗುಡ್ಡಗಳಲ್ಲಿ ಅಲೆಯುತ್ತಾ, ಗೆಡ್ಡೆ ಗೆಣಸು ತಿನ್ನುತ್ತಾ, ಅಜ್ಞಾನ ಅಂಧಕಾರದ ಕೂಪದಲ್ಲಿ ಕೊಳೆಯುತ್ತಿದ್ದರೂ ಆರಾಮದಾಯಕ ಬದುಕೆಂದು ಭ್ರಮಿಸುತ್ತ ಬದುಕು ಸವೆಸುತ್ತಿರುವ ಹತ್ತು ಹಲವಾರು ಆದಿವಾಸಿ ಅಲೆಮಾರಿ ಬುಡಕಟ್ಟು ಜನಾಂಗ (ಉಪ ಸಂಸ್ಕೃತಿ)ಗಳಿರುವುದೂ ಅಷ್ಟೇ ನಿಜ.

ಜನಗಣತಿ ಇಲಾಖೆಯವರ ಪ್ರಕಾರ ಭಾರತದಾದ್ಯಂತ ಆದಿವಾಸಿ ಬುಡಕಟ್ಟುಗಳ ಸಂಖ್ಯೆ ಸುಮಾರು 427 ಎಂದಿದೆ. ಈ ಗುಂಪುಗಳನ್ನು ಪರಿಶಿಷ್ಟ ವರ್ಗಗಳು ಎಂತಲೂ ಪರಿಗಣಿಸಲಾಗಿದೆ. ಈ ಪಂಗಡಗಳಲ್ಲಿ ವಿಭಿನ್ನ ವ್ಯತ್ಯಾಸಗಳಿವೆ. ಅವುಗಳು ಒಂದೇ ಮಟ್ಟದ ಸಂಸ್ಕೃತಿಯನ್ನು ಹೊಂದಿಲ್ಲ. ಭಾಷೆಯನ್ನಾಡುವುದಿಲ್ಲ.

ದಟ್ಟವಾದ ಅರಣ್ಯಗಳಲ್ಲಿ, ಆಳವಾದ ಕಣಿವೆ ಕಂದರ, ಕೊಳ್ಳ ಮೊದಲಾದ ದುರ್ಗಮ ಪ್ರದೇಶಗಳಲ್ಲಿ ವಾಸಿಸುವ ಈ ಬುಡಕಟ್ಟುಗಳು, ಸಾಮಾನ್ಯವಾಗಿ ನಾಗರಿಕ ಸಮಾಜದಿಂದ ದೂರವಿರುತ್ತವೆ. ಮಾನವನು ಅನಾಗರಿಕ ಜೀವನ ನಡೆಸುತ್ತಿದ್ದ ಕಾಲದ ಜೀವಂತ ಚಿತ್ರಣದಂತೆ ಇಂದಿಗೂ ಈ ಜನರ ಪುರಾತನ ಶೈಲಿಯಲ್ಲಿಯೇ ವಾಸಿಸುತ್ತಿರುವುದನ್ನು ಕಾಣಬಹುದಾಗಿದೆ. ಅನೇಕ ತಲೆಮಾರುಗಳಿಂದ ಅನಾಗರಿಕತೆಯ ಮಡುವಿನಲ್ಲಿಯೇ ಬಿದ್ದು ಒದ್ದಾಡುತ್ತಿರುವ ಈ ಜನಾಂಗಗಳ ಸಂಸ್ಕೃತಿಯ ವಿವಿಧ ಪದರುಗಳನ್ನು ಅಭ್ಯಸಿಸಲು ಸಮಾಜಶಾಸ್ತ್ರಜ್ಞರಿಗೆ ಅನುಕೂಲಕರವಾಗಿದೆ.

ಈ ಆದಿವಾಸಿ ಜನಾಂಗಗಳ ಜನರಲ್ಲಿ ಅನೇಕ ಅನಾಗರಿಕ ಅಂಶಗಳಿದ್ದರೂ ಕೆಲವು ಉದಾತ್ತ ಮೌಲ್ಯಗಳನ್ನು ಕಾಣಬಹುದಾಗಿದೆ. ಇವರಲ್ಲಿ ಕಂಡುಬರುವ ತಂದೆ ಮಕ್ಕಳ ನಡುವೆ ಪ್ರೀತಿ, ಗಂಡ-ಹೆಂಡಿರ ಅನ್ಯೋನ್ಯತೆ, ಹಿರಿಯರ ಬಗೆಗೆ ಕಿರಿಯರು ತೋರುವ ಗೌರವ ಭಾವನೆ, ದೇವರ ಮೇಲೆ ಅವರಿಟ್ಟಿರುವ ಶ್ರದ್ಧೆ, ಭಕ್ತಿ, ಸಾಹಸಪ್ರವೃತ್ತಿ, ಮೊದಲಾದ ಅಂಶಗಳು ನಾಗರಿಕ (ಸಂಸ್ಕೃತಿವಂತ) ಜನಾಂಗದ ಜನರನ್ನು ಬೆರಗುಗೊಳಿಸುತ್ತಿವೆ. ರಾಷ್ಟ್ರದಾದ್ಯಂತ ಅನೇಕ ಭಾಗಗಳಲ್ಲಿ ಹರಡಿಕೊಂಡಿರುವ ಈ ಜನರು ವಿವಿಧ ಬುಡಕಟ್ಟುಗಳಿಗೆ ಸಂಬಂಧಿಸಿದವರಾಗಿದ್ದು ವೈವಿಧ್ಯಮಯ ಸಂಪ್ರದಾಯ ಹಾಗೂ ಸಂಸ್ಕೃತಿಗಳನ್ನು ಹೊಂದಿದ್ದಾರೆ.

ಈ ಜನಕ್ಕೆ ಸಾಮಾನ್ಯವಾಗಿ ತಮ್ಮದೇ ಆದ ಒಂದು ನಿಶ್ಚಿತ ಪ್ರದೇಶವಿರುತ್ತದೆ. ವರ್ಷದಲ್ಲಿ ಕೆಲವು ತಿಂಗಳುಗಳು ಬೇರೆಬೇರೆ

ಕಡೆ ಅಲೆಯುತ್ತಾ ಕಾಲಕಳೆದರೂ ಕೊನೆಗೊಂದು ಸಾರಿ ಅಲ್ಲೇ ಬಂದು ಸೇರುತ್ತಾರೆ. ಆ ಪ್ರದೇಶದ ಬಗೆಗೆ ಅವರಿಗೆ ವಿಶೇಷಗೌರವ ಭಾವನೆಯಿರುತ್ತದೆ. ಈ ಸಮುದಾಯದ ಭಾವನೆಯೇ ಆ ಜನಾಂಗಗಳಲ್ಲಿ ಒಮ್ಮತವನ್ನುಂಟು ಮಾಡುವ ಪ್ರೇರಕ ಶಕ್ತಿಯಾಗಿದೆ. ಅವರ ಜೀವನ ಕ್ರಮ ಅತ್ಯಂತ ಸರಳವಾಗಿದ್ದು, ನಾಗರಿಕ ಜೀವನ ಸಾಗಿಸುವ ಜನರಿಗಿಂತ ಅತ್ಯಂತ ಕಡಿಮೆ ಬೇಡಿಕೆಗಳನ್ನು ಹೊಂದಿರುತ್ತಾರೆ.

ಪ್ರತಿಯೊಂದು ಆದಿವಾಸಿ ಜನಾಂಗವೂ ತನ್ನದೇ ಆದ ವಿಶಿಷ್ಟ ಸಂಸ್ಕೃತಿ ಹೊಂದಿದ್ದು, ಆಯುಧ ಹಾಗೂ ಉಪಕರಣಗಳನ್ನು ಉಪಯೋಗಿಸುವುದರಲ್ಲಿ, ಹುಟ್ಟು ಸಾವು, ಬದುಕು, ಎಲ್ಲದರಲ್ಲಿ ತಮ್ಮದೇ ಆದ ವಿಶಿಷ್ಟ ಪದ್ಧತಿಯನ್ನು ಅನುಕರಿಸುತ್ತವೆ. ಬರಗೂರು ರಾಮಚಂದ್ರಪ್ಪ ಅವರು ಹೇಳುವಂತೆ ಅವರಿಗೆ ಪ್ರತ್ಯೇಕ ಧರ್ಮವೆಂಬುದಿಲ್ಲದೆ ಅವರ ಬದುಕೇ ಅವರ ಧರ್ಮವಾಗಿದ್ದು, ಕಲೆ ಆಚರಣೆ ಮೊದಲಾದ ಸಂಪ್ರದಾಯಗಳ ವಿಷಯಗಳಲ್ಲಿ ಕೂಡಾ ಅವರ ಪರಂಪರೆಗಳು ಸಂಕೀರ್ಣವಾಗಿದ್ದು, ನಿಸರ್ಗ ಪೂಜೆ, ವಿಗ್ರಹಗಳ ಆರಾಧನೆ ಮೊದಲಾದ ವಿಶಿಷ್ಟ ಪರಂಪರೆಗಳನ್ನು ಬೆಳೆಸಿಕೊಂಡು ಬಂದಿದ್ದಾರೆ. ನಿಸರ್ಗದ ಎಲ್ಲಾ ಶಕ್ತಿಗಳಿಗೂ ಜೀವ ಹಾಗೂ ಆತ್ಮಗಳಿರುತ್ತವೆ ಎಂಬುದಾಗಿ ನಂಬಿರುತ್ತಾರೆ. ಅನಾಗರಿಕರಾಗಿದ್ದರೂ ಸೌಂದರ್ಯೋಪಾಸಕರೂ ರಸಿಕರೂ ಆಗಿರುತ್ತಾರೆ.

ಈ ಸಂಸ್ಕೃತಿ ಮತ್ತು ಉಪ ಸಂಸ್ಕೃತಿಗಳನ್ನು ಸ್ಥೂಲವಾಗಿ ನೋಡುವುದಾದರೆ, ಊರನ್ನು ಸಂಸ್ಕೃತಿಗೂ, ಕಾಡನ್ನು ಉಪಸಂಸ್ಕೃತಿಗೂ ಸಂಕೇತಿಸಬಹುದಾಗಿದೆ. ಮೂಲತಃ ಮಾನವನ ಬದುಕು ಕಾಡಿನಲ್ಲೇ ಆರಂಭವಾಗಿ ಬೆಟ್ಟ ಗುಡ್ಡ ಹಳ್ಳಕೊಳ್ಳಗಳಲ್ಲಿ ಅಲೆಯುತ್ತ ಕಷ್ಟದಾಯಕವಾಗಿ ಬದುಕುತ್ತಿದ್ದು, ಕಾಲಾನಂತರ ವಿಕಾಸಗೊಂಡು ಊರನ್ನು ಸೃಷ್ಟಿಸಿಕೊಂಡ, ಒಂದೆಡೆ ನೆಲೆನಿಂತ ಸಂಸ್ಕೃತಿಯನ್ನು 'ಸುಖ ಸಂಸ್ಕೃತಿ' ಎಂತಲೂ, ಇನ್ನೂ ಮೂಲಾವಸ್ಥೆಯಲ್ಲೇ ಬದುಕುತ್ತಿರುವ ಕಾಡಿನ ಉಪಸಂಸ್ಕೃತಿಯನ್ನು 'ಶ್ರಮಸಂಸ್ಕೃತಿ' ಎಂತಲೂ ಕರೆಯಬಹುದಾಗಿದೆ.

"ಹೀಗೆ ಸುಖ ಸಂಸ್ಕೃತಿಗೆ ಸೇರಿದ ಶ್ರೀರಾಮ, ಹರಿಶ್ಚಂದ್ರ, ಧರ್ಮರಾಯರಿಗೆಲ್ಲಾ ಶಿಕ್ಷೆ ಕೊಡುವ ಕಾರಣದಿಂದ ಊರುಬಿಡಿಸಿ, ಕಾಡು ಸೇರುವಂತೆ ಮಾಡಲಾಯಿತು. ವಿಕಾಸ ಹೊಂದಿದ ಸಂಸ್ಕೃತಿಯ ಸುಖ ಸಂಪತ್ತಿನ ಕೇಂದ್ರ ಸ್ಥಾನದಲ್ಲಿರುವವರನ್ನು ಶತಶತಮಾನಗಳಷ್ಟು ಪ್ರಾಚೀನವಾದ ಶ್ರಮಸಂಸ್ಕೃತಿಯ ವಲಯಕ್ಕೆ ಕಳಿಸಿದಾಗ ಅದು ನಿಜಕ್ಕೂ ಒಂದು ಶಿಕ್ಷೆಯೇ.

ಊರು ಮತ್ತು ಕಾಡುಗಳ ಚರ್ಚೆಯಲ್ಲಿ ಗಮನಿಸಬೇಕಾದ ಅಂಶ ಕಾಡೊಳಗೆ-ಕಾಡಂಚಿನಲ್ಲಿ, ಊರೊಳಗೆ-ಊರಂಚಿನಲ್ಲಿ 'ಉಪಸಂಸ್ಕೃತಿ'ಯ ನೆಲೆಗಳು ಇರುತ್ತವೆ ಎಂಬುದು. ಕಾಡಿನಿಂದ ಊರಿಗೆ ಬಂದಾಗಲೂ ಸಂಸ್ಕೃತಿಯ ಮೂಲ ರೂಪಿಕೆಗಳು ಮರೆಯಾಗಿದಿದ್ದರೆ ಅಂಥವರೂ ಉಪಸಂಸ್ಕೃತಿಯ ಕಕ್ಷೆಗೇ ಬರುತ್ತಾರೆಂಬ ತಿಳಿವಳಿಕೆಯಿಂದ ಊರೊಳಗೂ ಉಪಸಂಸ್ಕೃತಿಗಳು ಇರುತ್ತವೆ.

ಈ ದೃಷ್ಟಿಯಿಂದ ನೋಡಿದಾಗ, ನಮ್ಮದು ಬಹು ಸಂಸ್ಕೃತಿಗಳ ದೇಶ; ಉಪಸಂಸ್ಕೃತಿಗಳ ದೇಶ. ಸಂಸ್ಕೃತಿ ಎನ್ನುವುದೇ ಉಪಸಂಸ್ಕೃತಿಗಳ ಒಂದು ಕೂಟ. ಇನ್ನೂ ಮುಂದುವರೆದು ಹೇಳುವುದಾದರೆ, ನಮ್ಮದು ಉಪಸಂಸ್ಕೃತಿಗಳ ವಿಶ್ವ. ಇಂಡಿಯಾಕ್ಕೆ ಹೋಲಿಸಿದರೆ ಕರ್ನಾಟಕವೇ ಒಂದು ಉಪಸಂಸ್ಕೃತಿ. ವಿಶ್ವಕ್ಕೆ ಹೋಲಿಸಿದರೆ ಈ ಇಂಡಿಯಾ ತನ್ನೊಳಗೆ ನೂರಾರು ಉಪಸಂಸ್ಕೃತಿಗಳನ್ನು ಒಳಗೊಂಡಿರುವುದೇ ಒಂದು ವೈಶಿಷ್ಟ್ಯ. ಇದು ಇಡೀ ವಿಶ್ವದ ವೈಶಿಷ್ಟ್ಯ (ಸಂಸ್ಕೃತಿ-ಉಪಸಂಸ್ಕೃತಿ-ಬರಗೂರು ರಾಮಚಂದ್ರಪ್ಪ).

ಪ್ರತಿ ಸಂಸ್ಕೃತಿ ನಿರ್ಮಿತಿಯ ಯಶಸ್ಸಿರುವುದು ಸಂಸ್ಕೃತಿಯ ಸಂಪೂರ್ಣ ನಾಶದಿಂದಲ್ಲ. ಆ ರೀತಿ ಆದದ್ದೇ ಆದರೆ, ಸಾಂಗವಾಗಿ ಚಲಿಸುತ್ತಿರುವ ಹಡಗಿನಲ್ಲಿ ಬೇಕೆಂತಲೇ ತೂತು ಕೊರೆದು ಕೊಂಡು ತಂತಾನೇ ಮುಳುಗಿ ಹೋಗುವಂತಹ ಅಪಾಯಕ್ಕೆ ಆಹ್ವಾನ ನೀಡಿದಂತಾಗುತ್ತದೆ. ಬದಲಿಗೆ, ಯಜಮಾನ ಸಂಸ್ಕೃತಿ ಧೋರಣೆಯನ್ನು ನಿರಾಕರಿಸುತ್ತಲೇ ತನ್ನ ಸಂಸ್ಕೃತಿಯನ್ನು ಬಲಿಷ್ಠ ಗೊಳಿಸಿಕೊಳ್ಳುವುದು. ನೆರಳಿನಂತೆ ಕಾಡುತ್ತಿರುವ ತನ್ನ ಕೀಳಿರಿಮೆಯನ್ನು ಕಿತ್ತೆಸೆಯುವುದು. ಹಾಗೂ ಶತಶತಮಾನಗಳಿಂದ ಕಂಠಪೂರ್ತಿ ತುಂಬಿಕೊಂಡಿರುವ 'ಅಸಹಾಯಕತೆ' ಎಂಬ ಪಾಷಾಣವನ್ನು ಬಲವಂತವಾಗಿಯಾದರೂ ಕಕ್ಕಿ ಮನಸ್ಸನ್ನು ಹಗುರ ಮಾಡಿಕೊಳ್ಳುವುದು.

ಪೂರ್ವ ತಯಾರಿಯಿಲ್ಲದೇ, ಯುಕ್ತಾಯುಕ್ತ ವಿವೇಚನೆ ಹಾಗೂ ಸರಿಯಾದ ಬದ್ಧತೆಯಿಲ್ಲದೆ ಕೈಹಾಕಿದ ಯಾವುದೇ ಕೆಲಸವಾದರೂ ಸರಿ, ಅರ್ಧಕ್ಕೆ ಮುರಿದುಕೊಳ್ಳುವುದು. ಇದ್ದದ್ದನ್ನು ಕಳೆದುಕೊಂಡು ಅನಾಥ ಪ್ರೇತತ್ವಕ್ಕೆ ಆಹ್ವಾನ ನೀಡುವಂತಾಗುವುದರಲ್ಲಿ ಎಳ್ಳಷ್ಟೂ ಅನುಮಾನವಿಲ್ಲ. ಯಾವುದೇ ಒಂದು ಬೀಳಲು ತಾನು ಮರದಿಂದ ಪಡೆದುಕೊಂಡಿದ್ದ ಪರಾವಲಂಬಿತನದ ಆಶ್ರಯದಿಂದ ಕಳಚಿಕೊಳ್ಳುವ ಮುನ್ನ ಭೂಮಿಯಲ್ಲಿ ಬೇರುಬಿಟ್ಟು ಸ್ವಂತ ಅಸ್ತಿತ್ವ ಪಡೆದುಕೊಳ್ಳುವುದು ಅತ್ಯವಶ್ಯಕ. ಈ ನಿಟ್ಟಿನಲ್ಲಿ ಪ್ರತಿಸಂಸ್ಕೃತಿ ನಿರ್ಮಿತಿ ಕಾರ್ಯ ಕೂಡಾ ಸಂಕೀರ್ಣ ಹಾಗೂ ಜಟಿಲತೆಯದ್ದಾಗಿರುತ್ತದೆ. ಶತಮಾನಗಳಿಂದ ಧಣಿಗಳ ಹಿತಕ್ಕಾದ ಸಂಸ್ಕೃತಿಯನ್ನೇ ತಮ್ಮದೆಂದು ನಂಬಿದ್ದು, ಸ್ವಂತಿಕೆ ಎಂಬುದನ್ನು ಕನಸಿನಲ್ಲಿಯೂ ಕಲ್ಪಿಸಿಕೊಳ್ಳದಿದ್ದ ಜನ ಈಗ ಏಕಾಏಕಿ ಧಣಿಸಂಸ್ಕೃತಿಯ ಮೇಲಿನ ಸಿಟ್ಟಿನ ಭರದಲ್ಲಿ ಮತ್ತೊಂದಕ್ಕೆ ಜೋತು ಬೀಳುವುದು ಎಂದರೆ ಬಾಣಲೆಯಿಂದ ಬೆಂಕಿಗೆ ಬಿದ್ದಂತೆಯೇ ಸರಿ.

ಇದಕ್ಕೊಂದು ಉದಾರಹಣೆ ಎಂದರೆ, ಆದಿಯಿಂದಲ್ಲೂ ಹಿಂದೂ ಧರ್ಮದ ತುಳಿತಕೊಳ್ಳಗಾದ ಹರಿಜನರು ಅಬ್ಬರದ ಪ್ರಚಾರದಿಂದ ಮೇಳೈಸಿದ ಕ್ರೈಸ್ತಧರ್ಮಕ್ಕೆ ಮತಾಂತರಗೊಂಡು, ಇಲ್ಲಿನ ಸಂಪದ್ಯುಕ್ತವಾದ ಮೀಸಲಾತಿಯಿಂದಲೂ ವಂಚಿತವಾಗಿ ಅಲ್ಲಿ ಅವರ ಸರಿಸಮಾನ ಮಟ್ಟಕ್ಕೂ ಏರಲಾಗದೆ, ಒಂದೇ ಮಾತಿನಲ್ಲಿ ಹೇಳುವುದಾದರೆ ಇಲ್ಲೂ ಸಲ್ಲದೆ, ಅಲ್ಲೂ ಸಲ್ಲದೆ ತಾವೇ ತಮ್ಮ ಕೈಯಾರ ನಿರ್ಮಿಸಿಕೊಂಡ ವಿಶ್ವಾಮಿತ್ರ ಸೃಷ್ಟಿಯಲ್ಲಿ ತೊಳಲುತ್ತಿರುವುದನ್ನು ಕಾಣಬಹುದು.

ಈ ಮಾತಿನ ಹಿಂದಿನ ಆಶಯ ಯಥಾಸ್ಥಿತಿಯನ್ನು ಬೆಂಬಲಿಸುವುದು ಎಂದಲ್ಲ. ಬದಲಾಗಬೇಕು ನಿಜ. ಆ ಬದಲಾವಣೆ ಸ್ವಂತಿಕೆಯ ನೆಲಗಟ್ಟಿನಲ್ಲಿ, ಸಮಾನತೆಯ ಅಡಿಪಾಯದ ಮೇಲೆ ಆಗಬೇಕು. ಕೋಳಿ ಎಂದೋ ಹಾಕಿದ ಮೊಟ್ಟೆಗಳು ಇಂದು ಮರಿಯಾಗಲು ಸಿದ್ಧವಾಗಿವೆ. ಮರಿಯಾದ ತಕ್ಷಣ ರಕ್ಷಿಸಲು ಪಂಜರಗಳನ್ನು ಸಿದ್ಧಗೊಳಿಸಬೇಕು. ಇಲ್ಲದಿದ್ದರೆ ಯಾವುದೋ ಹದ್ದಿಗೆ ಆಹಾರವಾಗುವುದರಲ್ಲಿ ಆಶ್ಚರ್ಯವಿಲ್ಲ.

ಕೊಳವೆಯಿಂದ ಊದಿದಂತೆಲ್ಲಾ ಬೆಂಕಿಯ ಕಾವು ಹೆಚ್ಚುತ್ತಲೇ ಹೋಗುತ್ತದೆ. ಆದ್ದರಿಂದ ಧಣಿ ಸಂಸ್ಕೃತಿಯ ಬಗ್ಗೆ ದ್ವೇಷವೂ ಬೇಡ. ತನ್ನ ಸಂಸ್ಕೃತಿಯ ಬಗ್ಗೆ ಕೀಳರಿಮೆಯೂ ಸಲ್ಲ. ತನ್ನ ಹುಳುಕನ್ನ ಮುಚ್ಚಿಕೊಳ್ಳುವುದರ ಬದಲು ಬೇರು ಸಮೇತ ಕಿತ್ತೆಸೆಯುವುದರತ್ತ ದೃಢಮನಸ್ಸು ಮಾಡಬೇಕು. ಬಿಂದಿಗೆಯನ್ನು ಬಾವಿಗೆ ಬಿಡುವ ಮೊದಲೇ ಅದರಲ್ಲಿರುವ ತೂತುಗಳನ್ನು ಮುಚ್ಚಬೇಕು. ನಿಮ್ಮದು ಮೇಲೂ ಅಲ್ಲ, ನಮ್ಮದು ಕೀಳು ಅಲ್ಲ. ನಿಮ್ಮಷ್ಟಕ್ಕೆ ನಿಮ್ಮದು ಮೇಲಾದರೆ, ನಮ್ಮಷ್ಟಕ್ಕೆ ನಮ್ಮದು ಮೇಲು, ನಿಮ್ಮ ಹತ್ತು ಎಕರೆ ಜಮೀನಿನಲ್ಲಿ ಜೀತದ ಆಳಾಗಿ ದುಡಿದು ಅನ್ನ ಉಣ್ಣುವ ಬದಲು ನನ್ನ ಅರ್ಧ ಎಕರೆ ಜಮೀನಿನಲ್ಲಿ ಸ್ವಂತಿಕೆಯಿಂದ ದುಡಿದು ಅಂಬಲಿ ಕುಡಿಯುತ್ತೇನೆ ಎಂಬ ದಾರ್ಷ್ಟ್ಯತೆ ಬರಬೇಕು. ನೀರು ಕಂಡಾಕ್ಷಣ ತಲೆಮೇಲಿನ ಕೊಳೆ ತೊಳೆದು ಕೊಳ್ಳುವುದಲ್ಲ; ತಲೆಯೊಳಗಿನ ಲದ್ದಿ ತೊಳೆದುಕೊಳ್ಳಬೇಕು.

ಇತ್ತೀಚೆಗೆ ಸರ್ಕಾರ ಹಮ್ಮಿಕೊಂಡ ಜೀತಪದ್ಧತಿ ವಿಮುಕ್ತಿ ಹಾಗೂ ಜೀತಗಾರರ ಪುನರ್ವಸತಿ ಕಾರ್ಯಕ್ರಮದಡಿಯಲ್ಲಿ ಬೆಳಗಾಗುವುದರೊಳಗಾಗಿ ಎಲ್ಲಾ ಜೀವದ ಮಕ್ಕಳೂ ತಮ್ಮ ಧಣಿಗಳ ಹಟ್ಟಿಯನ್ನು ತೊರೆದು ತಮ್ಮ ಗುಡಿಸಲಿನತ್ತ ಹೆಜ್ಜೆ ಇಟ್ಟರು ನಿಜ. ಆದರೆ ಅವರು ಜೀತ ಪದ್ಧತಿಯನ್ನು ತೊರೆದದ್ದು ಜೀತಪದ್ಧತಿಗೆ ಹೇಸಿಗೆ ಪಟ್ಟು ಅಲ್ಲ. ಧಣಿಗೆ ಕೊಡಬೇಕಾದ ಜೀತದ ಹಣದಿಂದ ಪಾರಾದೆವು ಎಂದು. ಹಾಗೆ ಮುಕ್ತರಾದ ಎಷ್ಟೋ ಜನರು ಮತ್ತೊಂದು ಊರಿನಲ್ಲಿ ದಿನಗೂಲಿಗಳಾಗಿ ದಣಿವಿಲ್ಲದೇ ದುಡಿಯುತ್ತಿರುವುದನ್ನು ಈಗಲೂ ಕಾಣಬಹುದು.

ಅವರ ದೇವಸ್ಥಾನಗಳಿಗೆ ನಾವು ನುಗ್ಗುವುದರಿಂದ ನಮ್ಮಗಳ ಸ್ಥಾನಮಾನ ಗಗನಕ್ಕೇರುತ್ತದೆಂಬ, ಬೇರೊಂದು ಧರ್ಮಕ್ಕೆ ಮತಾಂತರಗೊಳ್ಳುವುದರ ಮೂಲಕ ಯಜಮಾನ ಸಂಸ್ಕೃತಿಗಳ ಮೇಲೆ ಸೇಡು ತೀರಿಸಿಕೊಳ್ಳುತ್ತೇವೆಂಬ ಭ್ರಮೆಯಿಂದ ಎಂದಿಗೂ ಈ ಅಸಮತೋಲನ ನಿರ್ಮೂಲನವಾಗುವುದಿಲ್ಲ. ಈ ಮಾರ್ಗದಲ್ಲಿಯೇ ಪರಿಹಾರ ಕಂಡುಕೊಳ್ಳುತ್ತೇವೆಂಬುದು ಇರುಳು ಕಂಡ ಬಾವಿಗೆ ಹಗಲು ಬಿದ್ದಂತೆಯೇ ಸರಿ. ಈ ಅಸಮತೋಲನಕ್ಕೆ ಕೇವಲ ಹಲುಬುತ್ತ, ಆಕ್ರೋಶಗೊಳ್ಳುತ್ತ ಮೈ ಪರಚಿಕೊಳ್ಳುವುದರ ಬದಲು

ತಮ್ಮನ್ನಾವರಿಸಿಕೊಂಡಿರುವ ಮಲಿನತೆ ಹಾಗೂ ಮೌಢ್ಯತೆಯಿಂದ ಮೈಕೊಡವಿಕೊಂಡು ಮೇಲೇಳಬೇಕು. ಕಿರುಚಾಡುವುದರಿಂದ ಕತ್ತಲು ತೊಲಗುವುದಿಲ್ಲ. ದೀಪ ಹೊತ್ತಿಸಬೇಕು. ನಿಮ್ಮ ದೇವರ ಮೆರವಣಿಗೆಯನ್ನು ನಮ್ಮ ಬೀದಿಗೂ ತನ್ನಿ ಎನ್ನುವ ಮುಂಚೆ, ನಮ್ಮ ಅಂಗಳದ ಸ್ವಚ್ಛತೆಯತ್ತ ಗಮನ ಹರಿಸುವುದು ಒಳಿತು. ಒಂದೆಡೆ ಸಮಾನತೆ, ಶ್ರೇಷ್ಠತೆ ಕೇಳುತ್ತ ಮತ್ತೊಂದೆಡೆ ದಣಿಹಟ್ಟಿಯಲ್ಲಿ ಸತ್ತು ಬಿದ್ದ ಎಮ್ಮೆಗಾಗಿ ಜೊಲ್ಲು ಸುರಿಸುವುದಲ್ಲ. "ಹುಲ್ಲನ್ನಾದರೂ ತಿಂದೇನು. ಹೊಲ್ಲಸನ್ನಲ್ಲ" ಎಂಬ ದೃಢತೆ ಬಂದಾಗಲೇ ಅಸಮತೋಲನದ ಸದ್ದಡಗುವುದು, ಶ್ರೇಷ್ಠತೆಯ ಅರುಣೋದಯವಾಗುವುದು ಸಾಧ್ಯ.

ಈ ಪ್ರತಿಸಂಸ್ಕೃತಿ ನಿರ್ಮಿತಿ ಕಾರ್ಯ ಕೇವಲ ಒಂದು ಸಂಸ್ಕೃತಿಯ ನೆಲೆಗಟ್ಟಿನಲ್ಲಿ ಅಥವಾ ಒಂದು ವರ್ಗದ ವಿರುದ್ಧವಾಗಿ ಮಾತ್ರವೇ ನಡೆಯುತ್ತಿಲ್ಲ ಎಂಬುದು ಗಮನಾರ್ಹ. ಆಯಾ ವರ್ಗಗಳಲ್ಲಿ ಪ್ರಮಾಣಕ್ಕನುಗುಣವಾಗಿ ಅಂತರ ಇರಬಹುದು ಅಷ್ಟೆ. ಆದಿಯಿಂದಲೂ ನಮ್ಮ ದೇಶದಲ್ಲಿ ಸಂಸ್ಕೃತಿ ವೈಶಿಷ್ಟ್ಯದ ಹೆಚ್ಚುಗಾರಿಕೆ ಎಂದರೆ, ಶೇಕಡ ತೊಂಬತ್ತಕ್ಕಿಂತಲೂ ಹೆಚ್ಚಿಗೆ ಇರುವ ವರ್ಗಗಳ ಸೂತ್ರದ ಕುಣಿಕೆ ಶೇಕಡಾ ಹತ್ತಕ್ಕಿಂತಲೂ ಕಡಿಮೆ ಇರುವ ವರ್ಗದ ಕೈಯಲ್ಲಿರುವುದು. ಇಂದಿಗೂ ಕೂಡಾ ಆ ವರ್ಗದ ಕಪಿಮುಷ್ಟಿಯಿಂದ ಕಳಚಿಕೊಳ್ಳಲಾಗದೆ ಪರದಾಡುತ್ತಿರುವುದು.

ಪ್ರಸ್ತುತ ಶ್ರೇಣೀಕೃತ ಸಮಾಜದಲ್ಲಿ 'ಅ' ಎಂಬ ಪುರೋಹಿ ಸಂಸ್ಕೃತಿಯ ಎದುರು 'ಆ' ಎಂಬ ಮತ್ತೊಂದು ವರ್ಗದ ಸಂಸ್ಕೃತಿ (ಸಂಖ್ಯಾದೃಷ್ಟಿಯಲ್ಲಿ ಪ್ರಥಮ ಸ್ಥಾನದಲ್ಲಿದ್ದರೂ) ಒಂದು ಮೆಟ್ಟಿಲು ಕೆಳಗುಳಿಯುತ್ತದೆ. ಈ ಎರಡರ ಎದುರು ನಿಂತ 'ಇ' ಮತ್ತು 'ಈ' ಎಂಬೆರಡು ಸಮಾನ ವರ್ಗಗಳು ಹಾಗೂ ಇನ್ನಿತರ ವರ್ಗಗಳು ಅವಕ್ಕಿಂತಾ ಕೆಳಗಿನ ಮೆಟ್ಟಿಲಾಗಿ ಉಳಿಯುತ್ತವೆ. ಹಾಗೆಯೇ ಈ ಎಲ್ಲವುಗಳ ಎದುರು ಅಸ್ಪೃಶ್ಯರು ನಿಕೃಷ್ಟರಾಗುತ್ತಾರೆ.

ಆಹಾರ ಹಾಗೂ ಉಡುಗೆ ತೊಡುಗೆಗಳಲ್ಲಿ ಸರಿಸಮಾನರಾಗಿದ್ದರೂ ವೈವಾಹಿಕ ಸಂಬಂಧ ಬೆಳೆಸುವುದರಲ್ಲಿ ಹಿಂಜರಿಯುವ ಮೂಲಕ ತಲೆತಲಾಂತರದಿಂದ 'ಅ' ವರ್ಗಕ್ಕಿಂತ ಸ್ವಲ್ಪ ತಾವು ಕೀಳೆಂಬುದನ್ನು 'ಆ' ವರ್ಗವು ತಂತಾನೇ ಒಪ್ಪಿಕೊಂಡಿದೆ. ಉಡುಗೆ ತೊಡುಗೆಗಳಲ್ಲಿ ಸಮನಾಗಿದ್ದರೂ ಆಹಾರಾಭ್ಯಾಸಗಳಲ್ಲಿ ಭಿನ್ನರಾಗಿರುವ 'ಇ' ಮತ್ತು 'ಈ' ಹಾಗೂ ಇನ್ನಿತರ ವರ್ಗಗಳು 'ಅ' ವರ್ಗವನ್ನು ತಮ್ಮ ಪುರೋಹಿತರೆಂದು ಒಪ್ಪಿಕೊಂಡು ಅವರನ್ನು ದೇವರ ಗರ್ಭ ಗುಡಿಯೊಳಗೆ ಬಿಟ್ಟು ತಾವು ಹೊರಗೇ ನಿಂತು ಅವರು ಕೊಡುವ ತೀರ್ಥಕ್ಕೆ ಕೈ ಒಡ್ಡುವ ಮೂಲಕ ಹಾಗೂ ತಮ್ಮ ಮನೆಗಳಲ್ಲಿ ನಡೆಯುವ ಮದುವೆ ಇತ್ಯಾದಿ ಶುಭಕಾರ್ಯಗಳಿಗೂ ಅವರನ್ನೇ ಆಹ್ವಾನಿಸುವ ಮೂಲಕ ನಾವು ನಿಮಗಿಂತಾ ಕೀಳೆಂಬುದನ್ನು ತಂತಾನೇ ಒಪ್ಪಿಕೊಂಡಿದ್ದಾರೆ. ಹಾಗೆಯೇ ಉಡುಗೆ, ತೊಡುಗೆ, ಆಹಾರ ಪದ್ಧತಿ ಹಾಗೂ ಸ್ವಚ್ಛತೆಗಳಿಲ್ಲದ್ದರಿಂದಲೂ ಭಿನ್ನರಾದ ಅಸ್ಪೃಶ್ಯರು ಇವರೆಲ್ಲರೂ ಇರುವ ಊರುಗಳಿಂದ ಹೊರಗುಳಿಯುವ ಮೂಲಕ ಇವರೆಲ್ಲರ ಶುಭಕಾರ್ಯಗಳಿಗೆ ತಮಟೆ ಬಡಿಯುವುದರಲ್ಲಿ ಪರವಶರಾಗಿ ಮೈಮರೆಯುವ ಮೂಲಕ ನಿಮ್ಮೆಲ್ಲರಿಗಿಂತಲೂ ನಾವು ನಿಕೃಷ್ಟರೆಂಬುದನ್ನು ತಾವೇ ನಿರ್ಧರಿಸಿಕೊಂಡಿದ್ದಾರೆ.

ಪ್ಲಾಸ್ಟೋ ಪ್ಯಾರಿಸಿನಂತಹ ನಾಜೂಕಿನ ಪೇಸ್ಟ್ ಲೇಪಿಸಿ ನಿರ್ಮಿಸಿದ ಈ ಶ್ರೇಣೀಕೃತ ವ್ಯವಸ್ಥೆಯಲ್ಲಿ ಮುಂದೊಂದು ದಿನ ಬಿರುಕುಗಳು ಕಾಣಿಸಿಕೊಳ್ಳಬಹುದು ಅಥವಾ ತಿರುಗು ಮುರುಗಾಗಬಹುದೆಂಬ ಮುಂದಾಲೋಚನೆಯ ಹುನ್ನಾರದಿಂದ 'ಅ' ಎಂಬ ಪುರೋಹಿತ ವರ್ಗವು ಇನ್ನಿತರ ಕೆಳವರ್ಗಗಳಿಗೆ ಅರಿವಿನ ಮೂಲವಾದ ವಿದ್ಯೆಯನ್ನೇ ಕೊಡದೆ ವಂಚಿಸಿತು. 'ಆ' ವರ್ಗಕ್ಕೆ ಪೂಜೆ ಪುನಸ್ಕಾರಗಳಲ್ಲಿ ಅಲ್ಪಸ್ವಲ್ಪ ಸ್ಥಾನ ಕಲ್ಪಿಸಿಕೊಟ್ಟು ಮಿಕ್ಕ ಕೆಳವರ್ಗಗಳ ಮೇಲೆ ಎತ್ತುಕಟ್ಟುವ ಮೂಲಕ ಅವರನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿತು. ಹಾಗೆಯೇ 'ಇ' ಮತ್ತು 'ಈ' ವರ್ಗಗಳಿಗೆ ಊರು ನ್ಯಾಯ ಪಂಚಾಯಿತಿ ಹಾಗೂ ಆಡಳಿತಾತ್ಮಕವಾಗಿ ಮುಂದಾಳತ್ವ ವಹಿಸುವ ಗೌಡಿಕೆತನ ಕಲ್ಪಿಸುವ ಮೂಲಕ ಅವರ ಪ್ರತಿಭಟಿಸುವ ಹಕ್ಕನ್ನೇ ಕಸಿದುಕೊಂಡಿತು. ನೀವು ದೇವರಿಗೆ ತುಂಬಾ ಬೇಕಾದವರು ಆದ್ದರಿಂದ ನಿಮ್ಮ ಸೇವೆಯಿಲ್ಲದೆ ದೇವರ ಯಾವ ಮಂಗಳ ಕಾರ್ಯಗಳೂ ನಡೆಯುವುದಿಲ್ಲ ಎಂದು ಪುಸಲಾಯಿಸುವ ಮೂಲಕ ಅಸ್ಪೃಶ್ಯರನ್ನು ಸಾಕಷ್ಟು ದೂರದಲ್ಲಿಯೇ ಉಳಿಸಿತು.

ಈ ರೀತಿಯಾಗಿ ಮೇಲ್ವರ್ಗದ ಪುರೋಹಿತಶಾಹಿ ಸಂಸ್ಕೃತಿಯು ತನ್ನ ಹಿತಕ್ಕನುಗುಣವಾಗಿ ಕೆಳವರ್ಗಗಳಲ್ಲಿ ನಿರ್ಮಾಣವಾಗಬಹುದಾದಂತಹ ಪ್ರತಿ ಸಂಸ್ಕೃತಿಯ ಸಾಧ್ಯತೆಯ ಬೇರುಗಳನ್ನೆಲ್ಲಾ ಒಣಗಿಸುತ್ತಾ ಬಂದರೂ, ಬೇಸಿಗೆಯಲ್ಲಿ ಒಣಗಿಸಿಕೊಂಡಿದ್ದ ಗರಿಕೆಬೇರು ಮಳೆ ಬಿದ್ದೊಡನೇ ತಲೆ ಎತ್ತುವಂತೆ, ಆಂಗ್ಲರ ಆಗಮನದಿಂದಾಗಿ ತಮಗೂ ದಕ್ಕಿದ ವಿದ್ಯೆಯ ಬೆಳಕಿನಲ್ಲಿ ಕೆಳವರ್ಗಗಳು ತಮ್ಮತನವನ್ನು ಹುಡುಕಿಕೊಳ್ಳತೊಡಗಿದವು. ತತ್ಪರಿಣಾಮವಾಗಿ ಯಾವ ಪುರೋಹಿತ ವರ್ಗವೂ ಮುಂದೆಂದೂ ಆಗಲೇಬಾರದೆಂದು ಬಯಸಿತ್ತೋ ಅದೆಲ್ಲಾ ಬದಲಾವಣೆಗಳು ಆಗತೊಡಗಿದವು.

ಬಹಳ ಹೊತ್ತು ಕತ್ತಲಿನಲ್ಲಿಯೇ ಇದ್ದವರಿಗೆ, ಬೆಳಕಿಗೆ ಬಂದೊಡನೆಯೇ ಕಣ್ಣು ಬಿಡುವುದು ಕಷ್ಟ. ಕಣ್ಣು ಕುಕ್ಕಿದಂತಾಗುತ್ತದೆ. ಮನಸ್ಸಿಗೊಂದು ರೀತಿಯ ಭ್ರಮೆಯು ತಡವರಿಕೆ ಕವಿಯುತ್ತದೆ. ಹಾಗೆಯೇ ಆಗಿದೆಯೇನೋ ಎಂದೆನಿಸುತ್ತದೆ ಈ ಕೆಳವರ್ಗಗಳಲ್ಲಾಗುತ್ತಿರುವ ಬದಲಾವಣೆಯ ಹೆಜ್ಜೆ ಗುರುತುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಸ್ವಂತಿಕೆಯ ನೆಲಗಟ್ಟಿನ ಮೇಲೆ ತಮ್ಮತನವನ್ನು ಕಟ್ಟಿಕೊಳ್ಳುವ ಬದಲು, ಭೂಗರ್ಭದೊಳಕ್ಕೆ ಬೇರಿಳಿಸಿ ನೀರು ಸಾರವನ್ನು ಹೀರಿ ಮೇಲೆತ್ತರಕ್ಕೆ ಬೆಳೆಯುವ ಬದಲು, ಅವರಂತೆಯೇ ಮಠಮಾನ್ಯಗಳನ್ನು ಕಟ್ಟಿಕೊಂಡು, ಅದರಲ್ಲೇ ತಮ್ಮೆಲ್ಲಾ ಬಾಹುಗಳನ್ನು ಬಂಧಿಸಿಕೊಳ್ಳುತ್ತಿದ್ದಾರೆ. ಅಷ್ಟೂ ಸಾಲದಂತೆ ಪುರೋಹಿತ ವರ್ಗದ ರೀತಿರಿವಾಜುಗಳನ್ನೇ ಚಾಚೂ ತಪ್ಪದೆ ಅನುಸರಿಸುವ ಮೂಲಕ ಅವರಿಗೆ ಸರಿಸಾಟಿಯಾಗಿ ನಿಲ್ಲಬಹುದು ಎಂಬ ಭ್ರಮೆಯಲ್ಲಿ ಸಮಯ ಹಾಗೂ ಶ್ರಮವನ್ನೆಲ್ಲಾ ವ್ಯರ್ಥಗೊಳಿಸುತ್ತಿರುವುದು ಸಮಂಜಸವಲ್ಲ.

ದಾಸಯುಗದ ಹಾಗೂ ಜಗದ ಅತ್ಯಂತ ಶ್ರೇಷ್ಠ ಕವಿ ಕನಕದಾಸರೇ ರಚಿಸಿರುವ ಹಲವಾರು ಅತ್ಯುತ್ತಮ ಕೀರ್ತನೆಗಳು ಕಣ್ಣೆದುರೇ ಇದ್ದರೂ ಅವುಗಳ ತಂಟೆಗೇ ಹೋಗದೇ ಪ್ರಾರ್ಥನೆಯಲ್ಲಿ ಸಂಸ್ಕೃತಿ ಶ್ಲೋಕಗಳನ್ನೇ ಬಳಸುತ್ತಿದ್ದಾರೆ, ಬಹಳ ಪ್ರೀತಿಯಿಂದ ಕಾಗಿನೆಲೆಯ ಕನಕ ಗುರು ಪೀಠದಲ್ಲಿ. ಹಾಗೆಯೇ ಆದಿಚುಂಚನಗಿರಿ ಮಠಗಳಲ್ಲೂ ಸಹಜವೇ ಉಪನಿಷತ್ತುಗಳನ್ನು ಕಲಿಸುತ್ತಿದ್ದಾರೆ ಭಕ್ತಿಗೌರವಗಳಿಂದ. ಜೊತೆಗೇ ವೈದಿಕ ಸಂಸ್ಕೃತಿಯ ಪ್ರತಿರೂಪವಾಗಿ ಹಲವು ವಟುಗಳನ್ನು ತಯಾರುಮಾಡಿ, ಮಠದ ಕಾರ್ಯಕ್ರಮದ ಮೊದಲಿಗೆ ವೇದಘೋಷ ನಡೆಸುತ್ತಾರೆ.

'ಇಲ್ಲಿ ನೀವು ಸಂಸ್ಕೃತದಲ್ಲಿ ಮಾತನಾಡಬಹುದು' ಎಂದು ಕೆಲವು ಮನೆಗಳಲ್ಲಿ ಬೋರ್ಡ್ ಹಾಕಿರುವುದನ್ನು ಇತ್ತೀಚೆಗೆ ಕಾಣಬಹುದು. ತಮಗೆ ದಕ್ಕದ ಪಾವಿತ್ರ್ಯನಾಶ ಹಾಗೂ ನಿರಾಕರಣೆ ಒಂದೆಡೆ ನಡೆದರೆ, ಅದನ್ನು ಗಟ್ಟಿಗೊಳಿಸುವಿಕೆ, ಪುನರುಜ್ಜೀವನಗೊಳಿಸುವಿಕೆ ಪ್ರತಿಯಾಗಿ ಮತ್ತೊಂದು ಕಡೆ ನಡೆಯುತ್ತದೆ.

'ಸಂಸ್ಕೃತ ನಿರಾಕರಣೆಯಿಂದ ಕನ್ನಡ ವಿನಾಶ' ಎಂಬ ವಾತಾವರಣವಿದ್ದಾಗ್ಯೂ, ಆ ಕಾಲದಲ್ಲೇ ಸ್ವಪ್ರಯತ್ನ ಪೂರ್ವಕವಾಗಿ 'ಕಬ್ಬಿಗರ ಕಾವ' ರಚಿಸುವ ಮೂಲಕ ತನ್ನ ಎದೆಗಾರಿಕೆ ಪ್ರದರ್ಶಿಸಿದ ಆಂಡಯ್ಯನ ಪ್ರಯತ್ನ ನಿಜಕ್ಕೂ ಸ್ತುತ್ಯಾರ್ಹ.

ಇತ್ತೀಚೆಗೆ ನಾನು ನೋಡಿದ ಮನು ಅವರ 'ಅಯನ' ಕಾದಂಬರಿ ಆಧಾರಿತ 'ಆಸ್ಫೋಟ' ಚಲನಚಿತ್ರದಲ್ಲಿ ಏನೆಲ್ಲಾ ಹೋರಾಟ ನಡೆಯುತ್ತದೆ. ಪ್ರಬಲ ಸಂಸ್ಕೃತಿಯ ದಬ್ಬಾಳಿಕೆಯನ್ನು ಬಗ್ಗು ಬಡಿಯುವಿಕೆಯ ಮಟ್ಟಕ್ಕೆ ಪ್ರತಿಸಂಸ್ಕೃತಿ ಏರುತ್ತಿದೆ ಅನ್ನುತ್ತಿದ್ದಂತೆಯೇ ಅನಿರೀಕ್ಷಿತ ಅನಾಹುತ ನಡೆಸಿ, 'ನೀವು ಇದ್ದಂಗೆ ಇದ್ದರೆ ಅಷ್ಟಿಷ್ಟು ನೆಮ್ಮದಿ, ಶಾಂತಿಯಾದರೂ ದಕ್ಕೀತು. ಇಲ್ಲದಿರ ನಿಮಗಿಲ್ಲ ಉಳಿಗಾಲ' ಎಂಬಷ್ಟರ ಮಟ್ಟಿಗೆ ಪರಿಸ್ಥಿತಿಯನ್ನು ವಿಕೋಪಕ್ಕೇರಿಸಿ, ವಾಸ್ತವಿಕೆಯನ್ನು ಮರೆಸಿ ವ್ಯವಸ್ಥೆಗೇ ಶರಣು ಹೋಗಿಸಲಾಗುತ್ತದೆ. ಈ ರೀತಿಯಾಗಿ ಸಮಾಜದ ಎಲ್ಲಾ ಮಾಧ್ಯಮಗಳ ಮೂಲಕ ಪ್ರತಿ ಸಂಸ್ಕೃತಿಯನ್ನು ಮಟ್ಟಹಾಕುವ ವ್ಯವಸ್ಥಿತ ಸಂಚು ನಡೆದುಕೊಂಡೇ ಬಂದಿದೆ. ಈಗಲೂ ನಡೆಯುತ್ತಿದೆ. ಆದರೂ ಗೋಡೆಗೆ ಹೊಡೆದ ಚಂಡು ಅಷ್ಟೇ ರಭಸವಾಗಿ ವಾಪಸ್ಸು ಬರುವಂತೆ ಪ್ರತಿಸಂಸ್ಕೃತಿಯೂ ಸಹ ಪ್ರಬಲವಾಗಿ ಬೆಳೆಯುತ್ತಿರುವುದನ್ನು ಕಾಣಬಹುದು.

ಪುನರ್ಜನ್ಮ ಕಲ್ಪನೆಯ ಬಂಧನದ ಸುಳಿಗೆ ಸಿಲುಕಿಕೊಂಡು ಸತ್ತ ಹಿರಿಯರಿಗೆಲ್ಲಾ ವಾರದ ತಿಥಿ, ತಿಂಗಳ ತಿಥಿ, ವರ್ಷದ ತಿಥಿ,

ಎಂದು ಏನೆಲ್ಲಾ ಕರ್ಮಗಳನ್ನು ಮಾಡುತ್ತ ಗೊಡ್ಡು ಸಂಪ್ರದಾಯದಿಂದ ಜೀವನ ಪೂರ್ತಿ ಪರದಾಡುವ ಪುರೋಹಿತರ ಯಜಮಾನ ಸಂಸ್ಕೃತಿಯ ಎದುರಿನಲ್ಲೇ, ಜೀವಂತವಾಗಿರುವಾಗ ಮಾತ್ರವೇ ಅವರ ನಮ್ಮಗಳ ಸಂಬಂಧ, ಸತ್ತಮೇಲೆ ಮುಗಿಯಿತೆಂದು ಶವಸಂಸ್ಕಾರ ಕಾರ್ಯಗಳನ್ನಷ್ಟೇ ಮಾಡಿ ಮುಗಿಸಿ ಕೈತೊಳೆದುಕೊಳ್ಳುವ ಚಾಂಡಾಳರ ಪ್ರತಿ ಸಂಸ್ಕೃತಿಯೂ ಇದೆ. ವಿವಾಹ ಸಂದರ್ಭಗಳಲ್ಲಿ ವರನ ಮನೆಗೆ ವಧುವನ್ನು ಕರೆದುಕೊಂಡು ಅಲೆದಾಡುವಂತಹ ಅನಾಗರಿಕ ವೈದಿಕ ಸಂಸ್ಕೃತಿಯ ಎದುರೇ, ವರ ಎಷ್ಟೇ ಶ್ರೀಮಂತನಿರಲಿ ವಧುವಿನ ಮನೆಗೇ ಬಂದು ನೋಡಬೇಕೆಂಬಂತಹ ಸ್ತ್ರೀ ಮೌಲ್ಯವನ್ನು ಇಂದಿಗೂ ಉಳಿಸಿಬೆಳೆಸಿಕೊಂಡು ಬರುತ್ತಿರುವ ಶೂದ್ರವರ್ಗದ ಸಂಸ್ಕೃತಿಯೂ ಇದೆ.

ಹಾಗೆಯೇ ಸಾಹಿತ್ಯ ರಚನೆಯಲ್ಲಿ ಹೇರಿಕೊಂಡಿದ್ದ ಯಜಮಾನ ಸಂಸ್ಕೃತಿಯ ಛಂದಸ್ಸು, ರಗಳೆ ಮುಂತಾದ ಕಟ್ಟುಪಾಡುಗಳನ್ನೆಲ್ಲಾ ಕಿತ್ತೆಸೆದು, ಪ್ರಸ್ತುತ ಸಮಸ್ಯೆಗಳನ್ನೇ ಎತ್ತಿಕೊಂಡು ಆಡುಮಾತಿನಲ್ಲೇ ವಚನ ರಚಿಸಿ ಜನಜಾಗೃತಿ ಮೂಡಿಸಿದ ವಚನಕಾರರ ಪ್ರತಿ ಸಂಸ್ಕೃತಿಯನ್ನು ಕಾಣಬಹುದು.

ಈ ಎಲ್ಲಾ ಉದಾಹರಣೆಗಳಿಂದ ಯಜಮಾನ ಸಂಸ್ಕೃತಿಯಲ್ಲಿರುವ ಸೋಗಲಾಡಿತನದ ಜಳ್ಳುನ್ಯಾಯ, ಪ್ರತಿಸಂಸ್ಕೃತಿಯಲ್ಲಿ ಪ್ರತಿಬಿಂಬಿತವಾಗುವ ಜೀವನ ಮೌಲ್ಯದ ಗಟ್ಟಿತನವನ್ನು ಕಾಣಬಹುದು.

## ಅಂ) ಸಾಹಿತ್ಯ

ಸಾಹಿತ್ಯದ ಪ್ರಬುದ್ಧತೆಯ ಬಗ್ಗೆ ಹೇಳಬಹುದಾದರೆ ಕನ್ನಡದಲ್ಲಿ ಆರಂಭಕ್ಕೆ ಬೌದ್ಧ ಸಾಹಿತ್ಯ ಇತ್ತೆಂಬುದು ಕನ್ನಡದಲ್ಲಿ ಆಲೋಚನಾ ಪರಂಪರೆಯ ಆರಂಭವೇ ಇದು. ಪ್ರಾಕೃತ ಭಾಷಾ ವಿದ್ಯಮಾನಗಳ ಹಿನ್ನೆಲೆಯಲ್ಲಿ ವೆಂಕಣ್ಣಯ್ಯನವರ ಈ ವಾದವನ್ನು ಬಲಪಡಿಸುವ ಅನಿವಾರ್ಯತೆ ಇದೆ. ಬೌದ್ಧ ಧರ್ಮದ ಪ್ರಚಾರ 'ಗದ್ಯ' ಬಳಕೆಯಾಗಿರಬಹುದೆಂಬುದು 'ಕವಿರಾಜ ಮಾರ್ಗ'ದಲ್ಲಿ ಹೇಳಲಾಗಿರುವ ವಿಮಲೋದಯ ನಾಗಾರ್ಜುನಾದಿ ಗದ್ಯಕಾರರು ಬೌದ್ಧ ಲೇಖಕರಾಗಿರಬಹುದು 'ಬುದ್ಧದೇವನೇ ದೇಶ ಭಾಷಾ ಸಾಹಿತ್ಯಗಳ ಬೀಜವನ್ನು ಬಿತ್ತಿದನೆಂದು' ವೆಂಕಣ್ಣಯ್ಯನವರ ಸಮರ್ಥನೆ.

ಕ್ರಿ. ಶ. ೨ನೇ ಶತಮಾನದ ಕಪ್ಪೆ ಅರಭಟ್ಟನ ಶಾಸನದ 'ನಾಧುಗೆ ಸಾಧು ಮಾಧುರ್ಯಂಗೆ ಮಾದುರ್ಯಂ' ಪದ್ಯದ ಭಾಷಾ ಸೊಗಸು, ಸಾಹಿತ್ಯದ ಮಾಧುರ್ಯ, ಆಧುನಿಕತೆಯ ಪ್ರಯೋಗ, ಇವು ಅಷ್ಟು ಹೊತ್ತಿಗೆ ಕನ್ನಡ ಸಾಹಿತ್ಯ ಪ್ರಬುದ್ಧವಾಗಿತ್ತೆಂಬುದರ ಕಡೆಗೆ ಒಲವು ತೋರುತ್ತವೆ. 'ಕವಿರಾಜ ಮಾರ್ಗ'ದ "ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಂ" ಎಂಬ ಮೂಲಕ ಕನ್ನಡ ಭಾಷೆ ಮತ್ತು ಪರಂಪರೆಯೊಂದು ರೂಢಮೂಲವಾಗಿತ್ತೆಂಬ ವಿಚಾರ ತಿಳಿಯುವುದು, ಕನ್ನಡದಲ್ಲಿ ಆಗಲೇ 'ದೇಸಿ' ಪ್ರಯೋಗದಲ್ಲಿತ್ತೆಂಬುದರ ಕಡೆಗೆ 'ಚತ್ತಾಣ'ಮತ್ತು 'ಬೆದಂಡೆ' ಕಾವ್ಯರೂಪಗಳು ಗಮನ ಸೆಳೆಯುತ್ತವೆ.

ಸಂಸ್ಕೃತಕ್ಕೆ ವಿಭಿನ್ನವಾದ ಪರಂಪರೆಯಾಂದನ್ನು ಹುಟ್ಟುಹಾಕಿ ನಡೆಸಿದ ಕೀರ್ತಿ ಅಂದಿನ ಪರಂಪರೆಯೊಂದನ್ನು ಸಲ್ಲಬೇಕು ಪುರಾಣದೊಡನೆ ಸಮಕಾಲಿನ ಇತಿಹಾಸವನ್ನು ಸೇರಿಸಿ ಬರೆದಿರುವ ಈ ಪರಂಪರೆ ಒಂದು ಹೊಸ ಆಲೋಚನಾ ವಿಧಾನವಾಗಿತ್ತು. ಮತಧರ್ಮದ ವಾತಾವರಣ ಬಿಗಿಯಾಗಿದ್ದ ಕಾಲದಲ್ಲೂ ಸೆಕ್ಯೂಲರ್ ಆದ ಸಾಹಿತ್ಯವನ್ನು ನಿರ್ಮಿಸಿದುದು ಮುಖ್ಯ ವಿಚಾರವಾಗಿತ್ತು ಸಾಮಾಜಿಕ ಆಂದೋಲನವಾಗಿ ಒಂದು ವಚನ ಸಾಹಿತ್ಯ ಆಧ್ಯಾತ್ಮಿಕತೆ, ಬೌದ್ಧಿಕತೆ ಮತ್ತು ವೈಚಾರಿಕತೆಗಳು ನೇತೃತ್ವ ವಹಿಸಿದ್ದು ಕಾಲಕ್ಕೂ ಮುಂಚಿನ ಆರ್ದ್ರ ವಿಷಯವಾಗಿತ್ತು. ಅಧಿಕೃತವಾಗಿ ಪ್ರಚಲಿತವಾಗಿದ್ದ ಏಕ ಸಂಸ್ಕೃತಿಯ ಭಾಗದಲ್ಲಿ ಬಹು ಸಂಸ್ಕೃತಿಯ ಪರಂಪರೆಯನ್ನು ನೆಟ್ಟದು ದೇಶೀಯ ಚಿಂತನೆಯ ಆದ್ಯ ಪ್ರಯೋಗವಾಗಿತ್ತು. ಸಾಹಿತ್ಯಕ್ಕೆ ಸಂಗೀತದ ಮೌಲ್ಯವನ್ನು ತೊಡಿಸಿ ಹೊಸ ರೀತಿಗೆ ಕಾರಣವಾದ ಕೀರ್ತನ ಪರಂಪರೆ ಹೊಸ ಸಾಧ್ಯತೆಯನ್ನು ತೋರಿದೆ. ಧರ್ಮವೇ ಎಲ್ಲಾ ಸಮಸ್ಯೆಗೆ ಪರಿಹಾರವೆಂದು ಒಪ್ಪಿಕೊಂಡು ಬರೆದವರಿದ್ದರೆ ಅದನ್ನು ಮೀರಿ ಅಥವ, ಅದಕ್ಕಿಂತ ಕಾವ್ಯ ಕಲೆಯ ನೆಲೆಯಲ್ಲಿ ಅಚಲವಾಗಿ ನಿಂತು ಬರೆದವರಿದ್ದಾರೆ. ಭಾರತದಲ್ಲೆಲ್ಲ

ಹರಡಿದ ಭಕ್ತಿ ಚಳುವಳಿಗೆ ಕನ್ನಡವೂ ಹೊರತಾಗಿದೆ. ಧಾರ್ಮಿಕ ಕವಿಗಿಂತ ಭಕ್ತಿ ಕವಿ ಉದಾರವಾದಿ ಎಂದು ತೋರಿಸಿಕೊಟ್ಟದ್ದು ಮಧ್ಯಕಾಲೀನ ಕನ್ನಡ ಸಾಹಿತ್ಯದ ಮುಖ್ಯ ಸಾಧನೆ.

ಕನ್ನಡದಲ್ಲಿ ಅಭಿಜಾತ ಪರಂಪರೆಯೊಂದು ಮೊದಲಿನಿಂದಲೂ ಕೆಲಸ ಮಾಡಿದೆ. ವೈಯಕ್ತಿಕ ನಿಲುವು, ಸಾಮಾಜಿಕ ಆಂದೋಲನ ಮತ್ತು ಸಾಹಿತ್ಯಕ ಮಾದರಿಗಳಿಂದ ಇದು ರೂಪಿತವಾದುದು ಭಾವನೆ ಮತ್ತು ವಿಚಾರಗಳೆರಡನ್ನೂ ಇದು ಕಾವ್ಯ ಮಾಡಿದ್ದು ವಿಶೇಷ. ನಿಜವಾದ ಅಭಿಜಾತ ಕಾವ್ಯ ಶ್ರೇಷ್ಠ ಕಾವ್ಯವು ಆಗಿರುತ್ತದೆ. ಆದರೆ ಶ್ರೇಷ್ಠ ಅಭಿಜಾತ ಕಾವ್ಯವಾಗಿರುವುದಿಲ್ಲ.

ಕನ್ನಡದ ಅಭಿಜಾತ ಪರಂಪರೆ ಪ್ರತಿಭೆ, ಅನುಭವ, ಬುದ್ಧಿಮತ್ತೆ ಮತ್ತು ವಿವೇಕಗಳಿಂದ ಕೂಡಿರುವುದು ಸ್ಪಷ್ಟ ಸಮಕಾಲೀನ ಜೀವನ ಮೌಲ್ಯಗಳೂ, ಭಾಷಾ ಪರಂಪರೆಯ ಪರಿಷ್ಕಾರವು ಈ ಪರಂಪರೆಯಲ್ಲಿ ಬಹು ಮುಖ್ಯವಾಗಿ ಅಭಿವ್ಯಕ್ತಿ ಪಡೆದಿವೆ. ಆಧುನಿಕ ಕೃತಿಗಳಂತೂ ಎತ್ತರದಲ್ಲಿ ಇವನ್ನು ಸಾಧಿಸಿವೆ.

ಕನ್ನಡ ಅಭಿಜಾತ ಪರಂಪರೆಯಲ್ಲಿ ಧಮನ, ರಾಜಾಶ್ರಯ, ಸಂಸ್ಕೃತ ಪರಿಸರಗಳು ಕಾರಣವಾಗಿದ್ದರೂ ಸಮಕಾಲೀನ ಸಂವೇದನೆಯನ್ನು ತಿರಸ್ಕರಿಸಿ ನಡೆದಿಲ್ಲ. ಅಂದರೆ ಪೂರ್ವೋಕ್ತ ಪ್ರಭಾವಗಳ ಹಂಗನ್ನು ಈ ಪರಂಪರೆ ತನ್ನ ಶ್ರೇಷ್ಠತೆಯನ್ನು ಮೆರೆದಿದೆ. ಸಮಕಾಲೀನ ಅಗತ್ಯ, ಕವಿಯ ವ್ಯಕ್ತಿತ್ವ ಪ್ರವೃತ್ತಿಗಳಿಗೆ ಅನುಗುಣವಾಗಿ ಈ ಪರಂಪರೆ ನಡೆದಿದೆ ಎಂದು ಅರ್ಥ.

ಭಾವ ಪರಂಪರೆ ಮತ್ತು ಸಾಹಿತ್ಯ ಪರಂಪರೆಯ ಇರುವಿಕೆಯನ್ನು ಸ್ಪಷ್ಟವಾಗಿ ಉಲ್ಲೇಖಿಸಿದ್ದ 'ಕವಿರಾಜ'ದಿಂದ ಹಿಡಿದು. ಇಲ್ಲಿಯವರೆಗೆ ಕನ್ನಡ ಸಾಹಿತ್ಯ ಆರೋಹಣ ಸ್ಥಿತಿಯಲ್ಲೇ ನಡೆದುಕೊಂಡು ಬಂದಿದೆ. ಸುಮಾರು ಎರಡು ಸಾವಿರ ವರ್ಷಗಳ ಸಾಹಿತ್ಯ ಸಮೃದ್ಧಿಯುಳ್ಳ ಇತಿಹಾವನ್ನು ನೋಡುತ್ತೇವೆ.

ಪ್ರಾಚೀನ ಕಾಲದಲ್ಲಿ ಸಂಪ್ರದಾಯ ಒಂದು ನಿಯಂತ್ರಣ ಶಕ್ತಿ ಆದರೆ ಕಾಲದಿಂದ ಕಾಲಕ್ಕೆ ಮೀರಿ ಬೆಳೆಯುವ ಸ್ವತಂತ್ರ ಪ್ರವೃತ್ತಿ ಇದಕ್ಕೆ ಆಸಕ್ತರ ಅಭಿರುಚಿ ಮತ್ತು ಕವಿಯ ವೈಯಕ್ತಿಕ ಸೃಜನ ಶೀಲ ಶಕ್ತಿ ಕಾರಣವಾಗಿದ್ದವು ಎಂಬುದನ್ನು ಮರೆಯಲಾಗದು ಸಾಹಿತ್ಯಕ ಅಭಿವ್ಯಕ್ತಿಯ ಹಿಂದೆ ಕಾಲಾನುನಾರಿಯಾದ ಸವಾಲುಗಳು ಕೆಲಸ ಮಾಡಿವೆ.

ಕನ್ನಡ ಸಾಹಿತ್ಯ ಪರಂಪರೆ ಸ್ಥಾವರ ಸಂಸ್ಕೃತಿಯದಲ್ಲ, ಜಂಗಮ ಸಂಸ್ಕೃತಿಯದು. ಬದಲಾವಣೆ ಅದರ ಜೀವನ ಚೈತನ್ಯ. ಅಭಿವ್ಯಕ್ತಿಯ ಕ್ರಮ ಸದಾ ಬದಲಾಗುತ್ತಾ ಬಂದಿರುವುದರಲ್ಲಿ ಇವನ್ನು ಕಾಣಬಹುದು. ಇದರಲ್ಲಿ ಪ್ರೌಢ ಪರಂಪರೆಯಂತೆಯೇ ಜನಪದ ಪರಂಪರೆಯೂ ಕೂಡಿಕೊಂಡಿವೆ.

ಕನ್ನಡದ ಮೊದಲ ಕೃತಿ 'ವಡ್ಡಾರಾಧನೆ' ಶಿವಕೋಟಾಚಾರ್ಯರಿಂದ ರಚಿತವಾದುದು. ಮೊಟ್ಟ ಮೊದಲ ಶಾಸನ ಹಲ್ಮಿಡಿಯದು ಎಂದು ನಮ್ಮೆಲ್ಲರಿಗೂ ತಿಳಿದ ವಿಷಯವೇ ಆಗಿದೆ. ಆದರೆ ಮೇಲ್ಕಂಡ ಎಲ್ಲಾ ಕೃತಿಗಳಲ್ಲೂ ಶೇ. ೮೦ ಭಾಗ ಸಂಸ್ಕೃತದ ಪ್ರಾಬಲ್ಯದೇ ಹೆಚ್ಚಾಗಿದೆ. ಅಂದಮೇಲೆ ಅದ್ಹೇಗೆ ಕನ್ನಡಮಯವಾಗಿವೆ? ಒಂದು ವೇಳೆ ಕನ್ನಡವೇ ಎಂದು ಒಪ್ಪಿಕೊಂಡರೆ ಕನ್ನಡಿಗರಿಗೆ ಅವಮಾನವಾಗುತ್ತದೆ.

ಕನ್ನಡದ ವರ್ಣಮಾಲೆಯಲ್ಲಿ ಕೂಡ ಸಂಸ್ಕೃತದ ಪ್ರಾಬಲ್ಯವೆ ಹೆಚ್ಚು ಹಾಗೂ ಕನ್ನಡ ಸಾಹಿತ್ಯದಲ್ಲಿ ವ್ಯಾಕರಣವನ್ನು ವಿಶ್ಲೇಷಿಸಿದಾಗ ಕನ್ನಡ ಸಂಧಿ ಕೇವಲ ೩ ಮಾತ್ರ.

೧೨ ನೇ ಶತಮಾನದ ಬಸವಣ್ಣನವರ ವಚನ ಸಾಹಿತ್ಯದಲ್ಲೂ ಕೂಡ ಸಂಸ್ಕೃತವೇ ಪ್ರಧಾನವಾಗಿ ಬಳಕೆಯಾಗಿವೆ. ದಾನ ಸಾಹಿತ್ಯದಲ್ಲಿ ಕೂಡ ಪೂರ್ಣ ಪ್ರಮಾಣದ ಕೀರ್ತನಗಳೆಲ್ಲ ಸಂಸ್ಕೃತವೇ ಪುರಂದರ ದಾಸರು, ತ್ಯಾಗರಾಜರು, ವಾದಿರಾಜರು, ಕನಕದಾಸರು, ಇವರ ಕೀರ್ತನೆಗಳೂ ಕೂಡ ಶುದ್ಧ ಸಂಸ್ಕೃತವೆ. ಕನ್ನಡ ಸಾಹಿತ್ಯ ಕೂಡ ಪೂರ್ಣ ಪ್ರಮಾಣದಲ್ಲಿ ಸಂಸ್ಕೃತ ಕಲಬೆರಕೆಯಾಗಿದೆ. ಕನ್ನಡ ಸಾಹಿತ್ಯವನ್ನು ಕಲಬೆರಕೆ ಸಾಹಿತ್ಯವೆಂದು ಕರೆದರೆ ತಪ್ಪಾಗಲಾರದು.

* * *

## ಅಧ್ಯಾಯ ೪

# ಪರಿಶುದ್ಧ ಕನ್ನಡ ಬಳಕೆ ನಮ್ಮ ಹೊಣೆ

ಕನ್ನಡ ಭಾಷೆಯ ರಕ್ಷಣೆ ಮತ್ತು ಅಭಿವೃದ್ಧಿಯ ಕುರಿತಾಗಿ ಈಗ ವ್ಯಾಪಕವಾದ ಅರಿವು ಮೂಡುತ್ತಿರುವುದು ಹಾಗೂ ಹಲವು ಬುದ್ಧಿಜೀವಿಗಳು ಈ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತರಾಗಿರುವುದು ಸ್ವಾಗತಾರ್ಹ. ಕನ್ನಡ ಚಳವಳಿ ಇಂದು ನಿನ್ನೆಯದೇನಲ್ಲ. ಹಲವು ರೀತಿಯ ಚಳವಳಿಗಳು ಹಲವು ಧ್ವಜಗಳ ಕೆಳಗೆ ಬಂದು ಹೋಗಿದೆ ಮತ್ತು ತಮ್ಮ ಕೈಲಾದ ಕೊಡುಗೆಗಳನ್ನು ನೀಡಿವೆ. ಆದರೂ ಈ ಚಳವಳಿಗಳು ಎಲ್ಲಾ ಮಂದಿಯನ್ನೂ ಒಳಗೊಳ್ಳುವುದರಲ್ಲಿ ಯಶಸ್ವಿಯಾಗಿವೆಯೇ ಎನ್ನುವುದು ಸಂದೇಹಕರ. ಯಾವುದೇ ಚಳವಳಿ ಜನಸಮೂಹದ ಬೆಂಬಲವಿಲ್ಲದೆ ಯಶಸ್ವಿಯಾಗುವುದು ಸಾಧ್ಯವಿಲ್ಲ. ಎಲ್ಲಾ ಕನ್ನಡಿಗರೂ ಕನ್ನಡ ಭಾಷೆಯ ರಕ್ಷಣೆ ಮತ್ತು ಅಭಿವೃದ್ಧಿಯಲ್ಲಿ ಭಾಗವಹಿಸುವುದು ಸಾಧ್ಯವಿಲ್ಲ ಎಲ್ಲರೂ ಭಾಗವಹಿಸುವುದು ಇಂದಿನ ಅಗತ್ಯವಾಗಿದೆಯೆನ್ನುವುದರಲ್ಲಿ ಎರಡು ಮಾತಿಲ್ಲ. ಹೀಗಾಗಿ ಬೇಕಾದರೆ, ಜನ ಒಂದು ರೀತಿ ಚಿಂತಿಸುವುದು, ಬುದ್ಧಿಜೀವಿಗಳು ಇನ್ನೊಂದು ರೀತಿ ಚಿಂತಿಸುವುದು ಎನ್ನುವ ಪರಿಸ್ಥಿತಿ ಉಂಟಾಗಬಾರದು. ಭಾಷೆಯ ಹಲವು ಆಯಾಮಗಳಲ್ಲಿ ಜನಹಿತ ಬಹುಮುಖ್ಯವಾದ ಘಟಕವಾದ್ದರಿಂದ ಜನಹಿತವನ್ನು ಕಾಪಾಡಿಕೊಂಡೇ ಕನ್ನಡದ ಕೆಲಸ ನಡೆಯಬೇಕಾಗಿದೆ. ಕನ್ನಡದ ಚಳವಳಿಗಾರರು ಹಮ್ಮಿಕೊಳ್ಳುವ ಯಾವುದೇ ಕಾರ್ಯಕ್ರಮಗಳೂ ಜನರಿಗೆ ಹಿತಕರವಾಗಿರಬೇಕು ಮಾತ್ರವಲ್ಲ, ಜನ ನಂಬುವಂತೆಯೂ ಆಗಿರಬೇಕು.

ಕೆಲವು ತಪ್ಪು ಕಲ್ಪನೆಗಳು ನಮ್ಮನ್ನು ದಿಕ್ಕೆಡಿಸುತ್ತಿವೆ. ಕನ್ನಡದ ಕೆಲಸ ದಿಢೀರಾಗಿ ಆಗುವಂತದ್ದು ಎಂಬ ತಪ್ಪು ಕಲ್ಪನೆ. ಕನ್ನಡದ ಕೆಲಸ ವ್ಯಾಪರವಾಗಿಯೂ ನಿರಂತರವಾಗಿಯೂ ನಡೆಯಬೇಕಾದ್ದೇ ಹೊರತು ಒಮ್ಮೆ ಮಾಡಿ, ಕೈಕಟ್ಟಿ ಕೂಡುವಂಥದಲ್ಲ, ಕನ್ನಡದ ಕೆಲಸವೆಂದರೆ ಅದೊಂದು ಜನಸಮೂಹದ ಚರಿತ್ರೆ, ಸಮಕಾಲೀನತೆ ಹಾಗೂ ಭವಿಷ್ಯ, ತಲೆಮಾರಿನಿಂದ ತಲೆಮಾರಿಗೆ ಹರಿದು ಬರಬೇಕಾದ ವಾಹಿನಿ. ಆದ್ದರಿಂದ ಇದನ್ನು ಸಮಚಿತ್ತದಿಂದಲೂ ಕರ್ತವ್ಯ ನಿಷ್ಠೆಯಿಂದಲೂ ಸಂತೋಷದಿಂದಲೂ ನಾವು ಮಾಡಬೇಕಾಗಿದೆ. ಒಂದು ಹೊರೆಯಾಗಿ ಅಲ್ಲ. ಎಲ್ಲಿ ಇದರ ಆರಂಭ, ಎಲ್ಲಿ ನಮ್ಮ ಪ್ರವೇಶ ಎಂದು ಯೋಚಿಸಿದರೆ ಅವು ಎಲ್ಲ ಕಡೆಯೂ ಇರುವಂತೆ ಅನಿಸುತ್ತದೆ. ಉದಾಹರಣೆಗೆ, ಜನಜೀವನದಲ್ಲಿ ಆಗುತ್ತಿರುವಂಥ ಬದಲಾವಣೆಗಳು, ಸಂಸ್ಕೃತಿಯ ಕುರಿತಾದ ನಮ್ಮ ಧೋರಣೆಗಳು, ನಮ್ಮ ಯುವಜನರ ಆಶೋತ್ತರಗಳು. ಆದ್ದರಿಂದ, ಕನ್ನಡದ ಚಳುವಳಿಯೆಂದರೆ ಅದು ಎಲ್ಲರನ್ನೂ ಎಲ್ಲವನ್ನೂ ಒಳಗೊಳ್ಳುವ ಒಂದು ತತ್ವಜ್ಞಾನವಾಗಿ ಬೆಳೆಯಬೇಕಾಗಿದೆ. ಇದು ಎಲ್ಲರ ದೋಣಿಯೂ ಆಗಿರುವುದರಿಂದ ಒಬ್ಬನನ್ನು ಅಥವಾ ಒಂದು ಪಂಗಡವನ್ನು ತಳ್ಳಿ ಉಳಿದವರು ಮುಂದುವರಿಯುವಂತಿಲ್ಲ. ಎಲ್ಲ ವೈವಿಧ್ಯಗಳನ್ನು ಒಪ್ಪಿಕೊಂಡು ಎಲ್ಲರನ್ನೂ ಜತೆಯಲ್ಲಿ ತೆಗೆದುಕೊಳ್ಳುವ ಚಳುವಳಿ ಮಾತ್ರವೇ ಭವಿಷ್ಯಕ್ಕೆ ಮುಖಾಮುಖಿಯಾಗುತ್ತದೆ. ಇಂಥ ಕಡೆ ವೈರುಧ್ಯಗಳು ಕೂಡ ಇರುತ್ತವೆ.

ಇತರ ಭಾಷೆಗಳಿಂದ ಮುಖ್ಯವಾಗಿ ಸಂಸ್ಕೃತ ಮತ್ತು ಇಂಗ್ಲಿಷ್‌ನಿಂದ ಕನ್ನಡಕ್ಕಿರುವ ಸಂಸ್ಕೃತ ಗಮನಿಸಬೇಕು. ಕನ್ನದ ಸ್ಥಾನವನ್ನು ಸಂಸ್ಕೃತ ಕಸಿದುಕೊಳ್ಳುವ ಅಪಾಯವನ್ನು ಗೋಕಾಕ್ ಚಳುವಳಿ ಯಶಸ್ವಿಯಾಗಿ ಎದುರಿಸಿದ್ದು ಕನ್ನಡದ ಅಗತ್ಯವಾಗಿದ್ದಿತು ಎನ್ನುವುದರಲ್ಲಿ ಸಂಶಯವಿಲ್ಲ. ಆದರೆ ಉಳಿದಂತೆ ಸಂಸ್ಕೃತದಿಂದ ಕನ್ನಡಕ್ಕೆ ಸದ್ಯ ಯಾವ ಅಪಾಯವೂ ಉಳಿದಿಲ್ಲ. ಕನ್ನಡದ 'ಜೀರ್ಣಾಗ್ನಿ'ಯೆನ್ನಲ್ಲೇ, ಕನ್ನಡವು ಸಂಸ್ಕೃತದೊಂದಿಗಿದ್ದ ತನ್ನ ಲಡಾಯಿಯನ್ನು ನೃಪತುಂಗದ ಕಾಲಕ್ಕೆ ಪರಿಹರಿಸಿಕೊಂಡಿದೆ. ಆಮೇಲೆ ಸಂಸ್ಕೃತವನ್ನು ತನ್ನ ಉಪಯೋಗಕ್ಕೆ ಬಳಸಿಕೊಳ್ಳುವ ತಾಕತ್ತನ್ನು ಪಡೆದುಕೊಂಡಿತು. ಸಂಸ್ಕೃತ ಈಗ ಕನ್ನಡದ ಜೀವನೆಲೆಗಳಲ್ಲಿ ಒಂದಾಗಿದ್ದು ಕನ್ನಡ ಈ ಭಾಷೆಯನ್ನು ತನ್ನದೇ ಎಂಬ ರೀತಿಯಲ್ಲಿ ಸ್ವೀಕರಿಸಿದೆ. ಈ ಸಂಬಂಧವನ್ನು ಕೈಬಿಡದೆ ಮುಂದುವರಿಸಿಕೊಂಡು ಹೋಗುವುದು ಕನ್ನಡದ

---

೧. ಕನ್ನಡ ಮತ್ತು ಕನ್ನಡಿಗರು (ಎಸ್. ಕೃಷ್ಣಪ್ಪ) ಪು. ಸಂ. ೬೮

೨. ಆಧುನಿಕ ಕನ್ನಡ ಸಾಹಿತ್ಯ (ಅ. ನ. ಕೃಷ್ಣರಾವ್) ಪು. ಸಂ. ೨೪೭

೩. ಕನ್ನಡ ಪ್ರಭುದ್ಧತೆ (ಡಾ. ರಾಘವ್) ಪು. ಸಂ. ೩

ದೃಷ್ಟಿಯಿಂದಲೇ ಒಳ್ಳೆಯದು. ಕರ್ನಾಟಕದಲ್ಲೊಂದು ಸಂಸ್ಕೃತ ವಿಶ್ವವಿದ್ಯಾಲಯವನ್ನು ಸ್ಥಾಪಿಸುವ ಸೂಚನೆ ಬಂದಾಗ ಅದಕ್ಕೆ ವಿರುದ್ಧವಾಗಿ ಕೆಲವರಿಂದ ಬಂದ ಅಭಿಪ್ರಾಯಗಳು ಕನ್ನಡದ ಏಳಿಗೆಯ ದೃಷ್ಟಿಯಿಂದ ಸರಿಯಾದವಲ್ಲ. ಸಂಸ್ಕೃತ ಸದ್ಯ ಕನ್ನಡದಿಂದ ಸ್ವೀಕರಿಸುವುದೇನೋ ಇಲ್ಲ. ಆದರೆ ಕನ್ನಡ ಸಂಸ್ಕೃತದಿಂದ ಸ್ವೀಕರಿಸುವುದು ಇನ್ನೂ ಬಹಳಷ್ಟಿದೆ. ವಿದೇಶಿಗಳಾದ ಮನುಷ್ಯರು ತಮ್ಮ ವಿರೋಧಿಗಳಿಂದಲೂ ಕೂಡ ತಮಗೆ ಬೇಕಾದ್ದನ್ನು ಪಡೆದುಕೊಳ್ಳಲು ತಯಾರಿರಬೇಕು. ಕನ್ನಡದ ಅಂಗಳದಲ್ಲೇ ಸಂಸ್ಕೃತ ವಿಶ್ವವಿದ್ಯಾಲಯವೊಂದು ಇರುವುದರಿಂದ ಕನ್ನಡಕ್ಕೇ ಉಪಯೋಗ.

ಇಂಗ್ಲೀಷ್‌ನ ಕುರಿತಾದ ನಮ್ಮ ಸಂಬಂಧ ಇಂದಿನ ದಿನಗಳಲ್ಲಿ ಇರುಸುಮುರುಸಿನದು ಎನ್ನುವುದರಲ್ಲಿ ಸಂದೇಹವಿಲ್ಲ. ಈ ಸಂಬಂಧವನ್ನು ರೂಪಿಸಿದ ಆರ್ಥಿಕ ಹಾಗೂ ಸಾಮಾಜಿಕ ಶಕ್ತಿಗಳು ಪೂರ್ತಿಯಾಗಿ ನಮ್ಮ ಕೈಯಲ್ಲಿ ಇಲ್ಲದಿರುವುದೇ ಈ ಇರುಸು ಮುರುಸಿಗೆ ಕಾರಣ. ಇಂಗ್ಲಿಷನ್ನು ನಾವು ಈ ಹೊತ್ತು ಬಿಡುವಂತಿಲ್ಲ, ಹಿಡಿಯುವಂತಿಲ್ಲ. ನಮ್ಮ ರಾಜಕೀಯ ಶಕ್ತಿ ಕೂಡಾ ಈ ಧ್ವಂದ್ವದ ದವಡೆಯಲ್ಲಿ ಸಿಕ್ಕಿ ಬಿದ್ದಿದೆ. ಈ ಸಮಸ್ಯೆಯನ್ನು ನೇರವಾಗಿ ಎದುರಿಸುವುದು ಒಂದು ದಾರಿ ಅನಂತಮೂರ್ತಿಯವರು ಈ ನಿಟ್ಟಿನಲ್ಲಿ ಈಗಾಗಲೇ ಸಾಕಷ್ಟು ಸಲಹೆಗಳನ್ನು ನೀಡಿದ್ದಾರೆ. ಆರಂಭದ ವಿದ್ಯಾಭ್ಯಾಸ ಮಾತೃಭಾಷೆಯಲ್ಲೇ ಆಗಬೇಕೆನ್ನುವುದು ಅವರ ಒಂದು ಸಲಹೆ, ಗಣಿತ, ವಿಜ್ಞಾನ, ತಂತ್ರವಿಜ್ಞಾನ ಮುಂತಾದ ವಿಷಯಗಳನ್ನು ಇಂಗ್ಲಿಷ್‌ನಲ್ಲೂ ಸಾಮಾಜಿಕ ಅಧ್ಯಯನ ವಿಷಯಗಳನ್ನು ಕನ್ನಡದಲ್ಲೂ ಕಲಿಸಬೇಕು ಎನ್ನುವುದು ಅವರ ಇನ್ನೊಂದು ಸಲಹೆ. ಈ ಎರಡು ಸಲಹೆಗ್ಳೂ ಗಂಭೀರವಾಗಿ ಪರಿಗಣನೆಗೆ ಅರ್ಹವಾದುವೇ ಇಂಗ್ಲಿಷಿನ ಸಮಸ್ಯೆಯನ್ನು ಓರೆಯಾಗಿಯೂ ದೀರ್ಘಕಾಲಿಕವಾಗಿಯೂ ಎದುರಿಸುವುದು. ಇನ್ನೊಂದು ವಿಧಾನ-ಕಷ್ಟಕರವಾದದ್ದು, ಆದರೆ ಇದೇ ಕೊನೆಗೂ ಕನ್ನಡವನ್ನು ಮೇಲೆತ್ತಲು ಸಹಕಾರಿಯಾಗುವಂತದ್ದು ಇಂಗ್ಲಿಷ್‌ನಲ್ಲಿ ಜನರಿಗೆ ಸಿಗುವಂಥ ಜ್ಞಾನವಾಹಿನಿ ಕನ್ನಡದಲ್ಲೇ ಸಿಗುವುದು ಸಾಧ್ಯವಾದರೆ ಜನ ಯಾಕೆ ಇಂಗ್ಲಿಷ್‌ಗೆ ಮೊರೆಹೋಗಬೇಕು? ಆದರೆ ಅದು ಸಾಧ್ಯವೆ?

ಸಾಧ್ಯವಿಲ್ಲ ಎಂದು ಕೈ ಚೆಲ್ಲುವುದಕ್ಕಿಂತ, ಸಾಧ್ಯವಾಗಬೇಕಾದರೆ ಏನು ಮಾಡಬೇಕು ಎಂದು ಚಿಂತಿಸುವುದು ಒಳಿತು. ನಾವು ನಮ್ಮ ಇಂಗ್ಲಿಷ್ ಸಂಬಂಧವನ್ನು ಕನ್ನಡದ ಉಪಯೋಗಕ್ಕೆ ಬಳಸಿಕೊಳ್ಳುವುದು ಸಾಧ್ಯವೆನಿಸುವುದು. ಆದರೆ, ಜ್ಞಾನಮೂಲ ಇಂಗ್ಲಿಷ್‌ನಲ್ಲಿ ಮಾತ್ರವೇ ಇರುವುದು ಎಂಬ ಮೌಢ್ಯವನ್ನೂ ನಾವು ಕೈಬಿಡಬೇಕಾಗಿದೆ. ಯೂರೋಪಿನ ಭಾಷೆಗ್ಳನ್ನು ಗಮನಿಸಿದರೆ, ಇಂಗ್ಲಿಷ್‌ನ ನೆರೆಯಲ್ಲೇ ಜರ್ಮನ್, ಫ್ರೆಂಚ್ ಮತ್ತು ಸ್ಪ್ಯಾನಿಷ್ ಭಾಷೆಗಳು ತಮ್ಮ ತಮ್ಮದೇ ತತ್ವಜ್ಞಾನಗಳನ್ನು ರೂಢಿಸಿಕೊಂಡಿರುವುದನ್ನು ಕಾಣುತ್ತೇವೆ. ಕನ್ನಡಿಗರಾದ ನಾವು ನಮ್ಮ ತತ್ವಜ್ಞಾನ, ಸಮಾಜ ಜ್ಞಾನ, ವಿಜ್ಞಾನ, ಗಣಿತ ಮುಂತಾದ ವಿಷಯಗಳನ್ನು ರೂಢಿಸಿಕೊಳ್ಳಲು ಕಾರ್ಯಪ್ರವೃತ್ತರಾಗಬೇಕಾಗಿದೆ. ಇದಕ್ಕೆ ಇಂಗ್ಲಿಷ್ ಬಂದು ತೊಡಕಾಗಿದೆ. ಅನುಕೂಲವೇ ಯಾಕೆ ಆಗಿರಬಾರದು? ಆರಂಭದ ದಿಸೆಯಲ್ಲಿ ಕೆಲವು ಪ್ರಯತ್ನಗಳು ಅಣಕದಂತೆ ಅನಿಸಬಹುದು; ಅಥವಾ ಅವನ್ನು ಅಣಕಗಳೆಂದು ಕರೆಯಬಹುದು. ಆದರೆ ಹಾಗೆಂದು ಅವನ್ನು ಮೊಟಕುಗೊಳಿಸಿದರೆ ಮುಂದಿನ ಬೆಳವಣಿಗೆಯೇ ಇಲ್ಲದಂತಾಗುತ್ತದೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಆದ ಅಲ್ಲೋಲ ಕಲ್ಲೋಲಗಳನ್ನು ಜ್ಞಾಪಿಸಿಕೊಂಡರೆ ಇದು ಸ್ಪಷ್ಟವಾಗಬಹುದು. ನವ್ಯ ಸಾಹಿತ್ಯ ಪೂರ್ತಾ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಲ್ಲಿ ಕನ್ನಡಕ್ಕೆ ಬಂದಿತೆನ್ನುವುದರಲ್ಲಿ ಸಂದೇಹವಿಲ್ಲ.

ಇದಕ್ಕೆ ಕಾರಣರಾದವರೂ ಇಂಗ್ಲಿಷ್ ಕಲಿತವರೇ. ಈ ಸಾಹಿತ್ಯ ಚಳವಳಿ ಕೆಲವು ಅತಿರೇಕಗಳನ್ನು ಕಾಣಿಸಿದ್ದೂ ನಿಜ. ಆದರೂ ಅದು ಕನ್ನಡ ಸಾಹಿತ್ಯವನ್ನು ಇನ್ನಿಲ್ಲದಂತೆ ಗತಿಶೀಲವವನ್ನಾಗಿ ಮಾಡಿತೆನ್ನುವುದು ಕೂಡ ಅಷ್ಟೇ ನಿಜ. ಹೀಗೆ ಬೇರೆ ಭಾಷೆಗಳ ಪ್ರಭಾವದಲ್ಲಿ ತಂತಮ್ಮ ಭಾಷಾ ಸಾಹಿತ್ಯಗಳನ್ನು ವೃದ್ಧಿಸಿಕೊಂಡವರಲ್ಲಿ ಕನ್ನಡಿಗರು ಮೊದಲಿಗರೂ ಅಲ್ಲ, ಕೊನೆಯವರೂ ಅಲ್ಲ. ಜಾಗತಿಕ ಇತಿಹಾಸದ ಗತಿಯೇ ಹೀಗೆ. ಎಲ್ಲಕ್ಕಿಂತ ಮುಖ್ಯವಾಗಿ ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯ ಜಗತ್ತಿನ ಇತರ ಭಾಷೆಗಳಿಗೂ ಸಾಹಿತ್ಯಗಳಿಗೂ ಋಣಿಯಾಗಿರುವುದು. ನವ್ಯ ಸಾಹಿತಿಗಳನ್ನು ಇಂಗ್ಲಿಷ್ ವ್ಯಾಮೋಹಿಗಳೆಂದೂ ಕನ್ನಡ ದ್ವೇಷಿಗಳೆಂದೂ ಕೆಲವರು ತಪ್ಪಾಗಿ ಅರ್ಥ ಮಾಡಿಕೊಂಡರು. ವಾಸ್ತವದಲ್ಲಿ ಅವರು ಕನ್ನಡದ ಪ್ರೀತಿಯಿಂದಲೇ ಬರೆಯುತ್ತಿದ್ದವರು.

ವಾಸ್ತವದಲ್ಲಿ ನೋಡಿದರೆ, ಇಂದಿನ ಜಗತ್ತಿನಲ್ಲಿ ಗಣಿತವಾಗಲಿ, ವಿಜ್ಞಾನವಾಗಲಿ, ಸಮಾಜಶಾಸ್ತ್ರಗಳಾಗಲಿ ಯಾವುದೇ ಒಂದು ರಾಷ್ಟ್ರದ ಅಥವಾ ಭಾಷೆಯ ಸೊತ್ತಾಗದೆ ಸಾರ್ವತ್ರಿಕವಾಗಿದೆ. ಜ್ಞಾನವೆನ್ನುವುದು ಒಂದು ಭಾಷೆಗೆ ಪರಿಮಿತವಲ್ಲ. ಆದರೂ, ಅವರವರ ಮಾತೃಭಾಷೆಯಲ್ಲಿ ಅದು ದೂರಕುವಂತಾದರೆ ಅದಕ್ಕಿಂತ ಹೆಚ್ಚಿನ ಅನುಕೂಲ ಇನ್ನೊಂದಿಲ್ಲ. ಆದ್ದರಿಂದ ನಾವು ಇಗಾಲಿಯ ಮರುಶೋಧನೆ ಮಾಡದೆ, ಇರುವ ಗಾಲಿಯನ್ನೇ ಇನ್ನಷ್ಟು ನಾಜೂಕಾಗಿ ಹೇಗೆ ಮಾಡಬಹುದು ಎಂಬ ಬಗ್ಗೆ ಯೋಚಿಸಬೇಕಾಗಿದೆ. ಎಂದರೆ, ಜ್ಞಾನಪ್ರಕಾರಗಳನ್ನು ನಾವು ಯಾವ ಬೇಕಾದಂತೆ ಉಪಯೋಗಿಸುವುದು ಸಾಧ್ಯ. ಇದಕ್ಕೆ ನಮ್ಮ ಕನ್ನಡ ರಾಷ್ಟ್ರೀಯತೆ ಅಡ್ಡಬರಬಾರದು.

ಮುಖ್ಯವಾಎಗಿ ಆಗಬೇಕಾದ ಕಾರ್ಯವೆಂದರೆ ಕನ್ನಡದಲ್ಲಿ ನಾವು ಪ್ರಬುದ್ಧವಾಗಿ ಬರೆಯುವುದು, ಓದುವುದು ಸಾಧ್ಯವಾಗಿಸುವುದು. ವಿಶ್ವದ ಎಲ್ಲಾ ಜ್ಞಾನಸಂಪತ್ತೂ ಕನ್ನಡದಲ್ಲಿ ದೊರಕುವಂತಾಗಿಬೇಕು. ಆದರೇನೇ ಈ ವಿಷಯಗಳ ಕುರಿತು ಕನ್ನಡದಲ್ಲಿ ಬರೆಯುವುದು, ಚಿಂತಿಸುವುದು ಇಂದಲ್ಲದಿದ್ದರೆ ನಾಳೆಯಾದರೂ ಸಾಧ್ಯವಾಗುವುದು. ಆದರೆ ಹಾಗೆ ಮಾಡಬೇಕಿದ್ದರೆ, ಕನ್ನಡಿಗರೂ ವಿಶ್ವದ ಹಲವು ಭಾಷೆಗಳನ್ನು ಕಲಿತುಕೊಳ್ಳುವುದು ಅಗತ್ಯವೆನ್ನುವುದನ್ನು ಮರೆಯಬಾರದು. ಈ ನಿಟ್ಟಿನಿಂದ ಕರ್ನಾಟಕದಲ್ಲಿ ಯಾಕೆ ವಿದೇಶ ಭಾಷಾ ವಿಶ್ವವಿದ್ಯಾಲಯವೊಂದನ್ನು ಸ್ಥಾಪಿಸಬಾರದು? ಈವತ್ತು ಇತ್ಯಾದಿ ಭಾಷೆಗಳನ್ನು ಕಲಿಯಬೇಕಿದ್ದರೆ ಕರ್ನಾಟಕದ ಹೊರಕ್ಕೆ ಹೋಗಬೇಕಾಗಿದೆ. ರಶಿಯನ್, ಫ್ರೆಂಚ್ ಮತ್ತು ಜರ್ಮನ್ ಭಾಷೆಗಳನ್ನಷ್ಟೆ ಕರ್ನಾಟಕದ ಕೆಲವೆಡೆ ಸ್ವಲ್ಪಮಟ್ಟಿಗೆ ಕಲಿಸಲಾಗುತ್ತಿದೆ. ಕನ್ನಡದ ಪ್ರಗತಿಗೆ ಈ ಅಲ್ಪ ಪ್ರಮಾಣ ಏನೇನೂ ಸಾಲದು. ಪ್ರತಿಯೊಂದು ವಿಶ್ವವಿದ್ಯಾಲಯದಲ್ಲೂ ಕೆಲ್ಸು ಕಾಲೇಜು ಹೈಸ್ಕೂಲುಗಳಲ್ಲೂ ಪ್ರಮುಖ ವಿದೇಶ ಭಾಷೆಗಳ ಅಧ್ಯಯನಕ್ಕೆ ಅನುಕೂಲವಿರಬೇಕು. ಯಾವ ಭಾರತೀಯರು ಹೆಚ್ಚೆಚ್ಚು ಭಾಷೆಗಳನ್ನು ಕಲಿಯುತ್ತಾರೋ ಆ ಭಾಷೀಯರಿಗೆ ಅದರಿಂದ ದೂರಕಾಲೀನ ಅನುಕೂಲತೆಗಳು ಒದಗುವುದರಲ್ಲಿ ಸಂಶಯವಿಲ್ಲ. ಬೇರೆ ಬೇರೆ ಭಾಷೆಗಳಿಂದ ನಾವು ಕನ್ನಡಕ್ಕೆ ಭಾಷಾಂತರಿಸುವ ಜತೆಗೇ ಕನ್ನಡದ ಉತ್ತಮ ಕೃತಿಗಳು ಈ ವಿದೇಶ ಭಾಷೆಗಳಿಗೂ ಅನುವಾದಗೊಳ್ಳಬೇಕಾಗಿದೆ.

ಕನ್ನಡ ಭಾಷೆ ಕಲಿಯಲು ಕೆಲವು ವಿದೇಶಿಯರು ಆಸಕ್ತಿ ತೋರಿಸುತ್ತಿದ್ದಾರೆ. ಕನ್ನಡ ವಿದ್ವಾಂಸರು ಹಾಗೂ ಕರ್ನಾಟಕ ಸರಕಾರ ಈ ದಿಸೆಯಲ್ಲಿ ಗಂಭೀರವಾದ ಯೋಜನೆಗಳನ್ನು ಹಾಕಿಕೊಳ್ಳುವ ಅಗತ್ಯವಿದೆ. ಉದಾಹರಣೆಗೆ, ವಿದೇಶೀಯರಿಗೆ ಕನ್ನಡ ಕಲಿಯಲು ಕರ್ನಾಟಕದ ವಿಶ್ವವಿದ್ಯಾಲಯಗಳಲ್ಲಿ ಕೆಲವು ಸ್ಕಾಲರ್ ಶಿಪ್‌ಗಳನ್ನು ಸ್ಥಾಪಿಸುವುದು. ಅಮೇರಿಕ, ಇಂಗ್ಲೆಂಡ್, ಜರ್ಮನಿ ಮುಂತಾದ ರಾಷ್ಟ್ರಗಳ ಕೆಲವು ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಕಲಿಸುವ ಕುರಿತಾದ ಸಾಧ್ಯತೆಗಳನ್ನು ಅನ್ವೇಷಿಸುವುದು. ಆ ದೇಶಗಳಲ್ಲಿ ಕನ್ನಡ ಕಲಿಯಲು ಮುಂದೆ ಬರುವ ವಿದ್ಯಾರ್ಥಿಗಳಿಗೆ ಆಯಾ ವಿಶ್ವವಿದ್ಯಾಲಯಗಳಲ್ಲೇ ಕೆಲವು ಫಿಲೋಶಿಪ್‌ಗಳನ್ನು ನೀಡುವುದು. ಕನ್ನಡವನ್ನು ಜಗತ್ತಿನ ಯಾರು ಬೇಕಾದರೂ ಕಲಿಯಲು ಸುಲಭವಾಗುವಂತೆ ವೈಬೆಸೈಟಿನ ಮೂಲಕ ಕೆಲವು ಇಂಟರಾಕ್ಟಿವ್ ಮಲ್ಟಿಮೀಡಿಯಾ ಕೋರ್ಸುಗಳನ್ನು ತಯಾರಿಸಿ ಅಂತರ್ ಜಾಲದಲ್ಲಿ ಬಿತ್ತರಿಸುವುದು. ಇದೇ ರೀತಿ ಕನ್ನಡದ ಬಹುಭಾಷೀಯ ನಿಘಂಟುಗಳು ಅಂತರ್ ಜಾಲದಲ್ಲಿ ದೊರಕುವಂತೆ ಮಾಡುವುದು. ಕನ್ನಡದ ಹಾಡುಗಳು, ಗೀತೆಗಳು, ಸಣ್ಣ ಕತೆಗಳು, ಕವಿತೆಗಳು, ಚಿಕ್ಕ ಚಿಕ್ಕ ಕಾದಂಬರಿಗಳು - ಕನ್ನಡ ಕಲಿಯಲು ಯಾವ ಯಾವ ಪಠ್ಯಗಳು ಸಹಾಯಕವಾಗುತ್ತವೋ ಅಂಥ ಪಠ್ಯಗಳು ಸಿಡಿ, ಡಿವಿಡಿ, ಅಂತರ್‌ಜಾಲ ಮುಂತಾದ ಇಲೆಕ್ಟ್ರಾನಿಕ್ ಮಾಧ್ಯಮಗಳಲ್ಲಿ ಧ್ವನಿ-ಚಿತ್ರ-ಟಿಪ್ಪಣಿ ಸಹಿತ ಧಾರಾಲವಾಗಿ ಸಿಗುವಂತೆ ಮಾಡುವುದು. ಇಂಥ ವ್ಯಾಪಕವೂ ದೂರಗಾಮಿಯೂ ಆದ ಯೋಜನೆಗಳಿಲ್ಲದೆ ಈ ದಿನಗಳಲ್ಲಿ ಭಾಷೆಯೊಂದರ ರಕ್ಷಣೆ ಹಾಗೂ ಅಭಿವೃದ್ಧಿಯ ಕುರಿತು ಮಾತನಾಡುವುದು ಅರ್ಥಹೀನವಾಗುತ್ತದೆ. ಸಂಗತಿಗಳು ಕಠಿಣವಾದಾಗ ಕಠಿಣರಾದವರೇ ಮುಂದೆ ಹೋಗುವುದು ಎಂಬ ಇಂಗ್ಲಿಷ್ ಗಾದೆಯಿದೆ. ಈ ಹೊತ್ತು ಜಪಾನೀಯರು ಮತ್ತು ಚೇನೀಯರು ತಮ್ಮ ಭಾಷೆಗಳನ್ನು ವಿದೇಶಗಳಲ್ಲಿ ಪ್ರಚಾರ ಪಡಿಸುವುದಕ್ಕೆ ಸಾಕಷ್ಟು ಹಣ ಸುರಿಯುತ್ತಿದ್ದಾರೆ. ಈ ಭಾಷೆಗಳ ಪಾಠಗಳು ಅಂತರ್‌ಜಾಲದಲ್ಲೂ ಲಭ್ಯ. ಕನ್ನಡದ ಮಟ್ಟಿಗೆ ಹೇಳುವುದಾದರೆ ಈ ನಿಟ್ಟಿನಲ್ಲ

ಸಾಕಷ್ಟು ಪ್ರಮಾಣದಲ್ಲಿ ನಡೆದಿಲ್ಲ. ಈಗ ಅಂತರ್‌ಜಾಲದಲ್ಲಿ ಲಭ್ಯವಿರುವ ಕೆಲವೇ ಕನ್ನಡ ಪಠ್ಯಗಳಿಗೆ ಕಾರಣ ಖಾಸಿಗಿ ಉಮೇದು ಮಾತ್ರ. ಕರ್ನಾಟಕ ಸರಕಾರ, ಸಾಹಿತ್ಯ ಅಕಾಡೆಮಿ, ಸಾಹಿತ್ಯ ಪರಿಷತ್ತು, ಕನ್ನಡ ವಿಶ್ವವಿದ್ಯಾಲಯ ಹಾಗೂ ಇನ್ನಿತರ ವಿಶ್ವವಿದ್ಯಾಲಯಗಳು ಈ ಕುರಿತು ಯೋಜನೆಗಳನ್ನು ತಯಾರಿಸಿ ಕಾರ್ಯಗತಗೊಳಿಸುವುದು ತುರ್ತಾಗಿ ನಡೆಯಬೇಕಾದ ಕೆಲಸ.

ಕರ್ನಾಟಕದಲ್ಲಿ ಕನ್ನಡವು ಸಾರ್ವಭೌಮ ಭಾಷೆ. ಇಂದು ಇದು ವ್ಯಾವಹಾರಿಕ ಭಾಷೆಯಾಗಿರುವುದರ ಜೊತೆಗೆ ಆಡಳಿತ ಭಾಷೆಯಾಗಿ, ಶಿಕ್ಷಣ ಮಾಧ್ಯಮದ ಭಾಷೆಯಾಗಿ ತನ್ನ ರೆಂಬೆ-ಕೊಂಬೆಗಳನ್ನು ಜೀವನದ ಎಲ್ಲ ಆಯಾಮಗಳಲ್ಲಿ ಚಾಚಿರುವುದು ಗಮನಾರ್ಹ ಸಂಗತಿ. ದಿನೇ-ದಿನೇ ಹೆಚ್ಚುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ದೇಸಿ ನುಡಿಯಾದ ಕನ್ನಡವನ್ನು ಅದರ ಎಲ್ಲ ಶಕ್ತಿ-ಸಾಮರ್ಥ್ಯಗಳೊಂದಿಗೆ ಉಳಿಸಿ-ಬೆಳೆಸುವುದು ನಮ್ಮೆಲ್ಲರ ಗುರುತರವಾದ ಹೊಣೆಯಾಗಿದೆ. ಈ ದಿಕ್ಕಿನಲ್ಲಿ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡದ ಅಭ್ಯಾಸವನ್ನು ತುಂಬ ಪ್ರಸ್ತುತವೆನಿಸುವ ರೀತಿಯಲ್ಲಿ ಅಳವಡಿಸಬೇಕಾದುದು ಅವಶ್ಯಕವಾಗಿದೆ.

ಕನ್ನಡದ ಅಧ್ಯಯನವೆಂದರೆ ಉಳಿದ ವಿಷಯಗಳ ಅಧ್ಯಯನಕ್ಕಿಂತ ಭಿನ್ನ. ಇತಿಹಾಸ, ಅರ್ಥಶಾಸ್ತ್ರ, ಭೌತಶಾಸ್ತ್ರ, ವಾಣಿಜ್ಯಶಾಸ್ತ್ರ ಮುಂತಾದ ವಿಷಯಗಳು ನಮ್ಮ ವಿದ್ಯಾರ್ಥಿಗಳಿಗೆ ಕೇವಲ ಆಯಾ ಶಾಸ್ತ್ರ ಹಾಗೂ ವಸ್ತು ವಿವರಗಳನ್ನು ತಿಳಿಸಿಕೊಡುವ ವಿಷಯಗಳು. ಆದರೆ ಕನ್ನಡ ನಮ್ಮ ವಿದ್ಯಾರ್ಥಿಗಳಿಗೆ ಜೀವನದ 'ಸಕೃತ ದರ್ಶನ' ಮಾಡಿಸುವ ಸರ್ವಸ್ವ. ಬದುಕಿನ ಸರ್ವಸ್ವವೂ - ವ್ಯವಹಾರ, ವೃತ್ತಿ -ಪರಿಣತೆ, ಸಂಸ್ಕೃತಿ - ಆಚಾರ -ವಿಚಾರ, ಜ್ಞಾನ-ವಿಜ್ಞಾನ ಮುಂತಾದವುಗಳನ್ನೆಲ್ಲ ಅರಳಿಸಿಕೊಡುವ ಪರಿಣಾಮಕಾರಿಯಾಗಿ ಹಸ್ತಾಂತರಿಸುವ ಕಾರ್ಯವನ್ನು ಕನ್ನಡ ಅಧ್ಯಯನ ಮಾಡುತ್ತದೆ. ಹೀಗಾಗಿ ಭಾಷೆ - ಸಾಹಿತ್ಯಗಳ ಅಧ್ಯಯನಕ್ಕೆ ವಿಶೇಷ ಆಯಾಮವಿರುವುದನ್ನು ನಾವು ಗಮನಿಸಬೇಕು. ಈ ಹಿನ್ನೆಲೆಯಲ್ಲಿ ನಾವು ಕನ್ನಡವನ್ನು ಅರ್ಥಪೂರ್ಣವಾಗಿ ಗಮನಿಸಬೇಕಾಗಿದೆ.

ಕನ್ನಡ ವಿಷಯವನ್ನು ಕೇವಲ ಭಾಷೆ ಸಾಹಿತ್ಯಗಳ ದೃಷ್ಟಿಯಿಂದ ಅಭ್ಯಾಸ ಮಾಡದೇ, ವ್ಯವಹಾರ ಕೌಶಲ್ಯವನ್ನು, ವೃತ್ತಿ, ನಿಷ್ಠೆ - ಮೌಲ್ಯಗಳನ್ನು ರೂಢಿಸಿಕೊಳ್ಳಲು ಇದೊಂದು ಉತ್ತಮ ಮಾಧ್ಯಮ ಎಂಬುದನ್ನು ನಾವಿಂದು ಗಮನಿಸಬೇಕು. ವ್ಯಾವಹಾರಿಕವಾಗಿ ನಾವು ಸುಂದರವಾಗಿ, ಸಮರ್ಥವಾಗಿ, ಅರ್ಥಪೂರ್ಣವಾಗಿ ಕನ್ನಡವನ್ನು ಬಳಸುವುದನ್ನು ನಾವಿಂದು ರೂಢಿಸಬೇಕಾಗಿದೆ. ಹೀಗೆ ವ್ಯಾವಹಾರಿಕ ಲೋಕದಲ್ಲಿ ಕನ್ನಡವನ್ನು ಪರಿಣಾಮಕಾರಿಯಾಗಿ ಬಳಸುವ ಮೂಲಕವೇ ನಾವಿಂದು ಕನ್ನಡಕ್ಕೆ ಶಕ್ತಿ ತುಂಬಬೇಕು, ಕನ್ನಡವನ್ನು ಹೊಸದುಗೊಳಿಸಬೇಕು.

ಆಧುನಿಕ ಕಾಲದ ಪಾಠಗಳನ್ನು, ವೈಜ್ಞಾನಿಕ ಶೋಧನೆಗಳ ಸಾರವನ್ನು ನಾವಿಂದು ಕನ್ನಡ ವಿದ್ಯಾರ್ಥಿಗಳ ಮನಸ್ಸಿಗೆ ಹಸ್ತಾಂತರಿಸುವುದು ಅವಶ್ಯವಿದೆ. ಕನ್ನಡ ಓದುವ ವಿದ್ಯಾರ್ಥಿ ಮಾನಸಿಕವಾಗಿ, ಬೌದ್ಧಿಕವಾಗಿ, ವ್ಯಾವಹಾರಿಕವಾಗಿ ಉಳಿದ ಯಾವ ವಿದ್ಯಾರ್ಥಿಯ ಗುಣಮಟ್ಟಕ್ಕಿಂತಲೂ ಕಡಿಮೆಯೆನಿಸಬಾರದು. ಕನ್ನಡ ಪುಸ್ತಕಗಳ ಅಧ್ಯಯನವು ಒಂದಿಷ್ಟು ಶ್ರಮ ಪಡುವ ಬೌದ್ಧಿಕ ಕಸರತ್ತಿನ ಕಡೆಗೆ ವಿದ್ಯಾರ್ಥಿಗಳ ಗಮನ ಸೆಳೆಯುವಂತೆ ಮಾಡುತ್ತದೆ. ಮುಂದೆ ಹಲವಾರು ವೃತ್ತಿಪರ ಅಧ್ಯಯನ ಕೈಕೊಳ್ಳುವ ವಿದ್ಯರ್ಥಿಗಳು ತಮ್ಮ-ತಮ್ಮ ಅನುಭವ ಪರಿಮಿತೆಗಳ ಹಿನ್ನೆಲೆಯಲ್ಲಿ ಕನ್ನಡ ಭಾಷೆಯನ್ನು ಹೊಸದಾಗಿ ರೂಢಿಸಿಕೊಳ್ಳುವುದು ಸಾಧ್ಯವಾಗುತ್ತದೆ.

ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಮೂಲಕ ಭಾಷೆಯ ವೈವಿದ್ಯವನ್ನು, ಕೌಶಲ್ಯವನ್ನು ರೂಢಿಸಿಕೊಳ್ಳಲು ಸಾಧ್ಯವಾಗುತ್ತದೆ.

ಕರ್ನಾಟಕ ರಾಜ್ಯ ತನ್ನ ಕನ್ನಡತ್ವ ಅಥವಾ ಕರ್ನಾಟಕತ್ವನ್ನು ಕಳೆದುಕೊಳ್ಳುತ್ತಿದೆಯೇ ಎಂಬ ಸಂದೇಹ, ಕರ್ನಾಟಕದ ಇತಿಹಾಸ ಮತ್ತು ರಾಜ್ಯ ಸ್ಥಾಪನೆಯ ಹಿನ್ನೆಲೆಯನ್ನು ನೋಡಲಾರೆ ಮೈಸೂರು ಕರ್ನಾಟಕ, ಹೈದರಾಬಾದ್ ಕರ್ನಾಟಕ, ಮುಂಬಯಿ ಕರ್ನಾಟಕ ಹೀಗೆ ವಿಭಿನ್ನ ಪ್ರದೇಶಗಳ ಕೂಡುವಿಕೆಯಿಂದ ಸಂಯುಕ್ತ ಕರ್ನಾಟಕ ನಿರ್ಮಾಣವಾಗಿಯಿತು. ಕರ್ನಾಟಕತತ್ವದ ಪುನರುಜ್ಜೀವನದಲ್ಲಿ ಆದೊಂದು ಅತ್ಯವಶ್ಯಕವಾದ ಘಟನೆಯಾಗಿತ್ತು.

ಆದರೆ ಇಷ್ಟು ಪರ್ವ ಕಳದರೂ ಬೆಳೆದು ಬಂದಿಲ್ಲ. ಈ ಎಲ್ಲ ಕ್ಷೇತ್ರಗಳನ್ನು ಕೂರಿಸುವ ಸಮಾನ ಸಿಟ್ಟುತನ ಕನ್ನಡ ಭಾಷೆಯಾಗಿದ್ದರಿಂದ್ದರಿಂದ ಸಂಯುಕ್ತ ಕರ್ನಾಟಕದ ಉದಯದ ನಂತರ ಕನ್ನಡ ಭಾಷೆ-ಸಂಸ್ಕೃತಿ ಬೆಳೆದೀತು, ಬೆಳೆಗೀತು ಎಂಬ ಕನಸನನ್ನು ಅನೇಕರು ಕಂಡಿದ್ದರು. ಕನ್ನಡ ಭಾಷೆಯ-ಸಂಸ್ಕೃತಿ ಬೆಳೆದಿಲ್ಲ ಎಂದೇನಿಲ್ಲ. ಆದರೆ ಗುಣಾತ್ಮಕವಾಗಿಯಾಗಲೀ ಅಥವಾ ಸಾರ್ವತ್ರಿಕತೆಯ ದೃಷ್ಟಿಯಿಂದಾಗಲೀ ಈ ಬೆಳವಣಿಗೆ ಅಪೇಕ್ಷೆಗೆ ತಕ್ಕಂತಿಲ್ಲ ಎಂಬುದನ್ನು ಯಾರಾದರೂ ಒಪ್ಪಿಯಾರು

ಈ ಸಂದರ್ಭದಲ್ಲಿ ಅದಾಯದ ಸಂಕೇತ ಕಾಣುವುದು ಕರ್ನಾಟಕದ ಸುಶಿಕ್ಷಿತ ಕನ್ನಡಿಗರ ನಡುವಳಿಕೆಯಲ್ಲಿ ಬೆಂಗಳೂರಿನಲ್ಲಿ ಹೊರನಾಡಿನಿಂದ ಬಂದವರ ಮಾತನ್ನು ಗಮನಿಸಬೇಕು ಆಗಮನ ಸ್ವಾಭಾವಿಕವೂ ಹೌದು, ಸ್ವಾಗತಾರ್ಹವೂ ಹೌದು, ಭಾಷೆ-ಭಾಷೆಗಳ ನಡುವೆ ಸೌಹಾರ್ದತೆ ಭಾರತದ ರಾಷ್ಟ್ರೀಯ ಏಕತೆಗೆ ಅತ್ಯಾವಶ್ಯಕ ಆದರೆ ಜನ್ಮದಿಂದ ಕನ್ನಡಿಗರಾಃದವರು ಕನ್ನಡವನ್ನು ಏಕೆ ಬಿಟ್ಟು ಹೋಗುತ್ತಿದ್ದಾರೆ ಎಂಬುದು ದುಃಖದ ಸಂಗತಿ ಇಂದು ಸುಕ್ಷಿತ ಕನ್ನಡಿಗರು ಮಾತುಮಾತಿನಲ್ಲಿ ಇಂಗ್ಲಿಷ್ ಪದಗಳನ್ನು ಬಳಸುತ್ತಿರುವುದನ್ನು ನಾವು ಕಾಣಬಹುದು ಇಂಥ ಸಂಭಾಷಣೆಗಳಲ್ಲಿ ಭಾಷೆಯ ಚೆಲುವು ಇರುವುದಿಲ್ಲ, ವಿಚಾರ ಸ್ಪಷ್ಟತೆಯಾ ಕಾಣುವುದಿಲ್ಲ. ಇಂಗ್ಲಿಷ್ ಶಬ್ದಗಳನ್ನು ಎಂಬ ಹೀನಾ ಭಾವನೆ ನಮ್ಮ ಜನರಲ್ಲಿ ಬೆಳೆದಂತೆ ಕಾಣುತ್ತವೆ. ಇತರ ರಾಜ್ಯಗಳಲ್ಲೂ ಈ ಹವ್ಯಾಸ ಬೆಳೆಯುತ್ತಿವೆ. ಆದರೆ ಈ ದಾರಿಯಲ್ಲಿ ಕರ್ನಾಟಕ ಮುಂದೆ ಇದೆ ಎಂಬುದು ಸಂಶಯವಿಲ್ಲ.

ಕನ್ನಡ ಭಾಷೆ ಕರ್ನಾಟಕದ ಉಸಿರು ಈ ಉಸಿರನ್ನು ಉಳಿನೋಣ ಹಾಗೂ ಅದನ್ನು ಉಳಿಸುತ್ತಲೇ ಭಾರತದವನ್ನು ಮಹಾನ್ ರಾಷ್ಟ್ರವನ್ನಾಗಿ ಮಾಡವ ಮಹಾಪ್ರಯತ್ನದಲ್ಲಿ ಕರ್ನಾಟಕದ ಕೊಡುಗೆಯನ್ನು ಸಂವರ್ಧಿಸಬೇಕು.

ಶಿಕ್ಷಣದ ಉದಯವಾಗಿ ಕನ್ನಡಕ್ಕೆ ಬಕ್ಕಟ್ಟು ಉಂಟಾಗಿದೆ ನಿಜ, ಅದರ ಜಾತೀಕರಣದ ಹಲವಾಗಿ ಬಂದ ತಂತ್ರಿಕ ಕ್ರಾಂತಿಯಿಂದ ಇಂದು ನಮ್ಮ ಭಾಷೆ ನಾಟ್ಯವಾಗಿ, 'ಆಡುಮಾತಾ'ಗೆ ಹೆಚ್ಚು ಪ್ರಖರವಾಗಿದೆ. ಸ್ಯಾಟಲೈಟ್ ಟೆಲಿವಿಜನ್, ಕೇಬುಲ್ಲುಗಳ ಮುಂಖಾಂತರ ಪಾಶ್ಚತ್ಯ ಕಾರ್ಯಕ್ರಮಗಳು ನಮ್ಮ ಮನಗಳ ಅಂತರಂಗವನ್ನು ಆಕ್ರಮಿಸಿಕೊಳ್ಳಬಹುದೆಂಬ ಭಯ ಸುಳ್ಳಾದಿದೆ. ಹೊಸ ಚಾನೆಲ್ಲುಗಳು ಭಾರತೀಯ ಭಾಷೆಗಳಲ್ಲೇ ಹೇರಳವಾಗಿ ಬಂದಿವೆ. ಭಜನೆಯಾಗಿ ಕೀರ್ತನೆಯಾಗಿ, ಭಾಷಣವಾಗಿ, ವಾರ್ತೆಯಾಗಿ, ಮೆಗಾ ಸೀರಿಯಲ್‌ಗಳಾಗಿ -ಇದನ್ನು ಹಲವಾರು ರೂಪಗಳಲ್ಲಿ ಕನ್ನಡ ಇಂದು ವಿಭ್ರಂಭಿಸುತ್ತಿರುವ ಹಿಂದೆಂದೂ ವಿಭ್ರಂಭಿಸಿಲ್ಲ. ಅದರ ಜೊತೆಗೆ ಕಲಾಕಾರರು, ತಂತ್ರಜ್ಞರು, ಹೊಸ ವೀಕ್ಷಕ ವರ್ಗ ಇಂದು ಕನ್ನಡ ನುಡಿಯ ಮುಖಾಂತರ ಸಂತಸ ಪಟ್ಟಂತೆ ಹಿಂದೆಂದೂ ಪಟ್ಟಿಲ್ಲ.

ಇದಲ್ಲದೆ ವೃತ್ತ ಪತ್ರಿಕೆಗಳ, ನಿಯತಕಾಲಿಕೆಗಳ ಸಂಖ್ಯೆ ಹೆಚ್ಚುತ್ತಿದೆ. ಓದುಗರ ಸಂಖ್ಯೆ ಸ್ಫೋಟಕವಾಗಿ ಬೆಳೆಯುತ್ತಿದೆ. Desk TOp publishing ಪರಿಣಾಮವಾಗಿ ಎಷ್ಟು ಹೊಸ ಲೇಖಕರಿಗೆ ಪ್ರಕಾಶನದ ಸಂದರ್ಭ ದೊರೆತಿದೆ. ಹೇಳಬೇಕಾಗಿಲ್ಲ. ಆಧುನಿಕ ನಗರ ಸಂಸ್ಕೃತದಿಂದ ಕನ್ನಡಕ್ಕೆ ಬಂದದ್ದು ತೀರ ತಡವಾಗಿ.

ಕನ್ನಡವೇ ನಮ್ಮ ಭಾಹುಕತೆಯ ಅಭಿವ್ಯಕ್ತಿಗೆ ಎಷ್ಟೋ ಅಷ್ಟೇ ವೈಚಾರಿಕತೆಯ ಅಭಿವ್ಯಕ್ತಿಗೆ ಒಂದು ಭಾಷೆಯಾಗಿ ಉಳಿದಿರಬಹುದೆಂದು ಭರವಸೆ ಕಡಿಮೆಯಾಗುತ್ತಿದೆ.

ಕನ್ನಡದ ಭವಿಷ್ಯ ಆದಾಯದಲ್ಲಿಯೇ ಇದೆ ಕನ್ನಡಕ್ಕೆ ಯಾವಾಗ ಭವಿಷ್ಯ ಬರುತ್ತದೆ. ಎಂದರೆ ಒಂದನೇ ತರಗತಿಯಿಂದ ಹಿಡಿದು ಎಂ. ಎ. ಎಂ. ಎಸ್ಸಿ ತನಕ ಕನ್ನಡವೇ ಮಾಧ್ಯಮ ಆಗಬೇಕು. ಪ್ರಾಥಮಿಕ ಪೂರ್ವ ಶಿಕ್ಷಣಕೂಡ ಇದಕ್ಕೆ ರಾಜಕೀಯ ಸಂಕಲ್ಪ ಬೇಕು ಇಲ್ಲದೇ ಹೋದಲ್ಲಿ ಅಪಾಯ ನಿಶ್ಚತ.

ವಿಧಾನಸೌದದಲ್ಲಿ ಕೂಡ ಇಂದು ಆಡಳಿತ ಕನ್ನಡದಲ್ಲಿ ಶಿಕ್ಷಣವೂ ಬಹಳ ಹಿಂದೆ ಇದೆ. ಕಂಪ್ಯೂಟರ್‌ನಂತರ ವಿಜ್ಞಾನ ವಿಷಯದಲ್ಲಿ ನಾವು ತುಂಬಾ ಹಿಂದೆ ಇದ್ದೇವೆ ಇಂಗ್ಲಿಷ್ ಜೊತೆಗೆ ಪೈಪೋಟಿ ನಡೆಸುತ್ತಿದ್ದೇವೆ.

ನಮ್ಮನ್ನು ನಾವು ಗುರುತಿಸಿಕೊಳ್ಳದೆ. ಇದ್ದರೆ ಕನ್ನಡಕ್ಕೆ ಭವಿಷ್ಯ ಇದೆ ಅನಿನೋದಿಲ್ಲ. ಈಗಿನ ಶಿಕ್ಷಣ ಕೇವಲ ಮಾಹಿತಿ ಅಷ್ಟೆ ಅದು ತಿಳುವಳಿಕೆ ಜ್ಞಾನವನ್ನು ಕೊಡೋದಿಲ್ಲ. ಈ ಕೆಲಸ ಕನ್ನಡದಲ್ಲೇ ಆಗಬೇಕು.

ಇದೇ ರಾಜಕೀಯ ಸ್ಥಿತಿ ಆದಲ್ಲಿ ಕನ್ನಡಕ್ಕೆ ಖಂಡಿತಾ ಭವಿಷ್ಯ ಇಲ್ಲ. ಕನ್ನಡ ಕೇವಲ ವ್ಯಾವಹಾರಿಕವಾಗಿ ಇಳಿದರೆ ಸಾಲದು ಆಡಳಿತಾತ್ಮಕವಾಗಿಯೂ ಮುಂದುವರಿಯಬೇಕು.

ಇಂದು ಭಾಷೆಯ ಬಗ್ಗೆ ಆಲೋಚಿಸಬೇಕಾದ ಅನಿವಾರ್ಯವಿದೆ. ಶೈಕ್ಷಣಿಕ ವಲಯ, ಸರಕಾರ ಸಾರ್ವಜನಿಕರು, ಪೋಷಕರು ಮತ್ತು ಭಾಷಾತಜ್ಞರು ಚಿಂತಿಸಬೇಕಾದ ಪರಿಸ್ಥಿತಿ ಬಂದಿದೆ ಮುಖ್ಯವಾಗಿ ಭಾಷಾ ಸಮಸ್ಯೆಯ ಸ್ವರೂಪ ಅರಿಯುವುದಲ್ಲದೆ ಪರಿಹಾರ ಕುರಿತು ತುರ್ತುನಿಗಾ ಕೊಡಬೇಕು ವೃಕ್ಷಗಳ ಮತ್ತು ಪ್ರಾಣಿಗಳ ಜೀವಕಾಲ ವಿನಾಶದ ಬಗ್ಗೆ ಆತಂಕ ಮೂಡಿರುವ ಹಾಗೆಯೇ ಭಾಷೆಗಳ ಹಿನ್ನಡೆ, ಸವಕಶಿ ಕುರಿತು ಕಳಕಳಿ ಅಗತ್ಯ ಬಂದು ಬಾಷಾ ಸಮುದಾಯ ಅಥವಾ ಇಡೀ ಜನಾಂಗ ನಾಶವಾದಗ ಅವರ ಭಾಷೆಯೂ ನಾಶವಾಗುವುದು ಸಹಜ. ಆದರೆ ಕನ್ನಡ ಸಮಾಜವಿದ್ದೂ ಕನ್ನಡ ಭಾಷೆ ಸೊರಗುವುದು ತಲ್ಲಣಗೊಳಿಸುವ ಸಂಗತಿ ಭಾಷೆಯ ಪ್ರಧಾನ ನಿಯೋಗ ಸಂವಹನ ಇದು ದಿಟವಾದರೂ ಭಾಷೆಯೆಂಬುದು ಸಂಸ್ಕೃತಿಯ ಅವಿಭಾಜ್ಯ ಭಾಗ ಜನಸಮುದಾಯಗಳನ್ನು ಇಂದಿದ್ದ ಭಾಷಾ ಸಮುದಾಯವೆಂದು ಗುರುತಿಸುತ್ತಾರೆ. ನಿರ್ದಿಷ್ಟ ಭಾಷ ಸಮಾಜವನ್ನು ಭಾಷೆಯ ಮೂಲಕ ಲೋಕವನ್ನು ಗ್ರಹಿಸುತ್ತದೆ, ಆಯಾ ಸಮಾಜದ ಸತ್ವಭಿವ್ಯಕ್ತಿ ಅವರವರ ಮಾತೃಭಾಷೆಯ ಭಾಷೆಯ ಮೂಲಕವೇ ನಡೆಯುತ್ತಿರುತ್ತದೆ.

ಕನ್ನಡ ಭಾಷ ಸಮಾಜ ಎರಡೂವರೆ ಸಾವಿರ ವರ್ಗಗಳಿಂದ ಕನ್ನಡದ ಮೂಲಕ ತನನ್ನು ಸ್ಥಾಪಿಸಿಕೊಂಡಿದೆ. ಹೊಕ್ಕಳ ಬಳ್ಳಿಯಿಂದ ಕಳಚಿ ಕನ್ನಡ ಭಾಷೆ ಕ್ರಮೇಣ ಬಿಳಿಚಿ

ಕೊಳ್ಳುತ್ತಿರುವುದು ನಿಚ್ಚಳವಾಗಿ ಕಾಣುತ್ತಿದೆ. ಈ ಪಲಾಯನದಿಂದ ಸ್ವಭಾಷೆಗೆ ಕನ್ನಡ ಮಕ್ಕಳು ಪರಕೀಯರಾಗುತ್ತಿದ್ದಾರೆ. ಹಳ್ಳಿಗಳಲ್ಲೂ ಅನೇಕರು ತ್ರಿಶಂಕು ಸ್ಥಿತಿಯಲ್ಲಿದ್ದಾರೆ. ನೀರಿನಿಂದ ಹೊರಗೆ ಹಾಕಿದ ಮೀನಿನಂತೆ ಚಡಪಡಿಸುತ್ತಿದ್ದಾರೆ. ಪರಂಪರೆಯನ್ನು ಕೊಂಡೊಯ್ಯುವ, ಮುನ್ನಡೆಸುವ ಸುವರ್ಣ ಕೊಂಡಿಗಳು ಕಳಚುತ್ತಿವೆ. ಸಾವಿರಾರು ವರ್ಷಗಳಿಂದ ಹರಿದು ಬಂದ ಭಾಷೆಯ ಮತ್ತು ಸಂಸ್ಕೃತಿಯ ಇತಿಶ್ರೀ ಹಾಡಲು ಸಮಾಜ ಸಜ್ಜಾಗುತ್ತಿದೆಯೆಂಬ ವಿಷಣತೆಯ ಮೆಲುಕು ಕೇಳಿಸುತ್ತಿದೆ. ಈಗ ಎದುರಿಸಬೇಕಾದ ಸವಾಲುಗಳಲ್ಲಿ ಆದ್ಯತೆ ಭಾಷೆಗೆ. ಕನ್ನಡ ಭಾಷಾ ಜೀವದ ಸಂಧ್ಯಾಕಾಲ ಸಮೀಪಿಸುತ್ತಿದೆಯೇ? ಕನ್ನಡ ಭಾಷೆ ತನ್ನ ಗೋರಿಯ ಕಡೆಗೆ ಧಾವಿಸುತ್ತಿದೆಯೇ? ಕನ್ನಡದ ಪುನರುತ್ಪಾದಕ ಪ್ರಕ್ರಿಯೆ ನಿಂತು ಸವಕಳಿಯ ವೇಗ ಹೆಚ್ಚುತ್ತಿದೆಯೇ? ಕನ್ನಡ ಕಣ್ಮರೆಯಾಗಲು ಹವಣಿಸುತ್ತಿದೆಯೇ? ಅದರ ಕಲಶ ಒತ್ತುತ್ತಿದೆಯೆ? ಎಂಬಂಥ ಪ್ರಶ್ನೆಗಳು ಉದ್ಭವಿಸಿವೆ.

ಕನ್ನಡಿಗರು ಹತಾಶರಾಗಬೇಕಾಗಿಲ್ಲ. ಕನ್ನಡ ಅಷ್ಟು ಸುಲಭವಾಗಿ ಕೊಚ್ಚಿ ಹೋಗುವುದಿಲ್ಲ. ಅಪಾಯ ಇನ್ನೂ ಆರಂಭದ ಹಂತದಲ್ಲಿದೆ. ಹಾಗೆಂದು ಸಂತೃಪ್ತಿಯಿಂದ ಹಾಯಾಗಿ ಮಲಗಿ ನಿದ್ರಿಸುವಂತಿಲ್ಲ. ಹೀಗೆ ಮೈಮರೆಯದೆ ಬೇಗ ಈಗಿನಿಂದಲೇ ಮುಂಜಾಗರೂಕತೆ ವಹಿಸಬೇಕು. ಕನ್ನಡ ಮಾಧ್ಯಮಗಳನ್ನು ಕಡ್ಡಾಯಗೊಳಿಸಬೇಕು. ಕನ್ನಡವನ್ನು ಸದೃಢಗೊಳಿಸಲು ಅದರ ಮೃತ್ಯುಂಜಯ ಗುಣವನ್ನು ಉದ್ದೀಶಿಸಬೇಕು. ಸಾವಿರಾರು ವರ್ಷಗಳ ಅವಧಿಯಲ್ಲಿ ಸಂಸ್ಕೃತ, ಪ್ರಾಕೃತ, ಅರಬ್ಬಿ, ಪಾರಸಿ ಭಾಷೆಗಳು ವಲಸೆಯಾಗಿ ಕನ್ನಡದ ಮೇಲೇರಿ ಬಂದವು. ಕನ್ನಡ ಅವೆಲ್ಲವನ್ನೂ ಜೀರ್ಣಿಸಿಕೊಂಡು ಚಿರಂಜೀವಿಯಾಗಿ ಬೆಳೆಯಿತು. ಕನ್ನಡವನ್ನೇ ಕಲಿಯದೆ, ಹೆಚ್ಚು ಅಂಕಗಳು ಆಮಿಷದಿಂದ ಶಾಲಾ ಕಾಲೇಜುಗಳಲ್ಲಿ ಸಂಸ್ಕೃತವನ್ನು ಆಯ್ಕೆ ಮಾಡುತ್ತಿದ್ದ ಪರಿಪಾಟವನ್ನು ಮರೆಯಬಾರದು. ಆಗಲೂ ಸಂಸ್ಕೃತವನ್ನು ಭಾಷೆಯಾಗಿ ಕಲಿತರೇ ಹೊರತು ಮಾಧ್ಯಮವಾಗಿ ಅಲ್ಲ. ಆದರೆ ಈಗ ಇಂಗ್ಲಿಷನ್ನು ಮಾಧ್ಯಮವಾಗಿಯೂ ಕಲಿಯಲು ಹೊರಟಿರುವುದು ಪರಿಸ್ಥಿತಿಯನ್ನು ಗಂಭೀರವಾಗಿಸಿದೆ.

ಮಕ್ಕಳು ಮತ್ತೆ ಕನ್ನಡ ಸಾಲೆಗಳಿಗೆ ಮರಳಬೇಕು. ಕನ್ನಡ ಮಾಧ್ಯಮದಲ್ಲಿ ಕಲಿಯಬೇಕು. ಇದಕ್ಕೆ ಇರುವುದು ಒಂದೇ

ರಾಜಮಾರ್ಗ, ಕನ್ನಡ ಶಾಲೆಗಳ ಗುಣಮಟ್ಟ ಮತ್ತು ಪರಿಸರವನ್ನು ಉತ್ತಮಗೊಳಿಸಿ ಒಂದನೆಯ ತರಗತಿಯಿಂದಲೇ ಒಂದು ಭಾಷೆಯಾಗಿ ಇಂಗ್ಲಿಷ್‌ನ್ನೂ ಕಲಿಸಬೇಕು. ಇದಕ್ಕೆ ಹಾಲಿ ಇರುವ ಶಿಕ್ಷಕರೇ ಸಾಕು. ಕ್ರಮೇಣ ಇದರಲ್ಲಿ ಸುಧಾರಣೆ ಆಗುತ್ತದೆ. ಕನ್ನಡ ಮಾಧ್ಯಮ ಉಳಿಸಿ, ಇಂಗ್ಲಿಷ್ ಭಾಷೆ ಕಲಿಸಿ - ಎಂಬುದು ಸೂಕ್ತ ಪರಿಹಾರದ ರಾಜಮಾರ್ಗ. ಕನ್ನಡ ಚಿರಂಜೀವ ಸನತ್ಕುಮಾರನಾಗಲು ಹೊಸ ಆಮ್ಲಜನಕದ ಅಗತ್ಯವಿದೆ. ಗತ ಇತಿಹಾಸದ ಬುತ್ತಿಯೊಂದೇ ಸಾಲದು, ಪ್ರಾಕೃತ-ಸಂಸ್ಕೃತ, ಅರಬ್ಬಿ-ಪಾರಸಿ ಭಾಷೆಗಳ ಪ್ರಭಾವವನ್ನು ಜೀರ್ಣಿಸಿಕೊಂಡ ಕನ್ನಡ, ಇಂಗ್ಲಿಷಿನ ಪ್ರಭಾವವನ್ನೂ ಗರ್ಭೀಕರಿಸಿ ಮೃತ್ಯುಂಜಯವಾಗುತ್ತದೆ. ಅದರಿಂದ ಕನ್ನಡದ ಪುನರುತ್ಪಾದಕ ಸೃಷ್ಟಿ ಶಕ್ತಿ ಹುರಿಗೊಳ್ಳಲು ಇಂಗ್ಲಿಷ್ ಅನಿವಾರ್ಯ.

ಆಡಳಿತ, ಆರ್ಥಿಕ ವಹಿವಾಟು ಇತ್ಯಾದಿಗಳ ಜನಬಳಕೆಯನ್ನು ತಪ್ಪಿಸಿಬಿಟ್ಟರೆ ಸಾಕು, ಕನ್ನಡವನ್ನು ಕೊಲ್ಲುವುದಕ್ಕೆ ಬೇಕೆ ಸಮರ್ಥ ವಿಧಾನ ಬೇಕಿಲ್ಲ. ಕನ್ನಡದಲ್ಲಿ ಎಂಥ ಮಹಾ ಸಾಹಿತಿಗಳಿದ್ದರೂ, ಕನ್ನಡಕ್ಕೆ ಎಷ್ಟು ಜ್ಞಾನಪೀಠ ಪ್ರಶಸ್ತಿಗಳು ಬಂದಿದ್ದರೂ, ಕನ್ನಡ ಸಾಹಿತ್ಯ ಸಮ್ಮೇಳನವನ್ನು ಎಷ್ಟು ವಿಜೃಂಭಣೆಯಿಂದ ನಾವು ಆಚರಿಸಿದರೂ, ಜನ ಬಳಸುವುದನ್ನು ನಿಲ್ಲಿಸುತ್ತಿದ್ದಂತೆಯೇ ಆ ಭಾಷೆಯ ಅವಸಾನ ಶುರುವಾಗುತ್ತದೆ.

ಜೀವನದ ಸರ್ವ ಆಯಾಮಗಳನ್ನೂ ವ್ಯಾಪಿಸಿ, ಹೊಸ - ಹೊಸ ವಿನ್ಯಾಸಗಳನ್ನು ಪಡೆದುಕೊಂಡು ಬೆಳೆಯುತ್ತಿರುವ ಇಂದಿನ ಕನ್ನಡಕ್ಕೆ ಅನೇಕ ಮುಖಗಳುಂಟು. ಜ್ಞಾನ-ವಿಜ್ಞಾನ-ತಂತ್ರಜ್ಞಾನ ಹೊಸದಾಗುತ್ತ ಹೋದಂತೆ, ಕನ್ನಡ ಭಾಷೆಯೂ ತನ್ನ ಸ್ವರೂಪವನ್ನು ಬದಲಿಸಿಕೊಳ್ಳುವುದು ಅನಿವಾರ್ಯ. ಪ್ರಾದೇಶಿಕ ವೈಲಕ್ಷಣ್ಯ -ವೈವಿಧ್ಯಗಳೂ ಇಂದು ಕನ್ನಡ ಭಾಷೆಗೆ ಹೊಸ ಆಯಾಮಗಳನ್ನು ನೀಡಿ ಅದರ ಸೃಜನಶೀಲತೆಗೆ ನೀರೆರೆದು ಪೋಷಿಸುತ್ತಿವೆ.

ಕನ್ನಡಕ್ಕೆ ಕೇಡುಗಾಲ ಬಂದಿದೆ ಎಂಬ ಮಾತು ಇಂದಿನದಲ್ಲ. ಏಕೀಕರಣವಾದಾಗಿನಿಂದಲೂ ಇಂತಹ ಕೂಗು ಕೇಳುತ್ತಲೇ ಇದೆ. ಇದಕ್ಕೆ ಸರಿಹೊಂದುವಂತೆ ನಮ್ಮವರು ವರ್ಷಕ್ಕೊಮ್ಮೆ ಕನ್ನಡದ ಹಬ್ಬ ಮಾಡಿ ಕೈತೊಳೆದುಳ್ಳುತ್ತಾರೆ. ಅಲ್ಲಿಗೆ ನಾಡದೇವಿಗೆ ಸಾರ್ಥಕ್ಯತ ಬಾವುಟ ಹಾರಿಸಿಬಿಡುತ್ತಾರೆ. ಮತ್ತೆ ಕನ್ನಡ ನೆನಪಾಗುವುದು ಮುಂದಿನ ನವೆಂಬರ್‌ಗೆ.

ಇಂತಹ ಸಂದರ್ಭದಲ್ಲಿ ವೇದಿಕೆ ಮೇಲಿನಿಂದ ಹೊರಡುವ ಭಾಷಣಗಳೂ ಅದ್ಭುತ. ಕೆಲವು ರಕ್ತ ಕುದಿಯುವಂತಿರುತ್ತವೆ. ಮತ್ತೆ ಕೆಲವು ತಣ್ಣಗೆ ನಡುಗುವಂತಿರುತ್ತದೆ. ನಾಡಿನ ಗಡಿ, ಗುಡಿ, ಗಂಡಾಂತರ ಕುರಿತು ಬೀರುವ ಭಾಷಣಗಳು ಆ ದಿನದ ಮಟ್ಟಿಗೆ ಬೆಚ್ಚಗಿರುತ್ತದೆ.

ಕನ್ನಡದ ಪರವಾಗಿ ಮಾತನಾಡುವವರ ಮನೆಯಲ್ಲಿ ಅವರ ಮಕ್ಕಳ, ಮೊಮ್ಮಕ್ಕಳು ಯಾವು ಶಾಲೆಗೆ ಹೋಗುತ್ತಿದ್ದಾರೆ, ಅವರು ಯಾವ ಮಾಧ್ಯಮದಲ್ಲಿ ಓದುತ್ತಿದ್ದಾರೆ ಎಂಬತ್ಯಾದಿ ವಿವರಗಳನ್ನು ಕಲೆ ಹಾಕಿ ಅವರ ಮುಖಕ್ಕೆ ಹಿಡಿಯಲಾಗುತ್ತದೆ. ಇವರೆಲ್ಲಾ ಕನ್ನಡ ವಿರೋಧಿಗಳು ಎಂಬ ಭಾವನೆಯನ್ನು ಸಾರ್ವಜನಕಿರವಾಗಿ ಮೂಢಿಸಲಾಗುತ್ತದೆ.

ಕನ್ನಡ ತನ ಎಂಬುದು ಒಂದು ಭಾಷೆ ಮಾತ್ರವಲ್ಲ, ಅದು ಒಂದು ನೆಲದ ಸಂಸ್ಕೃತಿ. ಅದರಲ್ಲಿ ಪರಂಪರೆ, ಗಡಿ, ಸಾಹಿತ್ಯ, ಕಲೆ, ಬದುಕಿನ ರೀತಿಗಳೆಲ್ಲಾ ಮೇಳೈಸಿರುತ್ತವೆ ಎಂಬುದನ್ನು ನಮ್ಮ ಚಳುವಳಿಗಾರರು ಅರಿಯಬೇಕಾಗಿದೆ.

ಬಾವುಟ ಹಾರಿಸುವುದು, ಸಿಹಿ ಹಂಚಿ ಸಂಭ್ರಮಿಸುವುದು ತಪ್ಪೆಂದಾಗಲೀ, ಅದಕ್ಕೆಲ್ಲಾ ಅರ್ಥವಿಲ್ಲ ಎಂದಾಗಲೀ ಯಾರೂ ಭಾವಿಸಬೇಕಾಗಿಲ್ಲ. ಆದರೆ, ನಾಡು - ನುಡಿಯನ್ನು ಕಟ್ಟುವವರು ಪರಭಾಷಿಕರ ಮೇಲೆ ಹರಿಹಾಯುವುದನ್ನು ಬಿಟ್ಟು ನಮ್ಮ ಭಾಷೆಯ ಬಗ್ಗೆ ಸ್ವಾಭಿಮಾನ, ಗೌರವ ಮೂಡುವಂತೆ ಕನ್ನಡಿಗರನ್ನು ಉತ್ತೇಜಿಸಬೇಕು. ಪರಭಾಷಿಕರೂ ಕೂಡ ನಮ್ಮ ಬಗ್ಗೆ ಹೆಮ್ಮೆ ಪಡುವಂತೆ ಮಾಡಬೇಕಾದ ಅಗತ್ಯವಿದೆ.

ಪ್ರಾಚೀನ ಭಾಷೆಗಳಲ್ಲಿ ಒಂದಾದ ನಮ್ಮ ನುಡಿ 'ಕನ್ನಡ'ಕ್ಕೆ, ಕನ್ನಡ ಸಾಹಿತ್ಯಕ್ಕೆ ಜ್ಞಾನಪೀಠಗಳ ಗುರಿಯಿದೆ. ನಾಡಿನ ಜನ

ಸಜ್ಜನ, ಶಾಂತಿಪ್ರಿಯರು, ವಿದ್ವನ್ಮಣಿಗಳು, ಶ್ರೇಷ್ಠರು, ಚಿಂತಕರು ಎಂದೆಲ್ಲಾ ಹೆಸರಾಗಿದ್ದಾರೆ. ಕಲೆ - ವಾಸ್ತು ಶಿಲ್ಪದಲ್ಲಿ ಅಗ್ರಸ್ಥಾನದಲ್ಲಿದ್ದೇವೆ. ಇಷ್ಟಾದರೂ ಅಭಿಮಾನದ ವಿಚಾರದಲ್ಲಿ ಮಾತ್ರ ನಾವು ನಿರಭಿಮಾನಿಗಳಾಗಿಯೇ ಉಳಿದಿದ್ದೇವೆ. ನಾಡು - ನುಡಿ, ನೆಲ-ಜಲ ವಿಷಯದಲ್ಲಿ ಭಾವುಕರಾಗಿರಬಾರದು, ದುರಭಿಮಾನಿಗಳಾಗಬಾರದು ಎಂಬುದನ್ನು ನಾವೇ ಮೊದಲಿಗರೇನೋ! ಹಾಗಾಗಿ ನಮ್ಮ ಮೇಲೆ ಭಾಷೆ ವಿಷಯದಲ್ಲಿ ನೆಲದ ವಿಚಾರದಲ್ಲಿ, ನದಿ ನೀರಿನ ಹಂಚಿಕೆ ವಿಷಯದಲ್ಲಿ ನಮ್ಮಮ ಮೇಲೆ ನಿರಂತರ ದಾಳಿ ನಡೆಯುತ್ತಲೇ ಇದೆ. ಇಷ್ಟಾದರೂ ನಾವೆಂದು ಅದನ್ನು ತೀಕ್ಷ್ಣವಾಗಿ ತೆಗೆದುಕೊಂಡೇ ಇಲ್ಲ. ಕನ್ನಡ ನಾಡಿನ ರಾಜಧಾನಿ ಬೆಂಗಳೂರು ನಗರದಲ್ಲಿ ಅನ್ಯಭಾಮಿಕರ, ಆಕ್ರಮಣ ನಿರಂತರ ನಡೆದರೂ ಕನ್ನಡಿಗರು ಅಲ್ಪಸಂಖ್ಯಾತರಾದರೂ ತಮ್ಮ ತೊದಲು ನುಡು ಕಣ್ಣೆದುರೇ ಅಪಾಯದಲ್ಲಿ ಸಿಲುಕಿದರೂ ಅದರ ಪಾರು ಮಾಡುವಿಕೆಗೆ ನಮ್ಮನ್ನು ಆಳುವವರು ಇವತ್ತಿಗೂ ಗಂಭೀರ ಪ್ರಯತ್ನ ಮಾಡಿಯೇ ಇಲ್ಲ. ಕನ್ನಡದ ಜನರೇ ಆಳ್ವಿಕೆ ನಡೆಸಿದರೂ ಕನ್ನಡ ಭಾಷೆ ಇವತ್ತಿಗೂ ಪೂರ್ಣವಾಗಿ ವಿಧಾನಸೌಧದ ಮೆಟ್ಟಿಲನ್ನು ಏರಿಯೇ ಇಲ್ಲ. 'ಆಡಳಿತದಲ್ಲಿ ಕನ್ನಡ' ಎಂಬ ಮಾತು ಚಾಲ್ತಿಗೊಂಡು ಹಲವು ವರ್ಷಗಳೇ ಆದರೂ ಇಂಗ್ಲೀಷ್ ವ್ಯಾಮೋಹ ಬಿಟ್ಟಿಲ್ಲ. ನಾಡು-ನುಡಿ, ನೆಲ-ಜಲದ ವಿಚಾರ ಬಂದಾಗಲೆಲ್ಲಾ ರಾಜ್ಯದ ಅಭಿವೃದ್ಧಿ ವಿಷಯಗಳಲ್ಲಿ ಇವತ್ತಿಗೂ ಕೇಂದ್ರ ಸರ್ಕಾರ ತನ್ನ ಮಲತಾಯಿ ಧೋರಣೆಯನ್ನು ಮುಂದುವರಿಸಿದರೂ ಏಕೆಂದು ಪ್ರಶ್ನಿಸುವ ಎದೆಗಾರಿಕೆ ನಮ್ಮ ಸಂಸದರಿಗೆ, ಶಾಸಕರುಗಳಿಗೆ ಬಂದಿಲ್ಲ. ಶ್ರೇಷ್ಠ ಸಾಹಿತ್ಯ ರಚನೆ, ಹತ್ತಾರು ಪ್ರಶಸ್ತಿ ಪಡೆದ ಘನತೆ ನ್ಮ ಭಾಷೆಗಿದ್ದರೂ ಶಾಸ್ತ್ರೀಯ ಭಾಷೆ ಸ್ಥಾನಮಾನ ಇವತ್ತಿಗೂ ಹಕ್ಕುತ್ತಿಲ್ಲ!

'ಸರ್ವ ಜನಾಂಗದ ಶಾಂತಿಯ ತೋಟ' ವಾದ ಈ ಕನ್ನಡ ನಾಡು ಎಲ್ಲಾ ಧರ್ಮೀಯರ ಉದ್ಯಾನ, ಭಾರತ ಮಾತೆಯ ಪ್ರತಿಬಿಂಬದಂತಿರುವ ಕರ್ನಾಟಕ ಶಾಂತಿಗೆ ಸಾಮರಸ್ಯಕ್ಕೆ, ಐಕ್ಯತೆಗೆ, ಭ್ರಾತೃತ್ವಕ್ಕೆ, ಜಾತ್ಯಾತೀತತೆಗೆ ಮತ್ತೊಂದು ಹೆಸರು. ಆದರೆ ಇದನ್ನು ಇತ್ತೀಚಿನ ದಿನಗಳಲ್ಲಿ ದುರ್ಬಳಕೆ ಮಾಡಿಕೊಳ್ಳುತ್ತಿರುವುದು ವಿಷಾದದ ವಿಚಾರವಾಗಿದೆ.

ಕನ್ನಡ ನಾಡಿಗರು ನಿರಭಿಮಾನಿಗಳಲ್ಲಿ ಶೂರರು, ಧೀರರು... ಎಂದೆಲ್ಲಾ ಸಾವಿರ ವರ್ಷಗಳ ಹಿಂದೆಯೇ ಕಪ್ಪೆ ಅರೆಭಟ್ಟನ ಶಾಸನದಲ್ಲಿ ಕನ್ನಡಿಗರ ಕಾರ್ಯವನ್ನು ಹೊಗಳಲಾಗಿದೆ.

ಮಾತೃಭಾಷೆ ಎಂದರೆ ಏನೆಂದು ಬಿ. ಎಂ. ಶ್ರೀ ಯವರು ಈ ಸಾಲಿನಲ್ಲಿ ಸೊಗಸಾಗಿ ಹೇಳಿದ್ದಾರೆ.

ತಾಯಿ ಎದೆ ಹಾಲಿನ ಜತೆ ಮಗು ಕಲಿತು ಬಂದ ಭಾಷೆಯೇ ಮಾತೃಭಾಷೆ ಎನಿಸುವುದು. ನಾವು ಹುಟ್ಟಿದ ನೆಲ ಹ್ಯಾಗೆ ನಮಗೆ ದೊಡ್ಡದೋ ಹಾಗೆ ನಮ್ಮ ನಮ್ಮ ಭಾಷೆ ನಮಗೆ ದೊಡ್ಡದು. ನಮಗೆ ನಮ್ಮ ನೆಲ, ನಮ್ಮ ಭಾಷೆಯ ಮೇಲೆ ಪ್ರೀತಿ ಅಭಿಮಾನ ಇದ್ದಾಗ ಆ ಅಭಿಮಾನ ಇಲ್ಲದೆ ಹೋದರೆ ಆಗ ಬರುತ್ತದೆ. ಬಾಯಲ್ಲಿ ಮಮ್ಮಿ, ಡ್ಯಾಡಿ, ಅಂಕಲ್, ಆಂಟಿ, ಬ್ರದರ್, ಸಿಸ್ಟರ್, ಟೀಚರೆ, ಮೇಡಂ ಮುಂತಾಗಿ ಅಂದರೆ, ಅಕ್ಕರೆಯ ನಮ್ಮ ಅವ್ವ-ಅಪ್ಪ, ಅಣ್ಣ-ತಮ್ಮ, ಅಕ್ಕ-ತಂಗಿ, ಚಿಕ್ಕಪ್ಪ-ಚಿಕ್ಕವ್ವ, ಅತ್ತೆ-ಮಾವ ಸತ್ತರು ಅಂತ ಅರ್ಥ ಅಥವಾ ನಾವೇ ಕೊಂದಿದ್ದೇವೆ ಎಂತಲೂ ಆಗಬಹುದು.

ಭಾವ ತುಂಬಿದ ನಮ್ಮ ಕನ್ನಡ ಪದಗಳನ್ನು ಒಂದೊಂದಾಗಿ ತಿಂದು ಹಾಕುತ್ತಿದ್ದೇವೆ. ಕನ್ನಡ ಭಾಷೆ ಸಾವಿರಾರು ವರ್ಷದ ಚರಿತ್ರೆ ಇರುವ ಸಾಂಸ್ಕೃತಿಕ ಬನಿ ಇರುವ ಭಾಷೆ. ಆ ಪದಗಳೋ ಎಂಥ ಮೋಹಕವಾಗಿವೆ, ಎಷ್ಟೊಂದು ಸವಿಯಾಗಿವೆ. ಆಡುತ್ತಾ ಆಡುತ್ತಾ ಬಾಯಲ್ಲಿ ಚಪ್ಪರಿಸಬೇಕು ಎನಿಸುತ್ತದೆ. ಕನ್ನಡ ಕವಿ ಆನಂದಕಂದರು ಹೇಳುತ್ತಾರೆ.

ಎನಿತು ಇನಿದು ಈ ಕನ್ನಡ ನುಡಿಯು
ಮಾನವನು ತಣಿಸುವ ಮೋಹನ ಸುಧೆಯು
ಗಾನವ ಬೆರೆಯಿಸಿ

ವೀಣೆಯ ದನಿಯೊಳು ವಾಣಿಯ ನೇವುರ
ನುಡಿಸುತ ಕುಣಿಯಲು ಗಿಳಿಗಳು ಉಲಿಯುವ
ಮೆಲು ಮಾತುಗಳೂ
ಕಳಕಂಠಗಳಾ
ಚೆಲುವಿನ ಕುಕಿಲೋ

ಕನ್ನಡದ ಸವಿಯನ್ನು, ಸೊಗಸನ್ನು, ರಸ, ರುಚಿಯನ್ನು ಆನಂದಕಂದರು ಚೆನ್ನಾಗಿಯೇ ಬಣ್ಣಿಸಿದ್ದಾರೆ. ಇದು ಬರೀ ಅಭಿಮಾನದ ಮಾತಲ್ಲ, ಕನ್ನಡ ತನ್ನ ತನಿಬನಿ, ಓಜಸ್ಸು, ತೇಜಸ್ಸಿನಿಂದ ಹಿರಿದಾದ ಘನವಾದ ಭಾಷೆ, ಪಂಪ, ರನ್ನ, ಬಸವಣ್ಣ, ಕುಮಾರವ್ಯಾಸ, ದಾಸವರೇಣ್ಯರು, ಕುವೆಂಪು ಮುಂತಾದ ಸಾವಿರಾರು ಕವಿಗಳ ಕಾವ್ಯಪಾಕದಿಂದ ಸಮೃದ್ಧವಾದ ಭಾಷೆ.

ಕನ್ನಡ ನಾಡಿನ ಚರಿತ್ರೆ ನಾವು ಹೆಮ್ಮೆ ಪಡುವ ಚರಿತ್ರೆ. ಭಾಷಾ ಸಮೃದ್ಧಿ ಹೆಮ್ಮೆ ಪಡುವಂತದ್ದು. ಆದರೆ, ಈ ಕಾಲಕ್ಕೆ ನಾವೇ ನಮ್ಮ ಕನ್ನಡ ಪದಗಳನ್ನು ನುಂಗಿ ನೀರು ಕುಡಿದು ಬೇರೆ ಬೇರೆ ಭಾಷೆಯ ಪದಗಳನ್ನು ಬೆರೆಸಿ ಕಲಬೆರಕೆ ಮಾಡಿ, ಭಾಷೆಯನ್ನು ಕೊಲ್ಲುತ್ತಿದ್ದೇವೆ. ನಮ್ಮ ದಿನನಿತ್ಯದ, ವ್ಯವಹಾರದಲ್ಲಿ, ಚಲನಚಿತ್ರ, ದೂರದರ್ಶನ, ಆಕಾಶವಾಣಿ ಮುಂತಾದ ಎಲ್ಲಾ ರಂಗಗಳಲ್ಲಿ ಈ ಕಲಬೆರಕೆ ಭಾಷೆ ಉಪಯೋಗಿಸುವುದನ್ನು ಕಂಡರೆ ಕನ್ನಡಕ್ಕೆ ಇಷ್ಟು ಬೇಗ ಈ ದುರ್ಗತಿ ಬಂದಿತಲ್ಲ ಎಂದು ಮನಸ್ಸಿಗೆ ನೋವಾಗುತ್ತದೆ; ವ್ಯಥೆಯಾಗುತ್ತದೆ.

ಎಂಥ ವಿದ್ಯಾವಂತರೂ ಹತ್ತು ವಾಕ್ಯಗಳನ್ನು ಕಲಬೆರಕೆ ಇಲ್ಲದೆ ಶುದ್ಧ ಕನ್ನಡದಲ್ಲಿ ಮಾತನಾಡಿ ಎಂದರೆ ತಡಬಡಾಯಿಸಿ ಹೋಗುತ್ತಾರೆ. ಅದರಲ್ಲಿ ಕನ್ನಡದ ಗೌರವವನ್ನು ಸ್ವಲ್ಪ ಉಳಿಸಿದ್ದರೆ ಅವರು ನಮ್ಮ ಅಣ್ಣಂದಿರಾದ ತುಳು ನಾಡಿನವರು. ಕರಾವಳಿಯ ಜನ ಇಂದಿನ ಬದಲಾಗುತ್ತಿರುವ ಭಾಷಾ ಶೈಲಿಗೆ ಸರಿಯಾಗಿ ಹೊಸ ಕನ್ನಡ ಪದಗಳನ್ನು ಹೊಸೆದು, ಟಂಕಿಸಿ ಮುತ್ತು ಪೋಣಿಸಿದಂತೆ ಕೊಂದು ಏರಿಳಿಯುವ ತಾಳ ಲಯದಲ್ಲಿ ಸವಿಯಾಗಿ ಕನ್ನಡ ಪ್ರಿಯರಿಗೆ ಹಿತವಾಗುವಂತೆ ಮಾತನಾಡುತ್ತಾರೆ. ಇವರನ್ನು ಬಿಟ್ಟರೆ ನಮ್ಮ ಸಮಾಜದ ಅತ್ಯಂತ ಕೆಳಸ್ತರದ ಜನ ತಮ್ಮ ಪಾಡಿಗೆ ತಾವು ತಮ್ಮ ಭಾಷೆಯನ್ನು ಸಹಜವಾಗಿ ಬಾಯ್ತುಂಬಾ ಮಾತನಾಡುತ್ತಾರೆ. ಆದರೆ, ಅವರು ಅಕ್ಷರ ಕಲಿತು ಬೀದಿಗೆ ಬಂದರೆ ಅವರೂ ಕಲಬೆರಕೆ ಭಾಷೆಯನ್ನೇ ಆಡಬೇಕಾದ ಅನಿವಾರ್ಯತೆ ಒದಗಿಬರಬಹುದು.

ಮನೆಯಲ್ಲಿ ತಂದೆ-ತಾಯಿಗಳು, ಶಾಲೆಯಲ್ಲಿ ಉಪಾಧ್ಯಾಯರುಗಳು, ಚಲನಚಿತ್ರ, ದೂರದರ್ಶನ, ಆಕಾಶವಾಮಿ ಮುಂತಾದ ಕಡೆ ಕಲಾವಿದ ಭಾಷೆಯನ್ನು ಕಲಬೆರಕೆ ಮಾಡಿ ಉಪಯೋಗಿಸುವುದು ಸಹಜವಾಗಿ ಹೋಗಿದೆ. ಜನ ಏನನ್ನು ನೋಡುತ್ತಾರೋ, ಏನನ್ನು ಕೇಳುತ್ತಾರೋ ಅದನ್ನು ಅನುಸರಿಸುತ್ತಾರೆ; ಅನುಕರಿಸುತ್ತಾರೆ. ಆ ಕಾರಣ ಶಾಲಾ ಕಾಲೇಜುಗಳಲ್ಇ, ವಿದ್ಯುನ್ಮಾನ ಮಾಧ್ಯಮಗಳಲ್ಲಿ ಭಾಷೆಯನ್ನು ಕಲಬೆರಕೆ ಮಾಡದಂತೆ ಪ್ರಜ್ಞಾಪೂರ್ವಕವಾಗಿ ಎಚ್ಚರಿಕೆಯಿಂದ ಬಳಸುವುದನ್ನು ಕಲಿಯಬೇಕು. ನಾವು ಬಿಡಾಡುವಾಗ ಅಕ್ಕಪಕ್ಕದಲ್ಲಿ ಭಾಷೆಯ ಕಲಬೆರಕೆ ಕೇಳಿದಾಗ ಅವರಿಗೆ ಸಹನೆಯಿಂದ, ಪ್ರೀತಿಯಿಂದ ನಮ್ಮ ಭಾಷೆಯನ್ನು ಶುದ್ಧವಾಗಿ ಬಳಸಲು ತಿಳಿ ಹೇಳಬೇಕು. ಮದೆಯಲ್ಲಿ ತಂದೆ-ತಾಯಿಗಳು ತಮ್ಮ ಮಕ್ಕಳಿಗೆ ಅಪ್ಪ-ಅಮ್ಮ, ಚಿಕ್ಕಪ್ಪ-ಚಿಕ್ಕಮ್ಮ, ಮುಂತಾಗಿ ಕನ್ನಡ ಪದಗಳನ್ನು ಬಳಸಿ, ಹೀಗೆ ಬಳಸುವುದರ ಮೂಲಕ ಕನ್ನಡ ಪದಗಳನ್ನು, ಭಾಷೆಯನ್ನು ಉಳಿಸಿ ಹೀಗೆ ಮಾಡದೆ ಹೋದರೆ ಕೆಲವಾರು ವರ್ಷಗಳಲ್ಲಿ ನಮ್ಮ ಕನ್ನಡ ಪದಗಳು ಇಲ್ಲವಾಗುತ್ತವೆ. ಹಾಗೆಯೇ ಮುಂದೆ ಭಾಷೆಯೂ ಇಲ್ಲವಾಗುತ್ತದೆ ಎಂದು ವಿವರಿಸಿ ಹೇಳಬೇಕು.

ನಮಗೆ ನಾವೇ ನಿಯಮ ರೂಪಿಸಿಕೊಳ್ಳಬೇಕು. ಆ ನಿಯಮಗಳನ್ನು ಶ್ರದ್ಧಾಪೂರ್ವಕವಾಗಿ ಪಾಲಿಸಬೇಕು. ಮನೆ ಕಟ್ಟಲು ಇಟ್ಟಿಗೆ ಬೇಕು. ಭಾಷೆ ಕಟ್ಟಲು ಪದಗಳು ಬೇಕು, ನಗಲು ಇಟ್ಟಿಗೆ ಅಪಾಯಕಾರಿ, ಭಾಷೆಯಲ್ಲಿ ಕಲಬೆರಕೆ ಮುಂದಿನ ದುರಂತದ ಸಂಕೇತ.

ಮಾತು ಬಲ್ಲವ ಬರದಲ್ಲಿ ಗೆದ್ದ ಎಂಬ ಗಾದೆ ಕನ್ನಡದಲ್ಲಿದೆ. ಅಂದರೆ ಮಾತು ಎಲ್ಲವನ್ನು ಸಾಧಿಸುತ್ತದೆ. ಮಾತು ಒಂದು ದೊಡ್ಡ ಸಂಪತ್ತು. ಈ ಸಂಪತ್ತು ಸಾವಿರಾರು ವರ್ಷಗಳ ಕೋಟಿ ಕೋಟಿ ಜನರ ಪರಿಶ್ರಮದ ಫಲ. ಆರು ಕೋಟಿ ಜನರ ಈ ಮಾತನ್ನು ಪರಿಶುದ್ಧವಾಗಿ ಉಳಿಸುವುದು ಇಂದಿನ ತುರ್ತಾಗಿದೆ. ಯಾಕೆಂದರೆ ಈಗಾಗಲೇ ಕನ್ನಡ ಸಾಯಲು ಹೊರಟರೆ. ಅದು ಸತ್ತರೆ ಕನ್ನಡಿಗರಿಗೆ ಬದುಕೆಂಬುದೇ ಇಲ್ಲ. ಆದ್ದರಿಂದ ಇಂದು ನಾವು ಕನ್ನಡವನ್ನು ಉಳಿಸಿದರೆ ಮುಂದೆ ಕನ್ನಡ ನಮ್ಮನ್ನು ಉಳಿಸುತ್ತದೆ.

ಕನ್ನಡವನ್ನು ಕೊಲ್ಲಬಾರದೆಂದಾದರೆ ಕನ್ನಡವನ್ನು ಕಲಬೆರಕೆ ಮಾಡುವುದನ್ನು ಬಿಟ್ಟು ಶುದ್ಧ ಕನ್ನಡ ಮಾತನಾಡಲು ಪಣ ತೊಡಬೇಕು. ಕನ್ನಡ ಬದುಕಿಸಿ ನಾವು ಬದುಕಬೇಕು.

ನಾವು ಕನ್ನಡಿಗರು ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತೇವೆ. ಸಾವಿರಾರು ವರ್ಷಗಳ ಇತಿಹಾಸ ಇದೆ, ವಿಶ್ವ ದರ್ಜೆಯ ಸಾಹಿತ್ಯ ರಚನೆಯಾಗಿದೆ ಎಂದೂ ಹೇಳಿಕೊಂಡು ಬೀಗುತ್ತೇವೆ. ಆದರೆ, ನಮ್ಮ ಕಣ್ಣೆದುರು ಕನ್ನಡ ಇರಲಿ ಎಂದು ಹೋರಾಟ ಮಾಡುತ್ತಿದ್ದೇವೆ. ಜಾಹಿರಾತು ಫಲಕಗಳು, ಅಂಗಡಿ ಹೆಸರುಗಳನ್ನು ಕನ್ನಡದಲ್ಲೇ ಹಾಕಿ ಎಂದು ಕೋರಿಕೊಳ್ಳುತ್ತಿದ್ದೇವೆ.

ನಾವು ತುಳಿಯುತ್ತಿರುವ ನೆಲ ಕನ್ನಡದ್ದು, ಕುಡಿಯುವ ನೀರು ಕನ್ನಡದ್ದು, ಉಸಿರಾಡುತ್ತಿರುವ ಗಾಳಿ ಕನ್ನಡದ್ದು ಎಂಬ ಭಾವನೆ ಯಾರಲ್ಲಿ ಮೂಡುವುದಿಲ್ಲವೊ ಅವರು ಕನ್ನಡಿಗರಾಗಲು ಸಾಧ್ಯವಿಲ್ಲ. ಹಲವು ದಶಕಗಳ ಕಾಲ ಕನ್ನಡ ಭಾಷೆಯ ಅನುಷ್ಠಾನಕ್ಕಾಗಿ ನಡೆದ ಹೋರಾಟ ಇನ್ನೂ ಅರ್ಥಪೂರ್ಣವಾದ ಫಲಿತಾಂಶ ನೀಡಿಲ್ಲ. ನಮ್ಮನ್ನು ಆಳುವ ಸರ್ಕಾರಗಳ ಪ್ರತಿನಿದಿಗಳಿಗೆ ಇದು ಕನ್ನಡದ ನೆಲ ಎಂಬ ಅಭಿಮಾನ ಕಾಲಕ್ರಮೇಣ ನಶಿಸುತ್ತಿದೆ. ಅಧಿಕಾರ ಮುಖ್ಯವಾಗುವಾಗ ಕನ್ನಡವನ್ನು ಪ್ರೀತಿಸಬೇಕೆಂಬ ಅರಿವು ಅವರಿಗೆ ಇಲ್ಲವಾಗಿದೆ.

ಯಾವುದೇ ಕ್ಷೇತ್ರದ ಬಗ್ಗೆ ಆಲೋಚನೆ ಮಾಡಬಹುದು. ಅದನ್ನು ಕಾರ್ಯರೂಪ್ಕಕೆ ತರುವ ಪ್ರಯತ್ನಕ್ಕೆ ನಾವು ಗಮನ ಕೊಡದಿದ್ದರೆ, ಕನ್ನಡದಲ್ಲಿ ನಮ್ಮ ಯಾವ ವೈಯಕ್ತಿಕ ಕಾರ್ಯಗಳನ್ನು ಮಾಡಲು ಸಾಧ್ಯವಾಗಲಾರದು.

ಕನ್ನಡ ಜನರ ನುಡಿ; ಸಂಸ್ಕೃತಿ; ಸಂಕೇತ; ಬದುಕಿನ ಉಸಿರು. ಇದನ್ನು ನಾವು ಮರೆತು ಕರ್ನಾಟಕದಲ್ಲಿ ಏನನ್ನು ಸಾಧಿಸಲು ಸಾಧ್ಯವಿಲ್ಲ.

ಭಾವೈಕ್ಯಕ್ಕಾಗಿ ಕನ್ನಡ ಭಾಷೆ ಒಂದೇ ಎಂದು ನಾವು ಹೇಳಿದರೂ ಕನ್ನಡ ಎಂಬುದು ಹಲವು ಉಪಭಾಷೆಗಳ ಸಂಗಮ ಎಂಬುದನ್ನು ಅಲ್ಲಗಳೆಯುವಂತಿಲ್ಲ ಹಳೆಯ ಮೈಸೂರು ಪ್ರಾಂತದಲ್ಲಿ ಒಂದು ಪ್ರಕಾರದ ಕನ್ನಡ ಬಳಕೆಯಲ್ಲಿದ್ದರೆ, ಧಾರವಾಡದಕಡೆಗೆ ಕಡೆಗೆ ಇನ್ನೊಂದು ಪ್ರಕಾರ ಬಳಕೆಯಲ್ಲದೆ. ಕಲಬುರ್ಗಿ, ಬಿದರೆಯ ಕಡೆಗೆ ಮತ್ತೊಂದು ಪ್ರಕಾರವಿದೆ. ವಿಸ್ತಾರವಾದ ಪ್ರದೇಶದಲ್ಲಿ ಹರಡಿಕೊಂಡಿರುವ ಭಾಷೆಗೆ ಉಪಭಾಷೆಗಳು ಇರುವದು ಸಹಜವಷ್ಟೇ ಅಲ್ಲ, ಭಾಷೆಯ ಜೀವಂತಿಕೆಯ ಲಕ್ಷಣವೂ ಕೂಡ ಅಹುದು. 'ಸತ್ತ' ಭಾಷೆಗೆ ಉಪಭಾಷೆಗಳು ಹುಟ್ಟಿಕೊಳ್ಳುವುದು ಹೇಗೆ ಸಾಧ್ಯ?

ಹೀಗೆ ಪ್ರತಿಯೊಂದೂ ಉಪಭಾಷೆಯನ್ನಾಡುವವರಿಗೆ ತಮ್ಮ ಭಾಷೆಯೇ ಶುದ್ಧ ಭಾಷೆ, ಅದೇ ಮೇಲು, ಬೇರೆಯವರು ಆಡುವ ಭಾಷೆ ಶುದ್ಧವಲ್ಲ ಎನ್ನುವ ಭಾವನೆಗಳೂ ಬರುತ್ತವೆ. ಅದರೊಡನೆ ಇತರರು ಆಡುವ ಭಾಷೆಯನ್ನು ಅವಹೇಳನ ಮಾಡುವ, ಅಪಹಾಸ್ಯ ಮಾಡಿ ನಗುವ ಪ್ರಸಂಗಗಳೂ ಸಾಮಾನ್ಯವಾಗುತ್ತವೆ. ಧಾರವಾಡದವರು ಬಳಸುವ 'ನಮ್ಮ ಯಜಮಾನರು ಮನ್ಯಾಗ ಇಲ್ಲ. ಹಿಂದಾಗಡೆ ಬರ್ರಿ' ಎನ್ನುವ ವಾಕ್ಯವನ್ನು ಮೈಸೂರಿನ ಗೃಹಸ್ಥರೊಬ್ಬರು ಕೇಳಿ 'ಈಕೆ ಎಂಥ ಹೆಂಗಸು!ಗಂಡ ಮನೆಯಲ್ಲಿಲ್ಲ ಎಂದಾಕ್ಷಣ ಬೇರೆಯವರನ್ನು ಹಿಂದಿನ ಬಾಗಿಲಿನಿಂದ ಬರಲು ಕರೆಯುತ್ತಿದಾಳೆ!!' ಎಂದು ಅರ್ಥ ಮಾಡಿಕೊಂಡರಂತೆ 'ಹಿಂದಾಗಡೆ' ಎಂದರೆ 'ಆ ಮೇಲೆ' ಎಂಬ ಧಾರವಾಡ ಭಾಷೆಯಲ್ಲಿನಿಯ ಅರ್ಥ ಅವರಿಗೆ ಗೊತ್ತಿರಲಿಲ್ಲ. ಹಾಗೆಯೇ ಮತ್ತೊಮ್ಮೆ ಧಾರವಾಡ ಕಡೆಯ ಗೃಹಸ್ಥರೊಬ್ಬರು ಮೈಸೂರಿನಲ್ಲಿ ಸ್ನೇಹಿತರ ಮನೆಗೆ ಬಂದಾಗ ಅವರು 'ಒಳಗೆ ಬನ್ನಿ' ಎಂದರಂತೆ 'ಈಗೇನೂ ದಸರೆ ಅಲ್ಲವಲ್ಲ

ಈಗ್ಯಾಕ ಬನ್ನಿ?' ಎಂದು ಕೇಳಿದರಂತೆ ಇವರಿಗೆ 'ಬನ್ನಿ' ಎಂದರೆ 'ಬರ್ರಿ' ಎಂದಂತೆ ಎಂಬುದು ಗೊತ್ತಿರಲಿಲ್ಲ ಅದೇ ಗೃಹಸ್ಥ 'ನಿಮ್ಮಪ್ಪ ಒಳಗ ಇದ್ದಾರೇನಪ್ಪಾ' ಕಲಬುರ್ಗಿಯಲ್ಲಿ ಒಬ್ಬ ಹುಡುಗನಿಗೆ ಕೇಳಿದರೆ ಆ ಹುಡುಗ 'ಹೌದು ಒಳಗೆ ಹಾರ' ಅಂದನಂತೆ 'ಏನು ಹಾರವೋ ತುರಾಯಿಯೋ' ಎಂದು ಕೊಳ್ಳುತ್ತ ಒಳಗೆ ನಡೆದರಂತೆ.

ಈ ರೀತಿಯ 'ಮಾರ್ಗ ಭೇದಗಳನ್ನು' ನೃಪತುಂಗನೂ ತನ್ನ ಕವಿರಾಜ ಮಾರ್ಗದಲ್ಲಿ ಗುರುತಿಸಿದ್ದಾನೆ. ಉತ್ತರ ದಕ್ಷಿಣ ಅಷ್ಟೇ ಅಲ್ಲದೇ ಪೂರ್ವ, ಪಶ್ಚಿಮ ಮಾರ್ಗ ಬೇದಗಳೂ ಕಾಣ ದೊರೆಯುತ್ತವೆ. ಅಲ್ಲದೆ ಕರಾವಳಿ ಪ್ರದೇಶ ಕಾಸರಗೋಡಿನನಂಥ ಭೌಗೋಲಿಕವಾಗಿ ಹೆಚ್ಚು ಸಂಪರ್ಕ ಹೊಂದದ ಪ್ರದೇಶ ಮೊದಲಾದಕಡೆ ಭಾಷೆ ಭಿನ್ನವಾಗುವದು ಒಂದು ಸಹಜ ಪ್ರಕ್ರಿಯೆ

ಕಳೆದ ಶತಮಾನದ ಪ್ರಾರಂಭದಲ್ಲಿ ಜಾರ್ಜ್ ಗ್ರಿಯರ್ಸನ್ ಎಂಬ ವಿದ್ವಾಂಸ ಭಾರತದ ಎಲ್ಲ ಭಾಷೆಗಳ ಸರ್ವೇಕ್ಷಣವನ್ನು ಅನೇಕ ಸಂಪುಟಗಳಲ್ಲಿಪ್ರಕಟಿಸಿದ್ದಾರೆ. ಅವುಗಳಲ್ಲಿ ಸ್ಟನ್ ಕನೋವ್ ಎಂಬವರು ಸಂಪುಟದಲ್ಲಿ ಕನ್ನಡ ಭಾಷೆಯ ಸರ್ವೇಕ್ಷಷಣ ಇದೆ. ಅಲ್ಲಿ 'ವಿಜಾಪುರದ ಭಾಷೆ' ಎಂದು ಕೆಲವು ಮಾದರಿಗಳನ್ನು ಪ್ರಕಟಿಸಿದ್ದಾರೆ. ಆ ಕಾಲದಲ್ಲೂ ಕೂಡ ವಿಜಾಪುರದಲ್ಲಿ ಪ್ರಚಾರದಲ್ಲಿದ್ದ ಕನ್ನಡ ಬೇರೆ ಪ್ರದೇಶದ ಕನ್ನಡಕ್ಕಿಂತ ಭಿನ್ನವೆಂದೆನಿಸುವಂತೆ ಇತ್ತು ಆ ಮಾದರಿಯಗಳಲ್ಲಿ ಉರ್ದು ಶಬ್ದಗಳ ಪ್ರಬಲ್ಯ ಕಂಡುಬರುತ್ತದೆ. ವಿಜಾಪುರದಲ್ಲಿ ಮುಸಲ್ಮಾನ ದೊರೆಗಳು ಆಳಿದ್ದರಿಂದ ಆ ಪ್ರದೇಶದ ಕನ್ನಡದಲ್ಲಿ ಉರ್ದುಶಬ್ದಗಳು ಪ್ರವೇಶಗೊಂಡಿವೆ. ಅದೇ ರೀತಿ ಅವರು ಕೆಲವು ಕಾಲ ರಾಜ್ಯಭಾರ ಮಾಡಿದ್ದರಿಂದ ಇಲ್ಲಿಯ ಕನ್ನಡದಲ್ಲಿಯೂ ಕೆಲವಾರು ಉರ್ದು ಶಬ್ದಗಳು ಪ್ರವೇಶಿಸಿವೆ. ಡಿ. ಸಿ. ಆಫೀಸಿಗೆ ಅಠಾರ ಕಚೇರಿ ಎಂದು ನಿರ್ದೇಶಿಸುವದನ್ನು ಒಂದು ಉದಾಹರಣೆಯಾಗಿ ನೋಡಬಹುದು.

ಗ್ರಿಯರ್ಸನ್ ಅವರು ನಡೆಸಿದ ಸರ್ವೇಕ್ಷಣದಲ್ಲಿತರಾದ ಕೆಲವರಿಗೆ ಭಾಷಾವಿಜ್ಞಾನ ಮತ್ತು ಧ್ವನಿಜ್ಞಾನದ ಕಲ್ಪನೆ ಇದ್ದರೂ ಅವರು ಕೆಲಸಕ್ಕೆ ನೇಮಿಸಿಕೊಂಡಿದ್ದ ಎಲ್ಲರಿಗೆ ಆ ಪರಿಜ್ಞಾನ ಇರಲಿಲ್ಲ. ಅದರಿಂದಾಗಿ ಅವರ ಸಂಶೋಧನೆಯಲ್ಲಿ ಕೆಲವು ನ್ಯೂನತೆಗಳು ಉಳಿದುಬಿಟ್ಟಿವೆ. ಆದರೂ ಸುಮಾರು ಒಂದು ನೂರು ವರ್ಷಗಳ ಹಿಂದೆ ಪ್ರಾದೇಶಿಕ ಭಾಷಭೇದಗಳನ್ನು ಕುರಿತು ಅದ್ಭುತವಾದ ಸಾಮಗ್ರಿಯನ್ನು ಒದಗಿಸಿದರು.

ಅದಾದ ಮೇಲೆ ಸುಮಾರು ೩೦-೩೫ ವರ್ಷಗಳ ಹಿಂದೆ ಪುಣೆಯ ಡೆಕ್ಕನ್ ಕಾಲೇಜಿನಲ್ಲಿ ಯು. ಜಿ. ಸಿ. ಯ ನೆರವಿನಿಂದ ಡಿ. ಎನ್ ಶಂಕರ ಭಟ್ಟರ ನೇತೃತ್ವದಲ್ಲಿ ಕನ್ನಡ ಭಾಷೆಯ ಸರ್ವೇಕ್ಷಣ ನಡೆಯಿತು. 'ನಂಜನಗೂಡು ಕನ್ನಡ', ಎಂದು ಮೊದಲಾಗಿ ಬೇರೆ ಬೇರೆ ಪಂಡಿತರು ಬರೆದು ಅನೇಕ ಪುಸ್ತಕಗಳನ್ನು ಪ್ರಕಟಿಸಲಾಯಿತು. ಉಚ್ಚಾರದಲ್ಲಿ, ವ್ಯಾಕರಣ ಪ್ರಕ್ರಿಯೆಯಲ್ಲಿ ವಾಕ್ಯರಚನೆಯಲ್ಲಿ ಪ್ರತಿಯೊಂದು ಪ್ರದೇಶದ ಭಾಷೆಯು ತನ್ನದೇ ಆದ ವೈಶಿಷ್ಟ್ಯವನ್ನು ಹಾಗೂ ಇತರ ಪ್ರದೇಶದ ಭಾಷೆಯಿಂದ ಭಿನ್ನತೆಯನ್ನು ಹೇಗೆ ತೋರುತ್ತಿದೆ. ಎಂಬುದನ್ನು ಒಂದು ಪ್ರಕಾರದೊಡನೆ ಇನ್ನೊಂದು ಪ್ರಕಾರವನ್ನು ಹೋಲಿಸಿತೋರಿಸದೇ ಇದ್ದರೂ ಆಯಾ ಪ್ರದೇಶಗಳಲ್ಲಿ ಬಳಕೆಯಾಗುವ ಶಬ್ದಗಳನ್ನು ಅವುಗಳಲ್ಲಿ ಬಳಕೆಯಾಗುವ ಶಬ್ದಗಳನ್ನು ಅವುಗಳ ಪ್ರಯೋಗಗಳನ್ನು ಯಶಸ್ವಿಯಾಗಿ ಸಂಗ್ರಹಿಸಿ ಕೊಟ್ಟಿತು. ಕನ್ನಡದ ಉಪಭಾಷಾ ಸರ್ವೇಕ್ಷಣ ಶಾಸ್ತ್ರೀಯವಾಗಿ ನಡೆಯಬೇಕಾದುದು ಬಹುಕಾಲದ ಅಗತ್ಯವಾಗಿದೆ ಭಾಷಾವಿಜ್ಞಾನದ ಕಡೆಗೆ ಬುದ್ಧಿವಂತ ವಿದ್ಯಾರ್ಥಿಗಳ ಒಲವು ಕ್ಷೀಣಿಸಿದ ಈ ಕಾಲದಲ್ಲಂತೂ ಅಂಥ ಕಾರ್ಯವನ್ನು ನಿರೀಕ್ಷಿಸುವುದೂ ಕೂಡ ಸಾಧ್ಯವಾಗುತ್ತಿಲ್ಲ. ಕೇವಲ ಕನ್ನಡ ಕೆಲಸಕ್ಕೆಂದೆ ಕಟ್ಟಿ ನಿಂತ ಹಂಪಿಯ ಕನ್ನಡ ವಿಶ್ವವಿದ್ಯಾಲಯ ಈ ಕೆಲಸವನ್ನು ಮಾಡಿದರೆ ಮಾಡಬೇಕಷ್ಟೇ

ಕನ್ನಡ ನಾಡಿನಾದ್ಯಂತ ಗ್ರಂಥಸ್ಥ ಬರವಣಿಗೆ ಪ್ರಾದೇಶಿಕ ಶಬ್ದಗಳನ್ನು ಬಳಸುವದರಲ್ಲಿ ತನ್ನ ವೈಶಿಷ್ಟ್ಯವನ್ನು ತೋರುತ್ತಿದ್ದರೂ ಮೂಲಭೂತ ಶಬ್ದ ಭಂಡರ ಮತ್ತು ವಾಕ್ಯರಚನೆ ಹೆಚ್ಚು ವೈವಿಧ್ಯವನ್ನು ತೋರುವುದಿಲ್ಲ. ಆದರೆ ಉಚ್ಚಾರದಲ್ಲಿ ಮಾತ್ರ ಈ ವೈವಿಧ್ಯ ಹೆಚ್ಚು ಸ್ಪಷ್ಟವಾಗಿ ತೋರಿ ಬರುತ್ತದೆ. ಸಾಮಾನ್ಯನ ಕಿವಿಗೆ ಈ ಉಚ್ಚಾರ ಭೇದಗಳು ಕೇಳಿಸದೇ ಇರಬಹುದು ಎಲ್ಲವೂ ಒಂದೇ ಎನ್ನುವಂತೆ ಕೇಳಿಸುತ್ತಲೂ ಇರಬಹುದು ಆದರೆ ಧ್ವನಿವೈಜ್ಞಾನಿಕವಾಗಿ ಪರೀಕ್ಷಿಸಿದಾಗ ಉಚ್ಚಾರ ಭೇದಗಳಿರುವದು ಪರೀಕ್ಷಿಸಿದಾಗ

ಉಚ್ಚಾರ ಭೇದಗಳಿರುವದು ಗೋಚರಿಸುತ್ತದೆ. ಉದಾಹರಣೆಗೆ 'ಅ' ಕಾಲದಲ್ಲಿ ಧಾರವಾಡದ ಕಡೆಗೆ ಎರಡು ಉಚ್ಚಾರಗಳಿವೆ. ಎಣ್ಣೆಯಲ್ಲಿ 'ಕರಿ'ಬೇರೆ ಕೂಗು ಅರ್ಥದ' ಕರಿ'ಬೇರೆ ಸುಣ್ಣ ಮೊದಲಾದವುಗಳನ್ನು 'ಬಳಿಂ' ಬೇರೆ ಹೆಂಗಸರು ಕೈಗೆ ತೊಡುವು 'ಬಳಿ' ಬೇರೆ ತಿಳಿಕೊಳ್ಳು ಅರ್ಥದ 'ಅರಿ'ಬೇರೆ ಚಟ್ನ ಮೊದಲಾದವು ಗಳನ್ನು 'ಅರಂ'ಬೇರೆ 'ಅ' ಕಾರದ ಈ ಉಚ್ಚಾರ ಭೇದ ಮೈಸೂರು ಕಡೆಗೂ ಇದೆ. ಕಲಿತುಕೊಳ್ಳು ಅರ್ಥದ 'ಕಲಿ' ಮತ್ತು ಸೇರಿಕೊಳ್ಳು ಅರ್ಥದ 'ಕಲೆ(ಹಾಕು)' ಶಬ್ದಗಳಲ್ಲಿ 'ಕ'ದ ಉಚ್ಚಾರವನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಈ ಭೇದ ಗೊತ್ತಾಗುತ್ತದೆ.

ಅದೇ ಪ್ರಕಾರ, ಧಾರವಾಡ ಕನ್ನಡದಲ್ಲಿ 'ಒ' ಕಾರದಲ್ಲಿಯೂ ಎರಡು ಉಚ್ಚಾರಗಳು ಸಿಗುತ್ತವೆ. ಬಟ್ಟೆಯನ್ನು 'ಹೊಲಿ' ಯ ಉಚ್ಚಾರ ಬೇರೆ ಮೈಲಿಗೆ ಅರ್ಥದ 'ಹೊಳಿ'ಬೇರೆ ಈ ವ್ಯತ್ಯಾಸ ಮೈಸೂರು ಕಡೆಗೂ ನೋಡಲು ಸಿಗುತ್ತದೆ. ಗೆಳತಿಯನ್ನು ಪೆನ್ನು 'ಕೊಡೆ' ಎಂದು ಕೇಳುವಾಗ 'ಕೊ' ದ ಉಚ್ಚಾರ ಬೇರೆ ಹೀಗೆ ಸೂಕ್ಷ್ಮವಾಗಿ ನೋಡುತ್ತ ಹೋಧರೆ ಅನೇಕ ಕೂತೂಹಲಕಾರಿ ವಿಷಯಗಳು ಹೊರಬರುತ್ತವೆ. ಈ ರೀತಿ ನೋಡುತ್ತಹೋಗುವುದರಿಂದ ಬರುವ ಭಾಗ್ಯವೇನು?ಆಯಿತು ವ್ಯತ್ಯಾಸಗಳಿವೆ ಎಂದು ಒಪ್ಪಿಕೊಂಡರೂ ಅವುಗಳಿಂದ ಪ್ರಯೋನವೇನು? ಎಂಬ ಪ್ರಶ್ನೆಯನ್ನು ಸಾಮಾನ್ಯನೊಬ್ಬ ಕೇಳಬಹುದು 'ಭಾಷೆಯನ್ನು ಬಳಸುವವರು ಅದನ್ನು ಹೇಗೋ ಬಳಸುತ್ತಿರುತ್ತಾರೆ ತಿಳಿದುಕೊಳ್ಳುವವರು ತಿಳಿದುಕೊಂಡೇ ತಿಳಿದುಕೊಳ್ಳುತ್ತಾರೆ. ಉಚ್ಚಾರಗಳಲ್ಲಿ ಇರುವ ಸೂಕ್ಷ್ಮತಿಸೂಕ್ಷ್ಮ ವಿಷಯಗಳ ನ್ನೆಲ್ಲ ತಿಳಿದುಕೊಂಡು ಅವನಿಗೇನೂ ಪ್ರಯೋಜನವಿಲ್ಲ' ಎಂದೆನ್ನಬಹುದು ಆದರೆ ಕನ್ನಡದ ಬಗ್ಗೆ ತಿಳಿದುಕೊಳ್ಳಬೇಕೆವನ್ನು ಜಗತ್ತಿನ ಭಾಷಾವಿದ್ವಾಂಸರಿಗೆ ಈ ರೀತಿಯ ವಿಷಯಗಳು ತುಂಬಾ ಉಪಯುಕ್ತ ವಿಷಯಗಳನ್ನು ಒದಗಿಸಬಲ್ಲವು.

ಕನ್ನಡ ನಾಡಿನಲ್ಲಿ ಪ್ರವಾಸ ಮಾಡಿ ನೋಡಿದರೆ ಸಕ್ಯದರ್ಶನಕ್ಕೆ ಕಂಡು ಬರುವದು ಆಯಾ ಪ್ರದೇಶಗಳಲ್ಲಿ ಬಳಕೆಯಾಗುವ ವಿಶಿಷ್ಟ ಶಬ್ದಗಳು. ಒಂದೇ ವಸ್ತುವಿಗೆ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಶಬ್ದಗಳಿರುತ್ತವೆ. ನೋಡಿ ಧಾರವಾಡ ಕಡೆಗೆ 'ಪೇರಲ ಹಣ್ಣಿಗೆ ಮೈಸೂರು ಕಡೆಗೆ'ಸೀಬೆ ಹಣ್ಣು' ಎನ್ನುತ್ತಾರೆ. ಅಲ್ಲಿಯ 'ಮುಳಗಾಯಿಗೆ' ಇಲ್ಲಿ 'ಬದನೆಕಾಯಿ' ಎನ್ನುತ್ತಾರೆ ಅಲ್ಲಿಯ 'ಚವಳೀಕಾಯಿ' ಇಲ್ಲಿಯ 'ಗೋರಿಕಾಯಿ', ಅಲ್ಲಿಯ 'ಶಿರಾ' ಇಲ್ಲಿಯ 'ಕೇಸರಿ ಬಾತು' ಅಲ್ಲಿಯ 'ಕೇಸರಿ ಭಾತು' ಅಂದರೆ ಮತ್ತು ಸಕ್ಕರೆಯನ್ನು ಹಾಕಿ ಬೇಯಿಸಿದ ಅನ್ನ ಇಲ್ಲ ಆ ರೀತಿಯ ಸಿಹಿ ಅನ್ನವನ್ನು ಮಾಡುವದಿಲ್ಲವಾದ್ದರಿಂದಲೋ ಏನೋ ಅದು ತನ್ನ ಅರ್ಥವನ್ನು ಬದಲಿಸಿಕೊಂಡಿರಬೇಕು 'ಭಾತ್' ಅಂದರೆ ಅಕ್ಕಿಯಿಂದ ಮಾಡಿದ ಅನ್ನವೆಂಬುದು 'ಬಿಸಿ ಬೇಳೆ ಬಾತ್'ನಲ್ಲೂ ನೋಡುತ್ತೇವೆ. ಅಂದ ಮೇಲೆ ರವೆಯಿಂದ ಮಾಡಿದ 'ಕೇಸರಿ ಬಾತ್' ಎಂದಿನಿಂದ 'ಬಾತ್' ಆಯಿತು ಎಂಬುದನ್ನು ಸಂಶೋಧಿಸಬೇಕು ಅಲ್ಲದೆ. 'ಭಾತ್' ಎಂಬುದು ಮರಾಠಿಯಿಂದ ಬಂದ ಹಬ್ದ ಅಲ್ಲಿಯೂ ಅದಕ್ಕೆ ಅಕ್ಕಿಯಿಂದ ಮಾಡಿದ ಅನ್ನ ಎಂದೇ ಅರ್ಥವಿದೆ. 'ಕೇಸರಿ ಭಾತ್' ಅನ್ನು ಮಧುಮೇಹಿಗಳು ಇಷ್ಟಪಡದೇ ಇದ್ದಾಗ 'ಟೋಮ್ಯಾಟೊ ಭಾತ್' ಅಂದರೆ ರವೆಯಿಂದಲೇ ಉಪ್ಪು ಖಾರ, ಟೊಮ್ಯಾಟೋ ಹಾಕಿ ಮಾಡಿದ ಖಾದ್ಯ ಹುಟ್ಟಿಕೊಂಡಿರಬೇಕು.

ಧಾರವಾಡದ ಕಡೆಗೆ ಬಹಳ ಎಂಬ ಅರ್ಥಕ್ಕೆ 'ಅಗದಿ' ಅಥಾವ 'ಭಯಂಕರ' ಎಂಬ ಶಬ್ದಗಳಿವೆ. ಎಚ್ಚರ ಎಚ್ಚರಿಕೆ ಎಂಬ ಅರ್ಥಕ್ಕೆ 'ಕಾಳಜಿ',ಯಾವಾಗಲೂ ಎಂಬ ಅರ್ಥಕ್ಕೆ 'ಅಸರಂತೆ', ಠೀವಿ ಎಂಬ ಅರ್ಥಕ್ಕೆ 'ಡೌಲು' ಅಥವಾ 'ಯಮಕು' ಮೊದಲಾದ ಶಬ್ದಗಳು ಧಾರವಾಡದ ಕಡೆಗೆ ಪ್ರಯೋಗವಾಗುತ್ತವೆ. ಇವುಗಳಲ್ಲಿ ಮರಾಠಿ ಮೂಲದಿಂದ ಬಂದ 'ಕಾಳಜಿ'ಮಾತ್ರ ಬೇರೆ ಆಯಾಮಗಳೊಡನೆ ಸಾಹಿತ್ಯ ವಿಮರ್ಶೆಯಲ್ಲಿ ಪ್ರಯೋಗವಾಗುತ್ತಿದೆ.

ಉಡುಪಿಯ ಕಡೆಗೆ ಸಮುದ್ರದ ತೀರದ ಬಯಲು ಎಂಬುದಕ್ಕೆ 'ಅರಾಲು' ಅಲ್ಲಿಯ ಮರಳು ಬದನೆಕಾಯಿಗೆ 'ಗುಳ್ಳ' ಎಲೆಯನ್ನು ಸುತ್ತಿ ಮಾಡುವ ಒಂದು ವಶೇಷ ಖಾದ್ಯಕ್ಕೆ 'ಪತ್ರೊಡೆ' ಮೊದಲಾದ ಶಬ್ದಗಳನ್ನು ಬಳಸುತ್ತಾರೆ.

ರಾಯಚೂರು ಕಲಬುರ್ಗಿ, ಬಿದಿರೆಯ ಕಡೆಗೆ ಅಲ್ಲಿಯ ವಿಶಿಷ್ಟ ಶಬ್ದಗಳು ದೊರೆಯುತ್ತವೆ.

ಶಿವರಾಮ ಕಾರಂತ 'ಮರಳಿ ಮಣ್ಣಿಗೆ' 'ಬೆಟ್ಟದ ಜೀವ' ಮೊದಲಾದ ಕಾದಂಬರಿಗಳನ್ನು ಓದುವಾಗ ಇಂಥ ಅನೇಕ ಪ್ರಾದೇಶಿಕ ಶಬ್ದಗಳು ನಮಗೆ ಗೋಚರಿಸುತ್ತವೆ. ಕುವೆಂಪು ಅವರ 'ಮಲೆನಾಡಿನ ಚಿತ್ರಗಳು', 'ಕಾನೂರು ಹೆಗ್ಗಡತಿ', ವಿ. ಕೃ ಗೋಕಾಕರ 'ಸಮರಸವೇ ಹೆಗ್ಗಡತಿ', ವಿ. ಕೃ ಗೋಕಾಕರ 'ಸಮರವೇ ಜೀವನ' ರಾವ್‌ಬಹದ್ದೂರ್‌ರವರ' ಗ್ರಾಮಾಯಣ, ದೇವನೂರು ಮಹಾದೇವ ಅವರ'ಒಡಲಾಳ'ಮೊದಲಾದ ಕೃತಿಗಳನ್ನು ಓದುವಾಗ ಲೇಖಕರು ಪ್ರತಿನಿಧಿಸುವ ಪ್ರದೇಶ ಭಾಷೆಯ ಕಂಪು ಅಲ್ಲಿ ಬಳಕೆಯಾದ ಶಬ್ದ ಭಂಡಾರದಿಂದ ಸೂಚಿಸುತ್ತಿರುತ್ತದೆ. ಪ್ರತಿಭಾವಂತ ಲೇಖಕರೆಲ್ಲ ಇದನ್ನು ಮಾಡುತ್ತಲೇ ಇರುತ್ತಾರೆ. ಇಂಥ ಕೃತಿಗಳಿಂದಲೇ ಪ್ರಾದೇಶಿಕ ಶಬ್ದ ಭಂಡಾರ ಉಳಿದುಕೊಂಡು ಬಳಿದುಕೊಂಡು ಬರುತ್ತದೆ, ಕನ್ನಡ ಸಾಹಿತ್ಯ ಪರಿಷತ್ತು ಎಂಟು ಸಂಪುಟಗಳ ಬೃಹತ್ ನಿಘಂಟನ್ನು ತಯಾರಿಸಿವಾಗ ಕನ್ನಡ ನಾಡಿನಾದ್ಯಂತ ವಿಷಯ ಸಂಗ್ರಾಹಕರಿಂದ ಇಂಥ ಎಷ್ಟೋ ಶಬ್ದಗಳನ್ನು ಕಲೆಹಾಕಿ ಆ ನಿಘಂಟಿನಲ್ಲಿ ಸೇರಿಸಿಕೊಳ್ಳಲಾಯಿತು. ಶಿವರಾಮ ಕಾರಂತರು 'ಸಿರಿಗನ್ನಡ ಅರ್ಥ ಕೋಶ'ವನ್ನು ತಯಾರಿಸುವಾಗ ಧಾರವಾಡ ಕಡೆಯ ಶಬ್ಧಗಳ ಸಂಗ್ರಹ ಮತ್ತು ಅರ್ಥನಿರ್ಣಯಕ್ಕೆ ಹಾವೇರಿಯ ಹುಚ್ಚರಾವ್ ಬೆಗೇರಿ ಅವರ ಸಹಾಯ ಪಡೆದಿದ್ದರು.

ಪ್ರಾದೇಶಿಕ ಶಬ್ದ ಸಂಗ್ರಹದ ಈ ಪ್ರಯತ್ನಕ್ಕೆ ಮುಕ್ತಾಯವೆಂಬುದಿಲ್ಲ. ಏಕೆಂದರೆ ಇದುವರೆಗೂ ಕೈಗೆ ಸಿಗದ ಎಷ್ಟೋ ಶಬ್ದಗಳು ಉಳಿದುಕೊಂಡಿರುತ್ತವೆ. ಅವುಗಳನ್ನು ಸಂಗ್ರಹಿಸಿ ನಿಘಂಟಿನ 'ಅನುಬಂಧ ಸಂಪುಟ'ಗಳಲ್ಲಿ ಪ್ರಕಟಿಸುವಾಗ ಸಾಮಗ್ರಿ ಸಿಗುತ್ತದೆಯೋ ಅಷ್ಟು 'ಕನ್ನಡ ಭಾಷೆಯ ಇತಿಹಾಸ'ಸಾಧಾರವಾಗಿ ಸಮರ್ಪಕವಾಗುತ್ತದೆ ಅಲ್ಲದೆ, 'ವೃತ್ತಿಪದ ಕೋಶ'ಗಳು ಕೂಡ ಸಿದ್ಧವಾಗಬೇಕು ತೆಲುಗಿನಲ್ಲಿ ಭ. ಕೃಷ್ಣಮೂರ್ತಿಯವರು ಅಂಥ ಕೋಶಗಳನ್ನು ತಯಾರಿಸಿದ್ದಾರೆ.

ಕನ್ನಡಕ್ಕಾಗಿ ಕೆಲಸ ಮಾಡುವ ವಿಶ್ವವಿದ್ಯಾಲಯಗಳು, ಕಸಾಪದಂಥ ಸ್ವಾಯುತ್ತ ಸಂಸ್ಥೆಗಳು, ಅಥವಾ ಊಹೆಯುಳ್ಳ ಹಣವನ್ನು ಖರ್ಚು ಮಾಡಬಲ್ಲ ಖಾಸಗಿ ಸಂಸ್ಥೆಗಳು ಮುಂದೆ ಬಂದರೆ ಕನ್ನಡ ಒಳ್ಳೆಯದಾಗಬಲ್ಲದು. ತಮಿಳು, ತೆಲುಗು, ಮಲಯಾಳಗಳಿಗೆ ಹೋಲಿಸಿದರೆ ಕನ್ನಡಕ್ಕಾಗಿ ಅಷ್ಟು ಕೆಲಸ ನಡೆದಿಲ್ಲ. ನಡೆಯಬೇಕಾದುದು ಅಗತ್ಯವಾಗಿದೆ, ರಾಜ್ಯೋತ್ಸವದಂತಹ ಶುಭ ಸಂದರ್ಭದಲ್ಲಿ ಇಂಥ ಮಹಾಕಾರ್ಯಕ್ಕೆ ನಾಂದಿ ಹಾಡಬೇಕಾದುದೂ ಅಗತ್ಯವಾಗಿದೆ.

* * *

# ಉಪಸಂಹಾರ

ಸ್ವಾತಂತ್ರ್ಯ ಪೂರ್ವದಲ್ಲಿ ಕನ್ನಡ ಮಾತನಾಡುವ ಪ್ರದೇಶಗಳು ಒಟ್ಟು ೨೦ ಆಡಳಿತ ಪ್ರದೇಶಗಳಲ್ಲಿ ಹರಿದು ಹಂಚಿ ಹೋಗಿದ್ದವು. ಸ್ವಾತಂತ್ರ್ಯೋತ್ತರ ಕಾಲದಲ್ಲಿ ಅದನ್ನು ಐದು ಆಡಳಿತ ಪ್ರದೇಶಗಳನ್ನಾಗಿಯು. ಕನ್ನಡ ಮಾತನಾಡುವ ಜನರೆಲ್ಲ ಒಂದೇ ಆಡಳಿತದ ತೆಕ್ಕೆಗೆ ಒಳಪಡಬೇಕೆಂಬ ಕನಸು ನನಸಾಗಲು ಕನ್ನಡಿಗರು ಸರಿಯಾಗಿ ೧೦೦ ವರ್ಷ ಕಾಯಬೇಕಾಯಿತು. ಅದನ್ನು ಕಾರ್ಯಗತ ಮಾಡಿಕೊಳ್ಳಲು, ಅಖಂಡ ಕರ್ನಾಟಕವನ್ನು ಸಾಕ್ಷಾತ್ಕರಿಸಿಕೊಳ್ಳಲು ಒಂದು ಶತಮಾನದಷ್ಟು ಕಾಲ ಹೋರಾಡಬೇಕಾಯಿತು.

ಏಕೀಕರಣದ ಈ ಐದು ದಶಕಗಳಲ್ಲಿ ಕನ್ನಡ-ಕನ್ನಡಿಗ-ಕರ್ನಾಟಕದ ಸಾಧನೆ ಅಪಾರ-ಅದ್ವಿತೀಯ. ಅದು "ಕಣ್ಣು ಕುಕ್ಕಿಸುವಷ್ಟು ದೇದೀಪ್ಯಮಾನ, ಹರುಷ ಉಕ್ಕಿಸುವಷ್ಟು ಶೋಭಾಯಮಾನ." ಈ ಕಾಲಗತಿಯಲ್ಲಿ ಕನ್ನಡಿಗರ ಅರಿವಿನ ಕ್ಷಿತಿಜಗಳು ವಿಸ್ತಾರಗೊಂಡಿವೆ.

ಕನ್ನಡ ಚಳವಳಿ ಕನ್ನಡಿಗರದಲ್ಲ. ಈ ಕನ್ನಡ ಚಳವಳಿ ಹುಟ್ಟುವುದಕ್ಕೆ ಮುಂಚೆ ಇಲ್ಲಿ ಕನ್ನಡ ಇರಲಿಲ್ಲವೆ? ಕನ್ನಡ ಭಾಷೆ ಅವನತಿಯ ಹಾದಿ ಹಿಡಿದಿತ್ತು ಎಂಬ ಪ್ರಶ್ನೆ ಏಳುತ್ತದೆ. ಇಂದಿಗೂ ಕೂಡ ಕನ್ನಡದ ಹೆಸರಿನಲ್ಲಿ ಅಸಂಖ್ಯಾತ ಸಂಘ-ಸಂಸ್ಥೆಗಳು ಹುಟ್ಟಿಕೊಂಡಿವೆ. ಆದರೆ ಈ ಸಂಘಟನೆಗಳಿಗೆ ಕನ್ನಡ ಉಳಿಸುವ ರಾಜಮಾರ್ಗ ತಿಳಿದಿಲ್ಲವೆಂದು ತೋರುತ್ತದೆ. ಇವರೆಲ್ಲರೂ ಭಾವನೆಗಳ ಮೇಲೆ ಮಾತ್ರ ಭಾಗವಹಿಸುತ್ತಾರೆ. ಬನ್ನಿ ನಿಜವಾದ ಕನ್ನಡ ಉಳಿಸುವ ಹೋರಾಟ ಮಾಡೋಣ. ಅದಕ್ಕೆ ಎಲ್ಲರೂ ಒಂದುಗೂಡೋಣ. ಬೇರೆ ಭಾಷೆಯನ್ನು ವಿರೋಧಿಸುವುದಕ್ಕಾಗಿ ಅಲ್ಲ, ನಮ್ಮದ್ದನ್ನು ಉಳಿಸಿ ಬೆಳೆಸುವುದಕ್ಕಾಗಿ.

"ಕನ್ನಡವನ್ನು ಎಲ್ಲ ವಲಯಗಳಲ್ಲೂ ಬಳಸುವುದು ಎಂದರೆ ವಾಸ್ತವವಾಗಿ ಈಗ ಬಳಕೆಯಲ್ಲಿರುವ ಇಂಗ್ಲೀಷನ್ನು ಕಡಿಮೆ ಮಾಡುವುದು, ಕೊನೆಗೆ ನಿಲ್ಲಿಸುವುದು ಎಂದರ್ಥ" ಎನ್ನುತ್ತಾರೆ ಡಾ. ಕೆ.ವಿ. ನಾರಾಯಣ. ಇಂಗ್ಲೀಷ್ ಬಳಕೆಯನ್ನು ನಿಲ್ಲಿಸುವುದರ ಬದಲು ಇವರು ಕಂಗ್ಲಿಶನ್ನು ರೂಪಿಸಿಕೊಳ್ಳಬೇಕಾದ ಅಗತ್ಯವನ್ನು ಪ್ರತಿಪಾದಿಸಿದ್ದಾರೆ.

ಕನ್ನಡಿಗರ ಅಭಿಮಾನ ಹೇಗೇ ಇರಲಿ, ಅಧಿಕಾರಿಗಳ ಮರ್ಜಿ ಏನೇ ಇರಲಿ, ಸರ್ಕಾರದ ಅವಜ್ಞೆ ಎಂತೇ ಇರಲಿ ಕನ್ನಡದ ಜಾಗೃತಿ ಕಹಳೆಯನ್ನು ಉದ್ದಕ್ಕೂ ಸಾಹಿತಿಗಳು ಊದುತ್ತಲೇ ಬಂದಿದ್ದಾರೆ. ವಿಶ್ವವಿದ್ಯಾನಿಲಯಗಳ ಕನ್ನಡ ವಿಭಾಗಗಳು, ಕನ್ನಡ ಪರವಾದ ಸಂಘ-ಸಂಸ್ಥೆಗಳು, ಚಳುವಳಿಗಾರರು ತಮ್ಮಿಂದಾದ ಸಹಕಾರವನ್ನು ಕೊಡುತ್ತಲೇ ಬಂದಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ ಸಂಸ್ಕೃತಿ ಇಲಾಖೆ, ಸಾಹಿತ್ಯ ಅಕಾಡೆಮಿ, ಕನ್ನಡ ಪ್ರಾಧಿಕಾರ-ಇವೆಲ್ಲ ಕನ್ನಡ ಕಾಯಕಕ್ಕೆ ಕಂಕಣ ಕಟ್ಟಿ ದುಡಿಯುತ್ತಿವೆ.

ಕನ್ನಡಿಗರಾದ ನಾವು ಕನ್ನಡ ನಾಡು-ನುಡಿಯ ಇತಿಮಿತಿಗಳೇನು? ಸಾಧಕ-ಬಾಧಕಗಳೇನು ಎಂಬ ಬಗ್ಗೆ ವಿವೇಚಿಸಬೇಕಾದುದು ಇಂದು ಅನಿವಾರ್ಯವಾಗಿದೆ. ಇತ್ತೀಚಿನ ದಿನಗಳಲ್ಲಿ ಕನ್ನಡದ ಹೆಸರಿನಲ್ಲಿ ನಡೆಯುವ ಹಲವಾರು ಕಾರ್ಯಕ್ರಮಗಳನ್ನು ನೋಡಿದಾಗ ಗಾಬರಿ ಯಾಗುತ್ತದೆ.

ಕನ್ನಡದ ಭಾಷಾ ಬೆಳವಣಿಗೆಯ ದೃಷ್ಟಿಯಿಂದ ಕರ್ನಾಟಕದಲ್ಲಿ ಸಮಗ್ರ ಯೋಜನೆ ರೂಪಿತವಾಗಿದ್ದರೂ ಕಾರ್ಯಗತಗೊಳಿಸಲು ಇನ್ನೂ ಆಗುತ್ತಿಲ್ಲವೆಂಬುದು ವಿಷಾದನೀಯ. ಕುವೆಂಪು, ದ.ರಾ.ಬೇಂದ್ರೆ, ಶಿವರಾಮ ಕಾರಂತ, ಪು.ತಿ.ನ., ಮಾಸ್ತಿ, ಗೊರೂರು, ಗೋಕಾಕ್, ದೇಜಗೌ ಇವರೆಲ್ಲರೂ ಸಾಹಿತ್ಯದ ಒಂದೊಂದು ಭಾಗವಾಗಿ ನಿಲ್ಲುತ್ತಾರೆ.

ಶಿಕ್ಷಣ ಮತ್ತು ಆಡಳಿತದಲ್ಲಿ ಕನ್ನಡ ಜಾರಿಗೆ ತರುವ ಕುರಿತು ಹತ್ತು ಹಲವು ಸಮಿತಿಗಳು ಹತ್ತಾರು ವರದಿಗಳನ್ನೇ ನೀಡಿವೆ.

ಶಿಕ್ಷಣ ಮಾಧ್ಯಮ ಪೂರ್ಣ ಕನ್ನಡದಲ್ಲಿರಬೇಕು ಎಂಬ ಸರ್ಕಾರದ ಆದೇಶ ೧೯೮೨ರಲ್ಲಿ ಬಂದಿತು. ಪ್ರತಿಯಾಗಿ ಆಂಗ್ಲ ಮಾಧ್ಯಮ ಶಾಲೆಗಳು ಉಚ್ಚ ನ್ಯಾಯಾಲಯದಿಂದ ತಡೆಯಾಜ್ಞೆ ತಂದದ್ದನ್ನು ಈವರೆಗೂ ತೆರವುಗೊಳಿಸಲು ಪ್ರಯತ್ನ ಮಾಡಿಲ್ಲದಿರುವುದು, ಜೊತೆಗೆ ಸರ್ಕಾರದ ಮೇಲೆ ನಿರಂತರ ಒತ್ತಡ ತರುವುದರ ಮೂಲಕ ತನ್ನ ಕರ್ತವ್ಯ, ಜವಾಬ್ದಾರಿ ನಿರ್ವಹಿಸದಿರುವುದು ಶೋಚನೀಯ.

ನಮ್ಮಲ್ಲಿಪ್ರಾಮಾಣಿಕಪ್ರಯತ್ನಕ್ಕಿಂತ ಪ್ರಚಾರಕ್ಕೆ ಹೆಚ್ಚಿನ ಮಹತ್ವ. ಸಾಹಿತ್ಯ ಸಮ್ಮೇಳನಗಳಿಗೆ ಖರ್ಚು ಮಾಡುವ ಹಣ ಎಷ್ಟರ ಮಟ್ಟಿಗೆ ನಾಡು-ನುಡಿಗಳ ಪುರೋಭಿವೃದ್ಧಿಗೆ ಅನುಕೂಲವಾಗಿದೆ ಎನ್ನುವುದನ್ನು ವಿವೇಚಿಸಬೇಕಾಗಿದೆ.

ವೈಯಕ್ತಿಕ ಸಾಹಿತ್ಯ ಕೃತಿ ಮಾಡುವವರಿಗಿಂತ ಕನ್ನಡ ಭಾಷೆ ಸಂಸ್ಕೃತಿಯನ್ನು ಭದ್ರತಳಪಾಯ ಹಾಕಿ ಕಟ್ಟುವ ಇಚ್ಛಾಶಕ್ತಿಯ ನಾಯಕರು ಇಂದಿನ ತುರ್ತು ಅಗತ್ಯವಾಗಿದೆ.

ಕನ್ನಡ ನಾಡು ಸುವರ್ಣ ಮಹೋತ್ಸವ ಆಚರಿಸುತ್ತಿರುವ ಸಂದರ್ಭದಲ್ಲಾದರೂ ಸಮಾಜ, ಸಾಹಿತಿಗಳು ಮತ್ತು ಸರ್ಕಾರ ನ್ಯಾಯಾಲಯದ ತಡೆಯಾಜ್ಞೆಯನ್ನು ತೆರವುಗೊಳಿಸಿ ನಾಡಿನಾದ್ಯಂತ ಏಕರೂಪ ಶಿಕ್ಷಣ ವ್ಯವಸ್ಥೆ ಜಾರಿಗೆ ತಂದಿದ್ದೇ ಆದಲ್ಲಿ ಭಾಷೆ ತನ್ನ ಪಾಡಿಗೆ ತಾನು ಬೆಳೆಯುತ್ತದೆ.

ಎಲ್ಲಕ್ಕಿಂತ ಮೊದಲು ಕನ್ನಡಿಗರಿಗೆ ಕನ್ನಡದಲ್ಲಿ ಸ್ವಚ್ಛವಾಗಿ ಮಾತನಾಡುವ, ತಪ್ಪಿಲ್ಲದೆ ಅರ್ಜಿ ಬರೆಯುವುದನ್ನು ಕಲಿಸಬೇಕಾಗಿದೆ.

ಆಡಳಿತದಲ್ಲಿ ಕನ್ನಡ ಜಾರಿಗೆ ತರದ ಅಧಿಕಾರಿಗಳನ್ನು ದಂಡಿಸುವ ಶಕ್ತಿ ಪ್ರಭುತ್ವಕ್ಕೆ ಇರಬೇಕು. ಕನ್ನಡವನ್ನು ಆಡಳಿತದಲ್ಲಿ ಬಳಸದಿದ್ದರೆ ತಮಗೆ ಉಳಿಗಾಲವಿಲ್ಲವೆನ್ನುವ ಭಯ ಅಧಿಕಾರಿಗಳಲ್ಲಿ ಎಂದು ಬರುತ್ತದೆಯೊ ಅಂದೇ ನಾವು ಆಚರಿಸುತ್ತಿರುವ ಸುವರ್ಣ ಮಹೋತ್ಸವಕ್ಕೆ ಬೆಲೆ ಮತ್ತು ಅರ್ಥ ಬರುತ್ತದೆ.

ಕನ್ನಡಕ್ಕೆ ಕೇಡುಗಾಲ ಬಂದಿದೆ ಎಂಬ ಮಾತು ಇಂದಿನದಲ್ಲ. ಏಕೀಕರಣವಾದಾಗಿನಿಂದಲೂ ಇಂತಹ ಕೂಗು ಕೇಳುತ್ತಲೇ ಇದೆ. ಇಂತಹ ಸಂದರ್ಭದಲ್ಲಿ ವೇದಿಕೆ ಮೇಲಿನಿಂದ ಹೊರಡುವ ಭಾಷಣಗಳೂ ಅದ್ಭುತ. ಕನ್ನಡದ ಪರವಾಗಿ ಮಾತನಾಡುವವರ ಮನೆಯಲ್ಲಿ ಅವರ ಮಕ್ಕಳು, ಮೊಮ್ಮಕ್ಕಳು ಯಾವ ಶಾಲೆಗೆ ಹೋಗುತ್ತಿದ್ದಾರೆ, ಅವರು ಯಾವ ಮಾಧ್ಯಮದಲ್ಲಿ ಓದುತ್ತಿದ್ದಾರೆ ಎಂಬಿತ್ಯಾದಿ ವಿವರಗಳನ್ನು ಕಲೆ ಹಾಕಿ ಅವರ ಮುಖಕ್ಕೆ ಹಿಡಿಯಲಾಗುತ್ತದೆ.

ಕನ್ನಡತನ ಎಂಬುದು ಒಂದು ಭಾಷೆ ಮಾತ್ರವಲ್ಲ. ಅದು ಒಂದು ನೆಲದ ಸಂಸ್ಕೃತಿ. ನಾಡು-ನುಡಿಯನ್ನು ಕಟ್ಟುವವರು ಪರಭಾಷಿಕರ ಮೇಲೆ ಹರಿಹಾಯುವುದನ್ನು ಬಿಟ್ಟು ನಮ್ಮ ಭಾಷೆಯ ಬಗ್ಗೆ ಸ್ವಾಭಿಮಾನ, ಗೌರವ ಮೂಡುವಂತೆ ಕನ್ನಡಿಗರನ್ನು ಉತ್ತೇಜಿಸಬೇಕು.

ಕನ್ನಡದ ಆಸ್ತಿ ಬಿರುದಾಂಕಿತ ಮಾಸ್ತಿ, ವರಕವಿ ಬೇಂದ್ರೆ, ಪು.ತಿ.ನ ಇವರ ಮನೆಭಾಷೆ ಕನ್ನಡವಲ್ಲ ಎಂಬುದನ್ನು ಮರೆಯಬಾರದು. ಕನ್ನಡವನ್ನು ಜನ ಅಪ್ಪಿಕೊಳ್ಳುವಂತೆ, ಒಪ್ಪಿಕೊಳ್ಳುವಂತೆ ಮಾಡಲು ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಅವುಗಳೆಂದರೆ :

ಅ) ಕನ್ನಡದ ಪುಸ್ತಕವೊಂದು ಬಿಡುಗಡೆಗೊಂಡರೆ ಅದನ್ನು ಹಬ್ಬದ ಸಂಭ್ರಮದಲ್ಲಿ ಸ್ವಾಗತಿಸಬೇಕು.

ಆ) ಕನ್ನಡ ಭಾಷೆಯನ್ನು ಸರಕಾರದ ಮಟ್ಟದಲ್ಲಿ ಜೀವನ, ಬದುಕಿನ, ಹೊಟ್ಟೆಪಾಡಿನ ಪ್ರಶ್ನೆಯನ್ನಾಗಿ ಮಾಡಬೇಕು.

ಇ) ಕನ್ನಡದಲ್ಲದೆ ಮತ್ತಾವುದಕ್ಕೂ ಪ್ರಾಶಸ್ತ್ಯ ಸಿಗಲಾರದು ಎಂಬುದು ಎಲ್ಲರಿಗೂ ಮನವರಿಕೆಯಾಗಬೇಕು.

ಈ) ಮಕ್ಕಳು ಯಾವ ಮಾಧ್ಯಮದಲ್ಲಾದರೂ ಓದುತ್ತಿರಲಿ, ಅವರಿಗೆ ಮನೆಯಲ್ಲಿ ಕನ್ನಡ ಪುಸ್ತಕಗಳನ್ನು ಓದಿಸಲು ಪೋಷಕರು ಪ್ರೇರೇಪಿಸಬೇಕು ಅಂತಹ ವಾತಾವರಣವನ್ನು ಪ್ರತಿಯೊಂದು ಮನಯಲ್ಲೂ ಉಂಟುಮಾಡಬೇಕು.

ಉ) ಸುಶಿಕ್ಷಿತರ ಮನೆಯಲ್ಲಿ ಎಲ್ಲರೂ ಕನ್ನಡದಲ್ಲೇ ಮಾತನಾಡುವಂತಾಗಬೇಕು.

ಊ) ನಮ್ಮ ಕಲೆ, ಸಂಸ್ಕೃತಿ, ಸಾಹಿತ್ಯದ ಬಗ್ಗೆ ತಿಳಿ ಹೇಳಬೇಕು.

ಋ) ಶ್ರೀಮಂತ ಪರಂಪರೆಯೊಂದರ ವಾರಸುದಾರರು ನಾವು ಎಂಬ ಹೆಮ್ಮೆ ಮೂಡುವಂತೆ ಕನ್ನಡಿಗರನ್ನು ಬೆಳೆಸಬೇಕು.

* * *

## 'ಕನ್ನಡ'ದ ಬಗೆಗೆ ವಿವಿಧ ಮಹನೀಯರ ಅಭಿಪ್ರಾಯಗಳು

"ಭಾಷೆ ನಾಶದಿಂದ ಸಂಸ್ಕೃತಿ ನಾಶ,
ಸಂಸ್ಕೃತಿ ನಾಶದಿಂದ ದೇಶ ನಾಶ"

**- ದೇ.ಜ.ಗೌ.**

- * * * * * -

"ಕನ್ನಡ ನಾಡಿಗೆ ಕನ್ನಡವೇ ಗತಿ,
ಅನ್ಯಥಾ ಶರಣಂ ನಾಸ್ತಿ,
ಸಂಸ್ಕೃತವಲ್ಲ, ಹಿಂದಿಯಲ್ಲ, ಕನ್ನಡ"

**- ಬಿ.ಎಂ. ಶ್ರೀಕಂಠಯ್ಯ**

- * * * * * -

"ಕನ್ನಡ ಕರ್ನಾಟಕ, ಕನ್ನಡಿಗ
ಇವು ಭಾವೈಕ್ಯದ ಪರಿಣಿತ ಫಲಕಗಳಾಗಬೇಕು.
ಭೇದ ಮುಚ್ಚುವ ಮುಸುಕಾಗಬಾರದು"

**- ಡಾ|| ದ.ರಾ. ಬೇಂದ್ರೆ**

- * * * * * -

II

"ಕನ್ನಡ ಜನ ಉದ್ಧಾರವಾಗುವುದು ಕನ್ನಡದ ಮೂಲಕವೇ. ಕನ್ನಡದ ಕನ್ನಡತನ ಉಳಿಯುವುದಕ್ಕೆ, ಬೆಳೆಯುವುದಕ್ಕೆ ಕನ್ನಡಿಗರು ಮೊದಲು ಸಾಧಿಸಬೇಕಾಗಿರುವುದು ಕನ್ನಡ ಜನರ ಏಕೀಕರಣ" - **ಮಾಸ್ತಿ ವೆಂಕಟೇಶ್ ಅಯ್ಯಂಗಾರ್**

\- * * * * * -

"ನಾವು ಮೊದಲು ಕನ್ನಡಿಗರು, ಅನಂತರ ಭಾರತೀಯರು ಎಂದರೆ ಸ್ವಾಭಾವಿಕ ಕಾರ್ಯ ಸಾಧ್ಯ" - **ಎ. ಆರ್. ಕೃಷ್ಣಶಾಸ್ತ್ರಿ**

\- * * * * * -

"ಕನ್ನಡಕ್ಕಾಗಿ ಕೈಯೆತ್ತು ನಿನ್ನ ಕೈ ಕಲ್ಪವೃಕ್ಷವಾಗುತ್ತದೆ, ಕನ್ನಡಕ್ಕಾಗಿ ಕಿರು ಬೆರಳೆತ್ತಿದರೂ ಸಾಕು ಅದು ಗೋವರ್ಧನ ಗಿರಿಯಾಗುತ್ತದೆ" - **ಡಾ|| ಕೆ.ವಿ. ಪುಟ್ಟಪ್ಪ (ಕುವೆಂಪು)**

\- * * * * * - * * * * * -

III

"ಕನ್ನಡ ಜನರ ಪಾಲಿಗೆ ಅದು ಕನ್ನಡ, ಅದೊಂದೇ . ಇಂಗ್ಲೀಷ್ ಅಲ್ಲ, ಹಿಂದಿ ಅಲ್ಲ, ಕನ್ನಡ ಜನಕ್ಕೆ ಕನ್ನಡವೊಂದೇನೆ"

**- ಡಾ|| ಕೆ. ಶಿವರಾಮ ಕಾರಂತ.**

- * * * * * -

"ಹೊಸ ಕನ್ನಡ ನಾಡಿನಲ್ಲಿ ಸ್ವರ್ಣಯುಗವಿಳಿದು ಮೊಳಗೀತು ವಿಜಯದಂದು ಅದಕ್ಕಾಗಿ ಬಾಳೋಣ ಅದಕ್ಕಾಗಿ ತಾಳೋಣ ಮಂಥನದ ನಂಜನಿಂದು" - **ಡಾ|| ವಿ. ಕೃ. ಗೋಕಾಕ್**

- * * * * * -

"ಕನ್ನಡ | ಕನ್ನಡ | ಹಾ, ಸವಿಗನ್ನಡ |
ಕನ್ನಡದಲ್ಲಿ ಹರಿ ಬರೆಯುವನು |
ಕನ್ನಡದಲ್ಲಿ ಹರಿ ತಿರಿಯುವನು|
ಕನ್ನಡದಲ್ಲಿಯೆ ಬಿನ್ನಹಗೈದೊಡೆ
ಹರಿವರಗಳ ಮಳೆ ಕರೆಯುವನು|
ಹರ ಮುನಿಯದೆ ತಾ ಹೊರೆಯುವನು"

**- ಕುವೆಂಪು**

- * * * * * -

"ಕನ್ನಡಕ್ಕೆ ಎಷ್ಟು ಜ್ಞಾನಪೀಠ ಪ್ರಶಸ್ತಿಗಳು ಬಂದಿದ್ದರೂ,
ಕನ್ನಡ ಸಾಹಿತ್ಯ ಸಮ್ಮೇಳನವನ್ನು ಎಷ್ಟು ವಿಜೃಂಭಣೆಯಿಂದ ನಾವು ಆಚರಿಸಿದರೂ,
ಜನ ಬಳಸುವುದನ್ನು ನಿಲ್ಲಿಸುತ್ತಿದ್ದಂತೆಯೇ
ಆ ಭಾಷೆಯ ಅವಸಾನ ಶುರುವಾಗುತ್ತದೆ.
ಇದಕ್ಕೆ ಸಂಸ್ಕೃತದ ಜ್ವಲಂತ ಉದಾಹರಣೆ
ನಮ್ಮ ಕಣ್ಣೆದುರೇ ಇದೆ."

**- ಕೆ. ಪಿ. ಪೂರ್ಣಚಂದ್ರ ತೇಜಸ್ವಿ**

- ******-

"ಕನ್ನಡ ನೆಲ-ನುಡಿ ಈಗ ಹೊಸ ಥರದ ಸವಾಲುಗಳನ್ನು ಎದುರಿಸಬೇಕಾಗಿದೆ.
ಕೇವಲ ಭಾವುಕ ಕನ್ನಡ ಪ್ರೇಮದಿಂದ ಏನೂ ಆಗಲಾರದು.
ಕನ್ನಡ ಎಂದರೆ ಈ ನೆಲದ ಜನ,
ಅವರ ತಲ್ಲಣ-ಕನಸು-ಸಂಕಟಗಳಿಗೆ ಮಿಡಿಯದೆ
ಕೇವಲ ಭಾವೋದ್ವೇಗದಿಂದ ಏನೂ ಕೈಗೂಡದು"

**- ಕ್ಷಮತಾ ಕೌಜಲಗಿ**

"ಕಾವೇರಿಯಿಂದುಮಾ ಗೋ
ದಾವರಿವರಮಿರ್ದಾ ನಾಡದಾ ಕನ್ನಡದೊಳ್
ಭಾವಿಸಿದ ಜನಪದರಿಂ ವಸು
ಧಾವಳಯ ವಿಲೀನ ವಿಷದ ವಿಷಯ ವಿಶೇಷಂ"

-ಶ್ರೀ ವಿಜಯ

IV

"ಕನ್ನಡದ ನೆಲದ ಪುಲ್ಲೆನಗೆ ಪಾವನ ತುಲಸಿ!
ಕನ್ನಡದ ನೆಲದ ನೀರ್ವೋನಲೆನಗೆ ದೇವನದಿ!
ಕನ್ನಡದ ನೆಲದ ಕಲ್ಲೆನಗೆ ಶಾಲಗ್ರಾಮ ಶಿಲೆ !
ಕನ್ನಡ ದೈವ"

**- ಸಾಲಿ ರಾಮಚಂದ್ರರಾಯ**

- ****** -

"ಕರ್ನಾಟಕ ಏಕೀಕರಣದ ಕಲ್ಪನೆಗೆ ಚಾಲನೆ ನೀಡಿದವರು
'ಕನ್ನಡ ಕುಲ ಪುರೋಹಿತ'
ಆಲೂರು ವೆಂಕಟರಾಯರು"

**- ಸೂರ್ಯನಾಥ ಕಾಮತ್**

- ****** -

"ಕನ್ನಡ ಕೇವಲ ವ್ಯಾವಹಾರಿಕವಾಗಿ ಉಳಿದರೆ ಸಾಲದು"

**- ಡಾ. ಚಂದ್ರಶೇಖರ ಕಂಬಾರ**

V

"ಕನ್ನಡದ ಪರಂಪರೆಯ ಬಗ್ಗೆ ಯಾವ ವಿಶ್ವಾಸವೂ ಇಲ್ಲದವರಿಂದ
ಬೆಲೆಯುಳ್ಳದ್ದು ಅಥವಾ ಬಾಳುವಂತದ್ದು ಹುಟ್ಟದೇ ಹೋಗಬಹುದೇನೋ
ಎನ್ನುವ ಆತಂಕ ನನಗಿದೆ.
ಈ ನನ್ನ ಭಯಕ್ಕೆ ಮುಖ್ಯ ಕಾರಣವೆಂದರೆ
ಆಧುನಿಕತೆಯ ಸ್ವರೂಪವೇ ಈ ಹತ್ತು ವರ್ಷಗಳಲ್ಲಿ
ಸಂಪೂರ್ಣ ಬದಲಾಗಿ ಬಿಟ್ಟಿರುವುದು"

**ಜ್ಞಾನಪೀಠ ಪ್ರಶಸ್ತಿ ವಿಜೇತ ಸಾಹಿತಿ**
**- ಡಾ. ಯು. ಆರ್. ಅನಂತಮೂರ್ತಿ**

– * * * * * * –

"ಸುಲಿದ ಬಾಳೆಯ ಹಣ್ಣಿನಂದದಿ
ಕಳಿದ ಸಿಗುರಿನ ಕಬ್ಬಿನಂದದಿ
ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ
ಲಲಿತವಹ ಕನ್ನಡದ ನುಡಿಯಲಿ
ತಿಳಿದು ತನ್ನೊಳು ತನ್ನ ಮೋಕ್ಷವ
ಗಳಿಸಿಕೊಂಡರೆ ಸಾಲದೇ ಸಂಸ್ಕೃತ ಕಲಿತನ್ನೇನು"

**-ಮಹಲಿಂಗ ರಂಗ**

– * * * * * * –

"ಕನ್ನಡಕ್ಕೆ ಈಗ ಹೆಚ್ಚು ಅವಕಾಶಗಳು ತೆರೆದುಕೊಳ್ಳುತ್ತಿವೆ.
ಈಗ ಬಾಗಿಲು ಮುಚ್ಚುವುದು ಆತ್ಮಹತ್ಯಾಕಾರಿ ಆದೀತು"

**-ಗಿರೀಶ್ ಕಾರ್ನಾಡ್**

– * * * * * * –

VI

"ಕನ್ನಡವೆಂದರೆ ತಾಯಿಯೆ ದೇವಿಯೆ
ನಾನೂ ನೀನೂ ಅವರು
ಜನಮನದೊಳಗುದಿ ತುಡಿತ ಕಡಿತಗಳ
ಪ್ರತಿಕೃತಿ ನೂರಾರು"
**- ಎಂ. ಗೋಪಾಲಕೃಷ್ಣ ಅಡಿಗ**

– * * * * * * –

"ಪಲವುಂ ನಾಲಗೆಯುಳ್ಳವಂ ಬಗೆವೊಡೆಂದು ಬಣ್ಣಿಸಲ್ಕಾರನಾ
ನೆಲನಂ ಮುತ್ತಿನ ಮನಾನಿಸರ್ ಪೊಗಳೆಲೇನಂ ಬಲ್ಲರೆಂಬೊಂದುಬ
ಲ್ಲುಲಿಯಂ ನೆಟ್ಟನೆ ತಾಳ್ದು ಕನ್ನಡ ಮೆನಿಪ್ಪಾನಾಡು ಚೆಲ್ವಾಯ್ತುಮೆ
ಲ್ಲೆಲರಿಂ ಪೂತ ಕೊಳಂಗಳಿಂ ಕೆರೆಗಳಿಂ ಕಾಲೂರ್ಗಲಿಂ ಕಯ್ಗಳಂ"
**- ಆಂಡಯ್ಯ**

– * * * * * * –

"ಕನ್ನಡದಲ್ಲಿ ವಿದ್ವಾಂಸರ ಅಧ್ಯಯನಕ್ಕೆ ಬೇಕಾದ ಪುಸ್ತಕಗಳು ಬಹಳಷ್ಟಿದ್ದರೂ
ಸಾಹಿತ್ಯ ಪ್ರವೇಶ ಮಾಡುವವರಿಗೆ ಅಗತ್ಯವಾದ ಪುಸ್ತಕಗಳು ಹೆಚ್ಚಿನ ಸಪ್ಲೈಯಲ್ಲಿಲ್ಲ."
**- ಪ್ರೊ. ಬರಗೂರು ರಾಮಚಂದ್ರಪ್ಪ**

– * * * * * * –

# ಕನ್ನಡದ ಪ್ರಥಮಗಳು

| | |
|---|---|
| ಉಪಲಬ್ಧ ಕೃತಿ | ಕವಿರಾಜ ಮಾರ್ಗ |
| ಶಾಸನ | ಹಲ್ಮಿಡಿ ಶಾಸನ |
| ಕವಿ | ಪಂಪ |
| ಆಗಮಿಕ ಕಾವ್ಯ | ಆದಿಪುರಾಣ |
| ಲೌಕಿಕ ಕಾವ್ಯ | ವಿಕ್ರಮಾರ್ಜುನ ವಿಜಯ |
| ಜೈನ ರಾಮಾಯಣ | ರಾಮಚಂದ್ರ ಚರಿತ್ರೆ |
| ಕೃತಿ | ವಡ್ಡಾರಾಧನೆ |
| ಷಟ್ಪದಿ ಕಾವ್ಯ | ಹರಿಶ್ಚಂದ್ರ ಕಾವ್ಯ |
| ರಾಜ | ಮಯೂರ ವರ್ಮ |
| ಕವಯತ್ರಿ | ಅಕ್ಕಮಹಾದೇವಿ |
| ಸಾಮಾಜಿಕ ಕಾದಂಬರಿ | ಮಾಡಿದ್ದುಣ್ಣೋ ಮಹಾರಾಯ |
| ಮನೋವೈಜ್ಞಾನಿಕ ಕಾದಂಬರಿ | ಅಂತರಂಗ |
| ಪತ್ತೆದಾರಿ ಕಾದಂಬರಿ | ಚೋರಗ್ರಾಹಣ ತಂತ್ರ |
| ಮಹಮ್ಮದೀಯ ಕವಿ | ಸಂತ ಶಿಶುನಾಳ ಷರಿಫ್ |
| ಗಾತ ನಾಟಕ | ಮುಕ್ತದ್ವಾರ |
| ಪಂಪ ಪ್ರಶಸ್ತಿ | ಕುವೆಂಪು |
| ಜಮ್ನಾಲಾಲ್ ಪ್ರಶಸ್ತಿ | ತಗಡೂರು ರಾಮಚಂದ್ರರಾವ್ |
| ಫಾಲ್ಕೆ ಪ್ರಶಸ್ತಿ | ಡಾ. ರಾಜಕುಮಾರ್ |

# ಪರಾಮರ್ಶನ ಗ್ರಂಥಗಳು


೧ *ಮೈಸೂರು ಮಲ್ಲಿಗೆ*
(ನವೆಂಬರ್-೨೦೦೫)
ಕರ್ನಾಟಕ ರಾಜ್ಯೋತ್ಸವ
ವಿಶೇಷ ಪುರವಣಿ
ಸಂಪಾದಕರು- ಮೂಗೂರು
ನಂಜುಡಸ್ವಾಮಿ

* * *

೨ *ಸಂಕ್ರಮಣ ಮಾರ್ಚ್ ೨೦೦೯*
ಸಂಪಾದಕರು - ಚಂದ್ರಶೇಖರ ಪಾಟೀಲ್
ಪ್ರಕಾಶಕರು - ಸಂಕ್ರಮಣ ಪ್ರಕಾಶನ
ಬೆಂಗಳೂರು.

* * *

೩ *ಪ್ರತಿಭಾ (ವಾರ್ಷಿಕ ಸಂಚಿಕೆ)*

* * *

೪) *ವಿವೇಕ ಪ್ರಭ (ಮಾರ್ಚ್-೨೦೦೪)*

* * *

೫ *ಕರ್ನಾಟಕ ಸಂಪದ*
ಕನ್ನಡ ಸಾಹಿತ್ಯ ಪರಿಷತ್ತು ಸಂಚಿಕೆ
ಪ್ರಧಾನ ಸಂಪಾದಕರು- ಡಾ. ಟಿ. ವಿ. ವೆಂಕಟಾಚಲಶಾಸ್ತ್ರಿ
ಮುದ್ರಣ-ಕನ್ನಡ ಸಾಹಿತ್ಯ ಪರಿಷತ್ತು

# ಪರಾಮರ್ಶನ ಗ್ರಂಥಗಳು


೬ *ಭಾಷೆ ರಚನೆ ಬಳಕೆ*

ಪ್ರಕಾಶಕರು - ತಳುಕಿನ ವೆಂಕಣ್ಣಯ್ಯ
ಸ್ಮಾರಕ ಗ್ರಂಥಮಾಲೆ
ಸಂಪಾದಕರು- ಸೋಮಶೇಖರ ಗೌಡ

* * *

೭ *ಕರ್ನಾಟಕ ಸಿರಿ*

ಸಂಪಾದಕರು-ಎಂ. ಎಸ್. ವೆಂಕಟಸುಬ್ಬ
ಪ್ರಕಾಶಕರು- ನಾಗಶ್ರೀ ಪ್ರಕಾಶನ, ಇಟ್ಟಿಗೆಗೂಡು

* * *

೮. *ಮಾನವ ಮಿತ್ರ ಗಣಕ*

ಸಂಪಾದಕರು- ಜಿ. ವಿ. ನಿರ್ಮಲ ಹಾಗೂ ಎಸ್. ಕ್ಷಮಾ
ಪ್ರಕಟಣೆ- ಕನ್ನಡ ಸಾಹಿತ್ಯ ಪರಿಷತ್ತು

* * *

೯. *ಪುಸ್ತಕ ಪ್ರಪಂಚ (ನವೆಂಬರ್-೨೦೦೦)*

ಪ್ರಕಟಣೆ- ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ

* * *

೧೦. *ಸುವರ್ಣ ಶಿಕ್ಷಣ*

ಸುವರ್ಣ ಮಹೋತ್ಸವ ಸಂಚಿಕೆ (ವಿದ್ಯಾವರ್ಧಕ ಕಾಲೇಜು)
ಸಂಪಾದಕರು- ಡಾ|| ಸಿ. ಪಿ. ಕೆ. ಹಾಗೂ ಶಿವರಾಮ ಕಾಡನಕುಪ್ಪೆ
ಪ್ರಕಟಣೆ- ವಿದ್ಯಾವರ್ಧಕ ಸಂಘ

# ಪರಾಮರ್ಶನ ಗ್ರಂಥಗಳು

೧೧. **ನವಮಿ**
ಮೈಸೂರು ದಸರಾ ಮಹೋತ್ಸವ ಸವಿಸಂಚಿಕೆ
ಪ್ರಧಾನ ಸಂಪಾದಕರು-ಡಾ. ರಾಮೇಗೌಡ
ಮುದ್ರಣ- ಗುಡ್-ಟಚ್ ಪ್ರಿಂಟರ್ಸ್

* * *

೧೨. **ಕನ್ನಡ ಭಾಷಾಲೋಚನ**
ಸಂಪಾದಕರು- ಡಾ. ಸಿ. ಎಸ್, ರಾಮಚಂದ್ರ
ಪ್ರಕಾಶಕರು- ಯಾದವಗಿರಿ ಪ್ರಕಾಶನ

* * *

೧೩. **ಭಾಷೆ**
ಸಂಪಾದಕರು- ಶಾಲಿನಿ ರಘುನಾಥ
ಮುದ್ರಣ- ಮೈಸೂರು ವಿಶ್ವವಿದ್ಯಾಲಯ

* * *

೧೪. **ದಿನಪತ್ರಿಕೆಗಳು -ಪ್ರಜಾನುಡಿ (೨೯/೧೧/೨೦೦೩)**
ಆಂದೋಲನ (೧೧/೧೧/೨೦೦೩)

* * *

೧೫. **ವಾರಪತ್ರಿಕೆ - ಮೈಸೂರು ಪ್ರಜೆ**
ಸಂಪಾದಕರು - ಕೆ. ಎಸ್. ಶ್ರೀರಂಗರಾಜು
ಮುದ್ರಣ - ನಾಗಲಕ್ಷ್ಮಿ ಉದ್ಯಮ ಮುದ್ರಣ

# ವಕ್ತೃಗಳ ಪರಿಚಯ ಪಟ್ಟಿ

| ಕ್ರ. ಸಂ | ಹೆಸರು | ಸ್ಥಳ | ವಯಸ್ಸು | ವೃತ್ತಿ |
|---|---|---|---|---|
| ೧ | ಮಲ್ಲರಾಜ ಅರಸ್ | ಗೋಕುಲಂ | ೪೨ | ಕಾರ್ಮಿಕ ಮುಖಂಡರು |
| ೨ | ಅಂಬುಜ | ಬನ್ನಿಮಂಟಪ | ೩೩ | ಶಿಕ್ಷಕಿ |
| ೩ | ಮಹದೇವ | ಕೆ. ಆರ್. ವೃತ್ತ | ೨೯ | ಖಾಸಗಿ ಉದ್ಯೋಗಿ |
| ೪ | ಬಿ. ಎಸ್. ನಾಗರಾಜು | ಬಿಳಿಗಿರಿ ರಂಗನಬೆಟ್ಟ | ೪೫ | ಅರ್ಚಕರು |
| ೫ | ರಾಧಾಕೃಷ್ಣ | ಜಯನಗರ | ೨೯ | ಶಿಕ್ಷಕ |
| ೬ | ನಿರ್ಮಲ | ಕುವೆಂಪುನಗರ | ೫೨ | ಸಮಾಜಸೇವಕರು |
| ೭ | ರಮಾಮಣಿ | ಜೆ. ಪಿ. ನಗರ | ೭೧ | ಗೃಹಿಣಿ |
| ೮ | ರಾಜೇಶ್ ಜೈನ್ | ಶ್ರವಣಬೆಳಗೋಳ | ೭೭ | ಲೇಖಕರು |
| ೯ | ಸಾರಾ. ಸುದರ್ಶನ್ | ರಾಮಕೃಷ್ಣನ ನಗರ | ೫೧ | ಬರಹಗಾರರು |
| ೧೦ | ಡಿ. ಮಾದೇಗೌಡ | ಕುಂಬಾರಕೊಪ್ಪಲು | ೭೦ | ಮಾಜಿ ಶಾಸಕರು |